# ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು

(ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಮಹಾಪ್ರಬಂಧ)

ಸಂಶೋಧಕರು
ಎನ್.ಡಿ. ತಿಪ್ಪೇಸ್ವಾಮಿ

ಮಾರ್ಗದರ್ಶಕರು
ಡಾ. ವಿಠಲರಾವ್ ಟಿ. ಗಾಯಕ್ವಾಡ್
ಪ್ರಾಧ್ಯಾಪಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ.
ವಿದ್ಯಾರಣ್ಯ - 583 276

2007

# ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು

(ಪಿಹೆಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಮಹಾಪ್ರಬಂಧ)

ಸಂಶೋಧಕರು

**ಎನ್.ಡಿ. ತಿಪ್ಪೇಸ್ವಾಮಿ**



ಮಾರ್ಗದರ್ಶಕರು

**ಡಾ. ವಿಠಲರಾವ್ ಟಿ. ಗಾಯಕ್ವಾಡ್**

ಪ್ರಾಧ್ಯಾಪಕರು





ಭಾಷಾಂತರ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಿದ್ಯಾರಣ್ಯ - 583 276

2007

# ದೃಢೀಕರಣ ಪತ್ರ

ಶ್ರೀ ಎನ್.ಡಿ. ತಿಪ್ಪೇಸ್ವಾಮಿ, ಇವರು ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

Gaikwad

**ಡಾ. ವಿಠಲರಾವ್ ಟಿ. ಗಾಯಕ್ವಾಡ್**
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ದಿನಾಂಕ:** 18 : 12 : ೨೦೦೭

**ಸ್ಥಳ:** ವಿದ್ಯಾರಣ್ಯ.

# ಘೋಷಣಾ ಪತ್ರ

**"ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು"** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ವಿಠಲರಾವ್ ಟಿ. ಗಾಯಕ್ವಾಡ್, ಭಾಷಾಂತರ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.



ದಿನಾಂಕ: ೧೬ : ೧೨ : ೨೦೦೭

ಸ್ಥಳ: ವಿದ್ಯಾರಣ್ಯ

ಎನ್.ಡಿ. ತಿಪ್ಪೇಸ್ವಾಮಿ
ಸಂಶೋಧಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಪರಿವಿಡಿ

ಅಧ್ಯಾಯ೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಪುಟ: ೧-೭

ಅಧ್ಯಾಯ೨. ಹರಿಹರನ ರಗಳೆಗಳಲ್ಲಿ ಸಂಘರ್ಷಗಳ ಸ್ವರೂಪ ಪುಟ: ೮-೬೯

೨.೧. ಸಂಘರ್ಷದ ಅರ್ಥ, ವ್ಯಾಖ್ಯಾನ

೨.೨. ಭಕ್ತ, ಭಕ್ತರ ನಡುವಿನ ಸಂಘರ್ಷ

೨.೩. ಜೈನರು ಮತ್ತು ಶಿವಭಕ್ತರ ನಡುವಿನ ಸಂಘರ್ಷ

೨.೪. ವೈಷ್ಣವರು ಮತ್ತು ಶಿವಭಕ್ತರ ನಡುವಿನ ಸಂಘರ್ಷ

೨.೫. ಅರ್ಥ ಸಂಘರ್ಷ

ಅಧ್ಯಾಯ೩. ಶೈವ ಚಳವಳಿ ಮತ್ತು ಹರಿಹರ ಪುಟ: ೭೦-೧೧೩

೩.೧. ಚಳವಳಿ ಇತಿಹಾಸ- ಧಾರ್ಮಿಕ, ಸಾಮಾಜಿಕ, ರಾಜಕೀಯ ಸಂದರ್ಭ,

೩.೨. ತಮಿಳುನಾಡಿನ ಶೈವ ಪಂಥಗಳು- ನಾಯನ್ಮಾರರು, ಅಳ್ವಾರರು, ನಾಯನ್ಮಾರರು ತಿರುಮೂಲರ್, ಅಪ್ಪರ್, ತಿರುಜ್ಞಾನ ಸಂಬಂಧರ್, ಸುಂದರರ್, ಮಾಣಿಕ್ಯವಾಚಗರ್, ನಂಬಿಯಾಂಡರ್ ನಂಬಿ, ಶೇಕ್ಕಿಳಾರ್.

೩.೩. ತ್ರಿಷಷ್ಠಿ ಪುರಾತನರು.

೩.೪. ತಮಿಳು ಶೈವ ಸಿದ್ಧಾಂತ

ಅಧ್ಯಾಯ೪. ಹರಿಹರನ ರಗಳೆಗಳಲ್ಲಿ ಸಾಮಾಜಿಕ, ಧಾರ್ಮಿಕ, ಪ್ರಭುತ್ವದ ಸಂಘರ್ಷ ಪುಟ: ೧೧೪-೧೯೨

೪.೧. ಸಾಮಾಜಿಕ- ವರ್ಗ, ವರ್ಣ, ವೃತ್ತಿ, ಭಕ್ತಿ, ಭವಿ, ಹೊಲೆಯ, ಅಸ್ಪೃಶ್ಯ, ಬ್ರಾಹ್ಮಣರು, ಸಂಸ್ಕಾರಗಳು, ಜಾತಕರ್ಮ, ನಾಮಕರಣ, ಮುಂಜಿವೆ, ಉಪನಯನ, ದೀಕ್ಷೆ, ವಿವಾಹ, ಅಂತ್ಯ ಸಂಸ್ಕಾರ, ಮದುವೆಸಮಾರಂಭ, ದಾಸ-ದಾಸಿ, ತೊತ್ತು ಸಾಂಪ್ರದಾಯಿಕ ಅಂಶಗಳು.

೪.೨. **ಧಾರ್ಮಿಕ** – ಧರ್ಮದ ಅರ್ಥ, ವ್ಯಾಖ್ಯಾನ, ವೈವಿಧ್ಯಮಯ ಶಿವಭಕ್ತರು; ಕಲಿಕಾಮದೇವರ , ರಗಳೆ, ಇಳೆಯಾಂಡ ಗುಡಿಮಾರ, ನಂದಿಯ ಮೊಗವಾಡ, ವೇಷಭೂಷಣ, ಲಿಂಗದೀಕ್ಷೆ, ಶಿವವ್ರತಗಳು, ಲಿಂಗಮೌಲ್ಯ ಪ್ರಕಾರಗಳು, ಸಾಮೂಹಿಕ ಲಿಂಗಾರ್ಚನೆ, ವೈಯಕ್ತಿಕ ಲಿಂಗಾರ್ಚನೆ.

೪.೩. **ವೀರಶೈವರ ಆಚಾರಗಳು**– ಬಸವಣ್ಣ, ಮಹಾದೇವಿಯಕ್ಕ, ಮಾರುಡಿಗೆ ನಾಚಿತಂದೆ ಆಚಾರಗಳು, ಭಕ್ತರ ಬಲಿದಾನ ಮರಣಗಳು.

೪.೪. **ಶೈವೇತರ ಧರ್ಮಗಳು**– ಜೈನಧರ್ಮ, ವೈಷ್ಣವಧರ್ಮ ಬೌದ್ಧ ಮತ್ತಿತರ ಧರ್ಮಗಳು.

೪.೫. **ಸಂಘರ್ಷಗಳು**– ಹೋರಾಟದ ಮನೋಧರ್ಮ, ಹೋರಾಟದ ಸ್ವರೂಪ, ಆಂತರಿಕ ಹೋರಾಟ, ಸ್ವ ಸಮುದಾಯಿಕ ಹೋರಾಟ.

೪.೬. **ಪ್ರಭುತ್ವದ ಸಂಘರ್ಷ**– ಬಿಜ್ಜಳ–ಬಸವಣ್ಣ, ಅಕ್ಕಮಹಾದೇವಿ–ಕೌಶಿಕ, ಚಂದಿಮರಸ ಕೆಂಭಾವಿ ಭೋಗಣ್ಣ, ಇರಿಭಕ್ತಯ್ಯ– ಪಗಲ್ಚೋಳ, ಕೇಶಿರಾಜ– ಪೆರ್ಮಾಡಿರಾಯ ಇತ್ಯಾದಿ.

**ಅಧ್ಯಾಯ೫.** **ಹರಿಹರನ ರಗಳೆಗಳಲ್ಲಿ ಸ್ತ್ರೀಪರ ಧೋರಣೆಗಳು ಮತ್ತು ಹೋರಾಟದ ಭೂಮಿಕೆ.** **ಪುಟ: ೧೯೩–೨೪೬**

೫.೧. **ಬಾಲಕಿಯರು**– ಕೋಳೂರು ಕೊಡಗೂಸು, ನಿಂಬಿಯಕ್ಕ, ತಿರುಮುಡಿ ಯೊಡೆಯೊಳು, ಚೋಳಿಯಕ್ಕ.

೫.೨. **ಪ್ರಿಯತಮೆಯರು**–ಮಲುಹಣಿ, ಕಾಮಲತೆ, ಪದ್ಮಾವತಿ, ಪರವಿನಾಚೆ, ಸಂಕಿಲಿನಾಚೆ.

೫.೩. **ಗೃಹಿಣಿಯರು**– ವೈಜಕವ್ವೆ, ದುಗ್ಗವ್ವೆ, ಶಿವದಾಸಿಯರು, ಹಿರಿಯ ಲಕ್ಕಾದೇವಿ, ಚಿಕ್ಕಲಕ್ಕಾದೇವಿ, ಗಂಗಾಂಬೆ, ಮಾಯಿದೇವಿ, ಪಾಂಡ್ಯ ಮಹಾದೇವಿ, ಮುತ್ತೈದೆ, ಇಳೆಯಾಂಡ ಗುಡಿಮಾರನ ಪತ್ನಿ, ಪತಿಹಿತವೆ ಮತ್ತು ಅಮರ ನೀತಿಗಳ ಪತ್ನಿ.

೫.೪. **ಮಾತೆಯರು**– ಮಾದಾಂಬೆ, ಯಸ್ಯಜ್ಞಾನದೇವಿಯರು, ಪದ್ಮಾವತಿ.

೫.೫. ವಿಧವೆ ಮತ್ತು ವಿರಾಗಿಣಿ– ಬಿಜ್ಜಮಹಾದೇವಿ, ಹೇರೂರು. ಹೆಂಗೂಸು,
ಕರಿಕಾಲೆಮ್ಮೆ, ಅಕ್ಕಮಹಾದೇವಿಯರು.
೫.೬. ಸ್ತ್ರೀಪರ ಹೋರಾಟದ ಭೂಮಿಕೆ.

ಅಧ್ಯಾಯ ೬: ಉಪಸಂಹಾರ ಪುಟ: ೨೪೭–೨೫೬
ಅನುಬಂಧ
ಸಹಾಯಕ ಗ್ರಂಥಗಳು

ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರಾಚೀನ ಕನ್ನಡ ಸಾಹಿತ್ಯ ಪ್ರಧಾನವಾಗಿ ಪುರುಷರ, ಪುರೋಹಿತರ, ಪಂಡಿತರ ಬರವಣಿಗೆಯಾಗಿರುವುದರಿಂದ ಅದು ಸಾಮಾನ್ಯವಾಗಿ ವ್ಯವಸ್ಥೆಯನ್ನು ಪ್ರತಿಪಾದಿಸುವ ಧ್ವನಿಯಾಗಿದೆ. ಇದರ ಮಧ್ಯೆ ವಚನ ಸಾಹಿತ್ಯ ಮಾತ್ರ ವ್ಯವಸ್ಥೆಯನ್ನು ಪ್ರತಿಭಟಿಸುವ ಏಕೈಕ ಸಾಮೂಹಿಕ ಧ್ವನಿಯಾಗಿ ಕಂಡು ಬರುತ್ತಿದೆ. ಇದನ್ನು ಬಿಟ್ಟರೆ ಪ್ರತಿಭಟನೆಗೆ ಸಂಬಂಧಿಸಿದಂತೆ ಹರಿಹರ, ಸರ್ವಜ್ಞರದು 'ವೈಯಕ್ತಿಕ ಧ್ವನಿ'ಯಾಗಿ, ಪಂಪಾದಿಗಳದು 'ಪ್ರಾಸಂಗಿಕ ಧ್ವನಿ'ಯಾಗಿ ಕಾಣಿಸುತ್ತದೆ.

ಯುಗಕ್ಕೆ ತಕ್ಕಂತೆ ಕಾವ್ಯದ ಧೋರಣೆಯ ಹಾಗೆ ವಿಮರ್ಶಾ ಧೋರಣೆಯು ಬದಲಾಗುತ್ತದೆ. ಈ ನಿಯಮದಂತೆ ಕನ್ನಡದಲ್ಲಿ ನವೋದಯ, ಪ್ರಗತಿಶೀಲ, ನವ್ಯವೆಂದು ವಿಮರ್ಶೆಯ ದೃಷ್ಟಿಕೋನಗಳು ಬದಲಾಗುತ್ತ ಬಂದರೂ ಹರಿಹರನ ಸಾಹಿತ್ಯವನ್ನು ಮಾತ್ರ ಮೊದಲಿನಿಂದಲೂ ಒಂದೇ ದೃಷ್ಟಿಯಿಂದ ವಿಮರ್ಶಿಸುತ್ತ ಬರಲಾಗಿದೆ. ಪ್ರಾರಂಭದ ನವೋದಯ ವಿಮರ್ಶಕರು ಅವರನ್ನು 'ಭಕ್ತ ಕವಿ' ಎಂದು ಬಹಳವೆಂದರೆ ಅವನು ಬರವಣಿಗೆಯಲ್ಲಿ ಕೆಲವು ಮಾರ್ಪಾಡು ಮಾಡಿದನೆಂದು ಗುರುತಿಸಿದ್ದಾರೆ. ಬಹುತೇಕ ಎಲ್ಲರೂ ಹೀಗೆ ಮಾಡಿರುವುದರಿಂದ ಆತನ ಇತರ ಆಯಾಮಗಳು ಉಪೇಕ್ಷೆಗೆ ಒಳಗಾಗಿವೆ.

ಹರಿಹರ ಶೈವ ಕವಿಯಾಗಿರುವುದರಿಂದ ವೀರಶೈವ ಶರಣರ ಚರಿತ್ರೆಗೆ ಅವನಿಂದ ಅನ್ಯಾಯವಾಗಿದೆ ಎಂದು ಕೆಲವು ವೀರಶೈವ ವಿದ್ವಾಂಸರೂ ಅವರನ್ನು ಅನಾದರದಿಂದ ಕಾಣುತ್ತಾರೆ. ಹೀಗಾಗಿ ಆ ಕಡೆಗೆ ವಿಮರ್ಶಕರಿಂದಲೂ, ಈ ಕಡೆಗೆ ವೀರಶೈವರಿಂದಲೂ ಅವನು ಅನ್ಯಾಯ ಕ್ಕೊಳಗಾದವನಾಗಿದ್ದಾನೆ. ಇದರಿಂದ ಈತನ ಸಾಹಿತ್ಯದ ವಿಶಿಷ್ಟತೆಗೆ ಮಹತ್ವ ಬರಬೇಕಾದರೆ ಇನ್ನು

ಹೆಚ್ಚಿನ ಸಂಶೋಧನೆಗಳು ನಡೆಯಬೇಕಿದೆ. ಈ ದಿಸೆಯಲ್ಲಿ ಕರ್ನಾಟಕದಲ್ಲಿ ರಾಘವಾಂಕನೊಂದಿಗೆ ಆರಂಭಗೊಂಡ ಹರಿಹರನ ಜೀವನ ಚರಿತ್ರೆ, ವ್ಯಕ್ತಿ ವಿಶೇಷತೆ, ಕಾವ್ಯ ವಿಮರ್ಶೆಗಳ ಅಧ್ಯಯನ ಇತ್ತೀಚಿನವರೆಗೂ ವಿಸ್ತಾರಗೊಳ್ಳುತ್ತ ಸಾಗಿದೆ. ಅವನ ಕೃತಿಗಳ ಸಂಪಾದನೆ, ಪ್ರಕಟಣೆ, ಅನೇಕ ಆವೃತ್ತಿಗಳಾಗಿ ಬೆಳೆದುಕೊಂಡಿವೆ, ಹರಿಹರನ ರಗಳೆ, ಶತಕ, ಕಾವ್ಯಗಳ ಗಮಕ ವಾಚನಗಳು ಅಲ್ಲಲ್ಲಿ ಜರುಗತ್ತ ಬಂದಿವೆ. ವಿದ್ವಾಂಸರಂತೂ ಲೇಖನ, ಗ್ರಂಥಗಳ ಮೂಲಕ, ಪಿಹೆಚ್.ಡಿ. ಅಧ್ಯಯನದ ಮೂಲಕ, ಉಪನ್ಯಾಸ, ವಿಶೇಷೋಪನ್ಯಾಸ, ವಿಚಾರ ಸಂಕಿರಣಗಳ ಮೂಲಕ ಈ ಕವಿಯನ್ನು ಅರ್ಥಮಾಡಿಕೊಳ್ಳಲು, ಅರ್ಥೈಸಿಕೊಳ್ಳಲು ಉದ್ದಕ್ಕೂ ಪ್ರಯತ್ನಿಸಿದ್ದಾರೆ.

'ಹರಿಹರನ ರಗಳೆಗಳು' ಹೆಸರಿನಿಂದ ಡಾ.ಫ.ಗು.ಹಳಕಟ್ಟಿಯವರು ರಗಳೆ ಸಾಹಿತ್ಯವನ್ನು ಪ್ರಕಟಿಸಿ ಈ ಕವಿಯ ಅಧ್ಯಯನಕ್ಕೆ ಸಾಮಗ್ರಿ ಒದಗಿಸಿಕೊಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಪ್ರಕಟವಾದ ಮೌಲ್ಯವುಳ್ಳ ವಿಮರ್ಶಾ ಗ್ರಂಥವೆಂದರೆ ಕೊಲ್ಲಾಪುರದ ರಾಜಾರಾಮ ಕಾಲೇಜು ಪ್ರಕಟಿಸಿದ "ಹರಿಹರದೇವ" ಹೆಸರಿನ ಕೃತಿ. ಬಳಿಕ ಡಿ.ಎಲ್.ನರಸಿಂಹಚಾರ್ ಹರಿಹರನ ರಗಳೆಗಳಲ್ಲಿ ಜೀವನ ದರ್ಶನ' ಟಿ.ಎಸ್.ವೆಂಕಣ್ಣಯ್ಯನವರು ಸಂಪಾದಿಸಿದ ಹರಿಹರ ಕವಿಯ "ಬಸವರಾಜ ದೇವರ ರಗಳೆ' ಈ ಗ್ರಂಥಗಳು ಹರಿಹರನನ್ನು ವ್ಯಾಪಕವಾಗಿ ಪರಿಚಯಿಸಿಕೊಟ್ಟವು.

ಅದೇ ರೀತಿ ಡಾ. ಹಿರೇಮಲ್ಲೂರು ಈಶ್ವರನ್ ಅವರು ಹರಿಹರನ ರಗಳೆಗಳಲ್ಲಿ ಒಂದು ಸಂಖ್ಯಾ ನಿರ್ಣಯ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪಿಹೆಚ್.ಡಿ ಮಾಡಿ ಈ ಕವಿಯ ಅಭ್ಯಾಸಕ್ಕೆ ಒಂದು ಹೊಸ ಆಯಾಮ ನೀಡಿದ್ದಾರೆ. ನಂತರ ಡಾ.ಬಿ.ಬಿ.ಹೆಂಡಿಯವರು "ಹರಿಹರ ಕವಿಯ ವ್ಯಕ್ತಿತ್ವ ಕವಿತ್ವ" ಎಂಬ ವಿಷಯ ಕುರಿತು ಪಿಹೆಚ್.ಡಿ ಅಧ್ಯಯನ ಮಾಡಿ ಈ ಕವಿಯ ವಿಭಿನ್ನ ನೆಲೆಗಳನ್ನು ತೆರೆದು ತೋರಿಸಿದ್ದಾರೆ. ಡಾ.ಕೆ.ಪಿ. ಮಹಾದೇವಯ್ಯ ಅವರ 'ಹರಿಹರನ ರಗಳೆಗಳ ಸಾಹಿತ್ಯಕ ಅಧ್ಯಯನ" ಎಂಬ ವಿಷಯದ ಮೇಲೆ ಪಿಹೆಚ್.ಡಿ, ಡಾ.ಬಿ.ಸಿ. ಜವಳಿಯವರ 'ಹರಿಹರನ ಸ್ತ್ರೀ ಪಾತ್ರಗಳು", ಡಾ.ಸದಾನಂದ ಪಾಟೀಲ ಅವರ ಹರಿಹರನ ರಗಳೆಗಳು ಒಂದು ಸಾಂಸ್ಕೃತಿಕ ಅಧ್ಯಯನ, ಡಾ.ಎನ್.ಎಸ್.ತಾರಾನಾಥ ಅವರ ನಂಬಿಯಣ್ಣ; ಒಂದು ತೌಲನಿಕ ಅಧ್ಯಯನ", ಡಾ. ಸಂಗಮೇಶ ಸವದತ್ತಿಯ ಮಠ ಅವರ HARIHARA'S RAGALESA, LINGUSTIC ANALYSIS, ಡಾ. ಎಂ.ಎಸ್.ವಿಠ್ಠೆ ಅವರ ಮಹಾದೇವಿಯಕ್ಕ ಮತ್ತು ಕಾರಿಕಾಲಮ್ಮೆ ಒಂದು ತೌಲನಿಕ ಅಭ್ಯಾಸ, ಡಾ.ಸುಶೀಲ ಎಸ್. ನರಕೆ ಅವರ ಮೋಳಿಗೆ ಮಾರಯ್ಯ ಮತ್ತು ಮಹಾದೇವಿಯಮ್ಮ ಒಂದು ಅಧ್ಯಯನ ಎಂಬ ವಿಷಯದ ಮೇಲೆ ಪಿಹೆಚ್.ಡಿ ಮಹಾಪ್ರಬಂಧಗಳು ಹರಿಹರನ ಕಾವ್ಯಗಳ ಅಧ್ಯಯನದ ಇನ್ನು ಬೇರೆ ಕ್ಷೇತ್ರಗಳನ್ನು ಪರಿಚಯಿಸಿದವು.

ಹೀಗೆ ಬಿಚ್ಚಿಕೊಂಡ ಅಧ್ಯಯನದ ದಾರಿಯಲ್ಲಿ ಶ್ರೀ ಎಚ್.ದೇವಿರಪ್ಪ ಅವರ "ಹಂಪೆಯ ಹರಿಹರ" ಡಾ.ಎಸ್.ವಿದ್ಯಾಶಂಕರ ಅವರ ನಂಬಿಯಣ್ಣ ಒಂದು ಅಧ್ಯಯನ" ಮೊದಲಾದ ಕೃತಿಗಳು ಕಾಣಿಸಿಕೊಂಡಿವೆ.

ಈ ಅವಧಿಯಲ್ಲಿ ಡಾ.ಆರ್.ಸಿ. ಹಿರೇಮಠ, ಡಾ.ಎಂ.ಎಸ್. ಸುಂಕಾಪುರ ಅವರು ಹರಿಹರನ ಸಮಗ್ರ ರಗಳೆಗಳ ಸಾಹಿತ್ಯವನ್ನು ಹೆಚ್.ದೇವೀರಪ್ಪನವರು" ಶರಣ ಚರಿತ ಮಾನಸಂ" ಎಂಬ ಹೆಸರಿನಲ್ಲಿ ರಗಳೆಗಳನ್ನು ಪರಿಷ್ಕರಿಸಿ ಪ್ರಕಟಿಸಿದರು. ಈ ಎಲ್ಲ ಪ್ರಯತ್ನಗಳಿಗೆ ಪೂರಕವಾಗಿ ಅನೇಕ ಜನ ವಿದ್ವಾಂಸರು ವಿಚಾರ ಸಂಕಿರಣಗಳಲ್ಲಿ ಮಂಡಿಸಿ, ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟಿಸಿದ ಲೇಖನಗಳಿಗೆ ಲೆಕ್ಕವೇ ಇಲ್ಲ. ಆದರೆ ನವೋದಯ ಪರಂಪರೆಯಲ್ಲಿ ಬೆಳೆದ ಈ ಲೇಖಕರ ಸಾಂಪ್ರಾಯಿಕ ಮನೋಭಾವದ ಮೇಲೆ ವಿವೇಚಿಸಿದ ಅವರ ಗ್ರಂಥ, ಲೇಖನಗಳಲ್ಲಿ ವ್ಯಕ್ತಗೊಂಡಿದೆ.

ಇದರಿಂದಾಗಿ ಹರಿಹರನ ಕಾವ್ಯ ಕ್ಷಿತಿಜ ಹೊಸ ವಲಯಗಳಲ್ಲಿ ಬಿಚ್ಚಿಕೊಳ್ಳದೆ ಹೋಯಿತು. ಅಂದರೆ ಇದರಲ್ಲಿ ಹರಿಹರನನ್ನು ಭಕ್ತಕವಿ, ರಸಜ್ಞ, ರಮ್ಯ ಕವಿಯೆಂದು ಗುರುತಿಸುತ್ತ ಬಂದಿದ್ದಾರೆ. ನವೋದಯ ಪರಂಪರೆಯ ಲೇಖಕರಿಗೆ ಹರಿಹರನು ಭಕ್ತಕವಿ ರೂಪದಲ್ಲಿ ಅಪೇಕ್ಷಿತ ಕವಿಯಾಗಿದ್ದರೆ, ಪವಾಡ ಮತ್ತು ಪೌರಾಣಿಕ ಅಂಶಗಳಿಂದಾಗಿ ನವ್ಯ, ಬಂಡಾಯ, ದಲಿತ ಪರಂಪರೆಯ ಲೇಖಕರಿಗೆ ಉಪೇಕ್ಷಿತ ಕವಿಯೆನಿಸಿದನು. ಈ ಎರಡು ಬಗೆಯ ಅಭ್ಯಾಸಗಳಿಂದಾಗಿ ಹರಿಹರನ ಹೋರಾಟ ಮನೋಧರ್ಮ ಮತ್ತು ಅವನ ಸಾಹಿತ್ಯದ ಸಂಘರ್ಷಾತ್ಮಕ ಅಧ್ಯಯನಗಳಿಗೆ ನ್ಯಾಯಸಿಗಲಿಲ್ಲವೆಂದೇ ಹೇಳಬೇಕು.

## ಅಧ್ಯಯನದ ಉದ್ದೇಶ:

೧೨-೧೩ನೇ ಶತಮಾನದಲ್ಲಿ ಸಮಾಜ ವ್ಯವಸ್ಥೆಯ ಸಂಘರ್ಷದ ನಿಲುವುಗಳಿಗೆ ಛಾಪು ಒತ್ತಿದ ಹರಿಹರನ ನ್ನು ಕುರಿತಂತೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಮಗ್ರ ಅಧ್ಯಯನವಾಗಿಲ್ಲ. ಆದ್ದರಿಂದ. ಈ ಮಹಾ ಪ್ರಬಂಧದಲ್ಲಿ ಆ ಪ್ರಯತ್ನ ಮಾಡಲಾಗಿದೆ. ಹತ್ತು ಹಲವು ಕಾರಣಕ್ಕಾಗಿ ಸಮಾಜದಲ್ಲಿ ಕನಿಷ್ಠರು ಎಂದು ಕರೆಯಲ್ಪಟ್ಟವರನ್ನೇ ತನ್ನ ಕೃತಿಯ ನಾಯಕರನ್ನಾಗಿಸಿಕೊಂಡು ಅವರಲ್ಲಿ ಶ್ರೇಷ್ಠತೆ ಗುರುತಿಸಿದ. ಈ ಹಿನ್ನೆಲೆಯನ್ನು ಅಧಾರವಾಗಿಟ್ಟುಕೊಂಡು ಹರಿಹರನ ಅಧ್ಯಯನ ತೀವ್ರ ಅಗತ್ಯವೆನಿಸಿದ್ದ ಕಾರಣಕ್ಕಾಗಿ ಅವನ ಕೆಲವು ರಗಳೆಗಳನ್ನು ಪ್ರಾತಿನಿಧಿಕವಾಗಿಟ್ಟು ಕೊಂಡು ಪ್ರತಿಭಟನೆಯ ಕಾರಣ ಹಾಗೂ ಅವುಗಳಲ್ಲಿ ವ್ಯವಸ್ಥೆಯ ಸಂಘರ್ಷದ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಒಂದಿಲ್ಲೊಂದು ಕಾರಣಕ್ಕೆ ಹರಿಹರನು ಆಧುನಿಕ ಕನ್ನಡ ಸಾಹಿತ್ಯದ ದಲಿತ, ಬಂಡಾಯ ಚಳವಳಿಯ ಪ್ರಕಾರಕ್ಕೆ ಗುರುವಾಗಿರಲು ಅಥವಾ ಮಾರ್ಗದರ್ಶಕನಾಗಿರಲು ಸಾಧ್ಯವೇ ಎಂಬ ಪ್ರಶ್ನೆಯನ್ನು ಕಂಡುಕೊಳ್ಳಬಯಸಲಾಗಿದೆ. ಈ ಕಾರಣಕ್ಕಾಗಿ ಹರಿಹರನನ್ನೇ ಮುಖ್ಯವಾಗಿಟ್ಟುಕೊಂಡು ಅವನ ಸಾಹಿತ್ಯ ಕೃಷಿಯ ವಿಶಿಷ್ಟವಾದ ರಗಳೆಗಳಲ್ಲಿ ಸಂಘರ್ಷದ ನೆಲೆಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ.

ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡಿರುವ ಹರಿಹರನನ್ನು ವ್ಯಕ್ತಿ ಹಾಗೂ ವ್ಯಕ್ತಿತ್ವದ ನೆಲೆಯಲ್ಲಿ ಅಧ್ಯಯನ ಮಾಡುವ ಕಡೆಗೆ ಗಮನಹರಿಸಬೇಕಿದೆ. ಅಲ್ಲದೆ ೧೨ನೇ ಶತಮಾನದ ಶರಣರು ಹೂಡಿದ ಬದುಕು, ರೂಪಿಸಿದ ಮಾರ್ಗ, ನಂಬಿದ ಮೌಲ್ಯ ಹಾಗೂ ಮಾಡಲೇ ಬೇಕಾದಂತಹ ಸಂಘರ್ಷಗಳನ್ನು ಬಹು ಹತ್ತಿರದಿಂದ ಕೇಳಿ ತಿಳಿದಾತ ಹರಿಹರ. ಹಾಗಾಗಿ ಆತ ಬರೆದ ಬಹುತೇಕ ರಗಳೆಗಳು ೧೨ನೇ ಶತಮಾನದ ಮೌಖಿಕ ಚರಿತ್ರೆಯಾಗಿವೆ. ಶಿವಶರಣರು ಮತ್ತು ಅರಸರ ನಡುವೆ ಸಂಭವಿಸಿದ ಸಂಘರ್ಷಗಳನ್ನು ಬಹು ಸಾಚಾತನದಿಂದ ಕಟ್ಟಿಕೊಡುವ ಇಂತಹ ರಗಳೆಗಳನ್ನು ಬಹುಶಿಸ್ತೀಯ ದೃಷ್ಟಿಕೋನಕ್ಕೆ ಅಳವಡಿಸಿ ವಿಶ್ಲೇಷಿಸಿ, ವ್ಯಾಖ್ಯಾನಿಸುವ ಉದ್ದೇಶ ಹೊಂದಲಾಗಿದೆ.

ಪ್ರಸ್ತುತ ಸನ್ನಿವೇಶದಲ್ಲಿ ಈಗಾಗಲೇ ಮೇಲಿಂದ ಮೇಲೆ ಚರ್ಚೆಯಾಗುತ್ತಲೇ ಇರುವ ಹರಿಹರನ ಕಾಲ ದೇಶದ ವಿಚಾರಗಳು, ಮತಧರ್ಮದ ವಿಚಾರಗಳು, ತೌಲನಿಕವಾದ ವಿಚಾರಗಳು ಅಧ್ಯಯನದ ವ್ಯಾಪ್ತಿಗೆ ಬರುವುದಿಲ್ಲ. ಕೆಳಸ್ತರದ ಅನೇಕ ಶಿವಶರಣರನ್ನು ಹರಿಹರ ತನ್ನ ರಗಳೆಗಳಿಗೆ ಕಥಾನಾಯಕ, ನಾಯಕಿಯರನ್ನಾಗಿ ಮಾಡಿಕೊಳ್ಳುವ ಮೂಲಕ ಹೊಸ ಧೋರಣೆಯೊಂದನ್ನು ಮೊದಲ ಬಾರಿಗೆ ಬೇಡರ ಕಣ್ಣಪ್ಪ, ಮಾದರ ಚೆನ್ನಯ್ಯ, ತೆಲುಗು ಜೊಮ್ಮಯ್ಯ, ಸುರಗಿ ಚೌಡಯ್ಯ ನಂತಹ ದಲಿತರು, ಹೇರೂರು ಹೆಣ್ಣು ವೈಜಕವ್ವೆ, ನಿಂಬಿಯಕ್ಕ, ಅಕ್ಕಮಹಾದೇವಿಯಂತಹ ಸ್ತ್ರೀಯರು, ಕೊಂಡಗುಳಿ ಕೇಶಿರಾಜ, ಬಾಗೇವಾಡಿ ಬಸವಣ್ಣನಂತಹ ಪ್ರಗತಿಪರ ಪುರುಷರನ್ನು ಚಿತ್ರಿಸಿರುವ ವ್ಯಕ್ತಿತ್ವದ ನೆಲೆಗಳು ನಮಗೆ ಬಹಳ ವಿಶಿಷ್ಟವಾಗಿ ಎದ್ದು ಕಾಣುತ್ತವೆ. ಮೂಲತಃ ಇದು ಶರಣರ ನೆಲೆಯಾದರೂ ಇದನ್ನು ಹೇಗೆ ಪ್ರತಿಪಾದಿಸಿದ ಎಂಬುದನ್ನು ನೋಡಬಹುದು.

## ಅಧ್ಯಯನದ ವ್ಯಾಪ್ತಿ:

ಹರಿಹರನ ರಗಳೆಗಳಲ್ಲಿ ಸಂಘರ್ಷಾತ್ಮಕ ಪ್ರಸಂಗಗಳನ್ನು ಕುರಿತಂತೆ ಅಧ್ಯಯನ ಮಾಡುತ್ತಿರುವ ಈ ಸಂದರ್ಭದಲ್ಲಿ ಹರಿಹರ ಬರೆದಿದ್ದಾನೆಂದು ಹೇಳಲಾದ ಸುಮಾರು ನೂರ ಆರು ರಗಳೆಗಳನ್ನು ಅಧ್ಯಯನದೊಳಗೆ ತರಬೇಕೆಂಬುದಾಗಲೀ ಅಥವಾ ಪ್ರತಿಯೊಂದು ರಗಳೆಗಳನ್ನು ವಿಮರ್ಶಾತ್ಮಕವಾಗಿ

ಅಧ್ಯಯನ ಮಾಡಬೇಕೆಂಬ ಉದ್ದೇಶವಾಗಲೀ ಈ ಮಹಾ ಪ್ರಬಂಧದಲ್ಲಿ ಇಲ್ಲ. ಬದಲಾಗಿ ಯಾವ ರಗಳೆಗಳು ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳ ದೃಷ್ಟಿಯಿಂದ ಪ್ರಮುಖ ಎಂದು ಕಂಡು ಬರುತ್ತವೆಯೋ ಅಂಥ ರಗಳೆಗಳನ್ನು ಮಾತ್ರ ವಿಶೇಷವಾಗಿ ಅಧ್ಯಯನ ಮಾಡುವ ಪ್ರಯತ್ನ ಮಾಡಲಾಗಿದೆ. ಇನ್ನುಳಿದ ರಗಳೆಗಳನ್ನು ಅಧ್ಯಯನಕ್ಕೆ ಅನಿವಾರ್ಯ ಅಥವಾ ಉಚಿತ ಎನ್ನುವ ಸಂದರ್ಭಗಳಲ್ಲಿ ಮಾತ್ರ ಬಳಸಿಕೊಳ್ಳಲಾಗಿದೆ. ಈ ಎಲ್ಲ ತಿಳಿವಳಿಕೆಗಳ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ರಗಳೆಗಳು ಈ ಕೆಳಗಿನಂತಿವೆ.

೧. ಕೇಶಿರಾಜ ದಣ್ಣಾಯಕರ ರಗಳೆ

೨. ತೆಲುಗು ಜೊಮ್ಮಯ್ಯನ ರಗಳೆ

೩. ಬಾಹೂರ ಬೊಮ್ಮಿ ತಂದೆ ರಗಳೆ

೪. ಮಾರುಡಿಗೆ ನಾಚಿತಂದೆ ರಗಳೆ

೫. ಕೆಂಭಾವಿ ಭೋಗಣ್ಣನ ರಗಳೆ

೬. ಶಂಕರದಾಸಿಮಯ್ಯನ ರಗಳೆ

೭. ಬಸವೇಶ್ವರ ದೇವರ ರಗಳೆ

೮. ಆದಯ್ಯನ ರಗಳೆ

೯. ಕೋವೂರ ಬೊಮ್ಮಿ ತಂದೆ ರಗಳೆ

೧೦. ಹಾವಿನ ಹಾಳ ಕಲ್ಲಯ್ಯನ ರಗಳೆ

೧೧. ಏಕಾಂತರಾಮಿ ತಂದೆ ರಗಳೆ

೧೨. ಮಾದರ ಚೆನ್ನಯ್ಯನ ರಗಳೆ

೧೩. ಕೋಳೂರು ಕೊಡಗೂಸಿನ ರಗಳೆ

೧೪. ನಿಂಬಿಯಕ್ಕನ ರಗಳೆ

೧೫. ವೈಜಕವ್ವೆಯ ರಗಳೆ

೧೬. ಕಾರಿಕಾಲಮ್ಮೆಯರ ರಗಳೆ

೧೭. ಹೇರೂರು ಹೆಣ್ಣಿನ ರಗಳೆ

೧೮. ಅಕ್ಕಮಹಾದೇವಿ ರಗಳೆ

೧೯. ರೇವಣಸಿದ್ಧೇಶ್ವರನ ರಗಳೆ

೨೦. ಕುಂಬಾರ ಗುಂಡಯ್ಯನ ರಗಳೆ

೨೧. ಬೇಡರ ಕಣ್ಣಪ್ಪನ ರಗಳೆ

೨೨. ಇಹಃಪಗೆಯಾಂಡರ ರಗಳೆ

೨೩. ಇರಿಭಕ್ತಯ್ಯನ ರಗಳೆ

೨೪. ಕಡವೂರ ಕಾರಿಯರ ರಗಳೆ

೨೫. ಅತಿಭಕ್ತನ ರಗಳೆ

೨೬. ಉದ್ಭಟಯ್ಯನ ರಗಳೆ

೨೭. ಸಾಮವೇದಿ ರಗಳೆ

೨೮. ಮಲುಹಣನ ರಗಳೆ

೨೯. ವರಕೃತಾಂತ ರಗಳೆ

೩೦. ಪಾಂಡ್ಯ ಮಹಾದೇವಿ ರಗಳೆ

೩೧. ಸುರಗಿಯ ಚೌಡಯ್ಯನ ರಗಳೆ

ಮಹಾ ಪ್ರಬಂಧದ ಅಧ್ಯಯನದ ವ್ಯಾಪ್ತಿಗೆ ಈ ಎಲ್ಲಾ ರಗಳೆಗಳೊಂದಿಗೆ ಸಾಂದರ್ಭಿಕವಾಗಿ ಹರಿಹರನ ಇತರ ರಗಳೆಗಳನ್ನೂ ಇಲ್ಲಿ ಬಳಸಿಕೊಳ್ಳಲಾಗಿದೆ. ಮೇಲೆ ಸೂಚಿಸಿದ ರಗಳೆಗಳಲ್ಲಿ ಚಿತ್ರಣಗೊಂಡ ಶಿವಭಕ್ತರ ಕಾಲದ ಸಂಘರ್ಷ ಮತ್ತು ಸಾಮಾಜಿಕ, ಧಾರ್ಮಿಕ ಪ್ರಭುತ್ವ, ಆರ್ಥಿಕ ಸಂಘರ್ಷಗಳು ಈ ಪ್ರಬಂಧದ ಹರಹು. ಅಲ್ಲದೆ ಹರಿಹರನ ವ್ಯಕ್ತಿತ್ವದ ಅಧ್ಯಯನಕ್ಕಾಗಿ ಶೈವ, ವೀರಶೈವ, ವೀರಶೈವದ ಪ್ರಾಚೀನತೆ ಕುರಿತು ಚರ್ಚಿಸಲಾಗಿದೆ. ಶೈವ ಚಳವಳಿ ಬಗ್ಗೆಯೂ ಪ್ರಸ್ತಾಪಿಸಲಾಗಿದೆ. ವಸ್ತು ಐತಿಹಾಸಿಕವಾಗಿ ಎಷ್ಟೇ ಪ್ರಾಚೀನವಾಗಿದ್ದರೂ ಕವಿಯ ಸಮಕಾಲೀನ ಬದುಕೇ ಒಂದಿಷ್ಟು ಪಾತ್ರಗಳಿಗೆ ಅಂಟಿರುತ್ತದೆ. ಹೀಗಾಗಿ ಇದು ಕವಿಯ ವಾಸ್ತವ ಚಿತ್ರಣವೂ ಆಗುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು. ಒಟ್ಟಾರೆ ಸಂಘರ್ಷಕ್ಕೆ ಸಂಬಂಧಿಸಿದಂತೆ ವಿಸ್ತೃತವಾಗಿ ಆರು ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ – ೨

# ಹರಿಹರ ರಗಳೆಗಳಲ್ಲಿ ಸಂಘರ್ಷಗಳ ಸ್ವರೂಪ

**ಪೀಠಿಕೆ:**

ಸಂಘರ್ಷವು ಮಾನವ ಸ್ವಭಾವ ಜನ್ಯವಾದುದು, ಆದ್ದರಿಂದ ಅದು ಸಾರ್ವತ್ರಿಕ ಸ್ವರೂಪದ್ದಾಗಿದೆ. ಸಂಘರ್ಷದ ಅರಿವಿರದ ಸಮಾಜವೇ ಜಗತ್ತಿನಲ್ಲಿಲ್ಲ ಎನ್ನಬಹುದು. ಕಾರ್ಲ್‌ಮಾರ್ಕ್ಸ್‌ನಂತೂ ಇದುವರೆಗಿನ ಮಾನವ ಸಮಾಜದ ಇತಿಹಾಸವು ವರ್ಗ ಸಂಘರ್ಷದ ಇತಿಹಾಸವೇ ಆಗಿದೆ ಎಂದಿರುತ್ತಾನೆ. ಪಾರ್ಕ್ ಮತ್ತು ಬರ್ಗೆಸ್ ಎಂಬ ಸಮಾಜಶಾಸ್ತ್ರಜ್ಞರ ಪ್ರಕಾರ ಸಂಘರ್ಷವು ಪ್ರಜ್ಞಾಪೂರ್ವಕ ಕ್ರಿಯೆಯಾಗಿದ್ದು, (CONNSCIOUS ACTION) ಆಳವಾದ ಭಾವನೆಗಳನ್ನು ಮತ್ತು ಬಲವಾದ ಭಾವೋದ್ವೇಗಗಳನ್ನು ಹೊಂದಿರುತ್ತದೆ"[೧] ಆದಾಗ್ಯೂ ಸಹಕಾರ ಮತ್ತು ಸ್ಪರ್ಧೆಗಳಂತೆ ಸಂಘರ್ಷವು ನಿರಂತರವಾದ ಕ್ರಿಯೆಯಾಗಿರದೆ ಆಗಾಗ್ಗೆ ಸಂಭವಿಸುವಂತಹ ಕ್ರಿಯೆಯಾಗಿರುತ್ತದೆ. ಸ್ಪರ್ಧೆಯಲ್ಲಿ ಕಾಣುವಂತೆ ಉದ್ದೇಶ ಅಥವಾ ಗುರಿಯನ್ನು ತಲುಪಬೇಕೆಂಬ ಇಚ್ಛೆಗಿಂತಲೂ ಇಲ್ಲಿ ಎದುರಾಳಿಗೆ ಹಾನಿಯನ್ನುಂಟು ಮಾಡುವುದೇ ಮುಖ್ಯ ಉದ್ದೇಶವಾಗಿದೆ. ಈ ದೃಷ್ಟಿಯಿಂದ ಸಂಘರ್ಷವು ವೈಯಕ್ತಿಕ ಸ್ವರೂಪದ ಕ್ರಿಯೆಯಾಗಿದೆ.

ಸಂಘರ್ಷವು ಸಾಂಸ್ಕೃತಿಕ ಚೌಕಟ್ಟೊಂದರಲ್ಲಿ ನಡೆಯುವುದರಿಂದ ಅದರ ಪ್ರಭಾವಕ್ಕೆ ಒಳಗಾಗಿರುವುದು ಸಹಜ. ಸಂಘರ್ಷವು ಉಗ್ರ ಸ್ವರೂಪ ತಳೆದಾಗ ನಿಯಮಗಳನ್ನು ಬದಿಗೊತ್ತಿ ಮುನ್ನಡೆಯುವುದಿದ್ದರೂ ಚಿಕ್ಕಪುಟ್ಟ ಸಂಘರ್ಷಗಳು ಹೆಚ್ಚಿನ ಸಂದರ್ಭದಲ್ಲಿ ನಿಯಮಗಳ ವ್ಯಾಪ್ತಿಯಲ್ಲಿಯೇ ನಡೆಯುತ್ತಿವೆ. ಸ್ಪರ್ಧೆಯು ವ್ಯಕ್ತಗತ ಮಟ್ಟದಿಂದ ಕುಟುಂಬ, ಸಮೂಹ, ಸಮುದಾಯ ಹಾಗೂ ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟಗಳಲ್ಲೂ ಕಾಣಬಹುದು. ಯಾವುದೇ ಮಟ್ಟದಲ್ಲಿ,

ಯಾವುದೇ ರೂಪದಲ್ಲಿ ಅದು ನಡೆಯುವುದಿದ್ದರೂ ಸಂಘರ್ಷದ ಹಿನ್ನೆಲೆಯಲ್ಲಿ ಆಶಾಭಂಗತೆ, ಅಭದ್ರತೆ, ಅತೃಪ್ತಿ-ಅಸಮಾಧಾನಗಳು ಅಪ್ರಕಟವಾಗಿ ಅಥವಾ ಪ್ರಕಟವಾಗಿ ಸೇರಿಕೊಂಡಿರುತ್ತವೆ ಎನ್ನಬಹುದು.

**ಸಂಘರ್ಷದ ಅರ್ಥ**

ಸಂಘರ್ಷ ಎಂಬುದು ಆಂಗ್ಲ ಭಾಷೆಯ (Conflict) ಎಂಬ ಪದದಿಂದ ಬಂದಿದೆ. ಸಂಘರ್ಷವು ಸಹಕಾರ ತತ್ವಕ್ಕೆ ವಿರುದ್ಧವಾಗಿರುವ ತತ್ವವಾಗಿದೆ. ಜನರ ಅಭಿಪ್ರಾಯ, ಆದರ್ಶಗಳು, ಆಸಕ್ತಿಗಳು, ಆಚರಣೆಗಳು, ನಂಬಿಕೆಗಳು ಹಾಗೂ ಆಚಾರ, ವಿಚಾರ ವ್ಯವಹಾರಗಳಲ್ಲಿ ಭಿನ್ನತೆಯು ತೀವ್ರವಾಗಿ ಪರಸ್ಪರ ವಿರೋಧಾತ್ಮಕವಾದಾಗ ಘರ್ಷಣೆಯ ಸಂಭವಿಸುತ್ತದೆ.

"ಮಾರ್ಕ್ಸ್‌ನ ಪರಿಭಾಷೆಯಲ್ಲಿ ಹೇಳುವುದಿದ್ದರೆ ವ್ಯಕ್ತಿಗಳ ಅಥವಾ ಸಮೂಹಗಳ ನಡುವಿನ ಆಸಕ್ತಿಗಳು ಯಾವಾಗ ಪರಸ್ಪರ ವಿರುದ್ಧವಾಗುತ್ತವೆಯೋ ಆಗ ಸ್ಪರ್ಧೆ ಅನಿವಾರ್ಯವಾಗುವುದು. ಉದಾ: ಹೆಚ್ಚಿನ ವೇತನ, ಉತ್ತಮ ಕಾರ್ಮಿಕ ಸೌಲಭ್ಯಗಳು ಕಾರ್ಮಿಕ ಹಿತಾಸಕ್ತಿಯಾದರೆ ಇವುಗಳಿಗೆ ವಿರುದ್ಧವಾಗಿ ಎಂಬಂತೆ ಆದಷ್ಟು ಹೆಚ್ಚು ಲಾಭ ಗಳಿಸುವುದು ಬಂಡವಾಳ ಶಾಹಿಗಳ ಆಸಕ್ತಿಯಾಗಿರುವುದು ಅಂತೆಯೇ ಅವರುಗಳ ನಡುವೆ ಸದಾ ಸಂಘರ್ಷವಿದ್ದೇ ಇದೆ ಎನ್ನುತ್ತಾನೆ."೨. ಮಾರ್ಕ್ಸ್.

೧. "ಬೇರೆಯವನ ಅಥವಾ ಬೇರೆಯವರ ಇಚ್ಛೆಯನ್ನು ಉದ್ದೇಶ ಪೂರ್ವಕವಾಗಿ ವಿರೋಧಿಸುವ, ಪ್ರತಿಭಟಿಸುವ ಅಥವಾ ಒತ್ತಾಯ ಪೂರ್ವಕವಾಗಿ ಹತ್ತಿಕ್ಕುವ ಪ್ರಯತ್ನವಾಗಿದೆ.- ಎ.ಡಬ್ಲ್ಯೂ ಗ್ರೀನ್.

೨. "ಎದುರಾಳಿಗಳನ್ನು ದುರ್ಬಲಗೊಳಿಸುವ ಅಥವಾ ನಾಶಪಡಿಸುವುದರ ಮೂಲಕ ಪ್ರತಿಫಲಗಳ ಮೇಲೆ ಏಕಸ್ವಾಮ್ಯವನ್ನು ಸ್ಥಾಪಿಸುವ ಪ್ರಕ್ರಿಯೆಯೇ ಸಂಘರ್ಷವಾಗಿದೆ. ಹಾರ್ಟನ್ ಮತ್ತು ಹಂಟ್ ಜರ್ಮನ್ ಶಾಸ್ತ್ರಜ್ಞ ಜಾರ್ಜ್ ಸಿಮೆಲ್ಲನ (George Simmel) ಪ್ರಕಾರ ಸಂಘರ್ಷದಲ್ಲಿ ನಾಲ್ಕು ಪ್ರಕಾರಗಳಿವೆ. ೧. ಉದಾ: ಎರಡು ದೇಶಗಳ ಅಥವಾ ರಾಷ್ಟ್ರ ಸಮುದಾಯಗಳ ನಡುವೆ ಸಂಭವಿಸಬಹುದಾದ ಘೋರ ರೂಪದ ಮತ್ತು ಭಾರೀ ಹಾನಿಯನ್ನುಂಟು ಮಾಡಬಹುದಾದ ಸಂಘರ್ಷ.

**೨. ಪಕ್ಷ ವೈಷಮ್ಯ ಅಥವಾ ಅಂತಃಕಲಹ: (Feud of Factioral Strife):–**

ಇದು ಸಮೂಹದೊಳಗಣ ಘರ್ಷಣೆ ಕೆಲವು ವ್ಯಕ್ತಿಗಳು ಅಥವಾ ಚಿಕ್ಕ ಗುಂಪೊಂದು ತಮಗೆ ಅನ್ಯಾಯವಾಗಿದೆ ಎಂದುಕೊಂಡು ತಮ್ಮ ಸಮೂಹದ ವಿರುದ್ಧವೇ ಬಂಡೇಳಬಹುದು.

**೩. ದಾವೆ ಅಥವಾ ಮೊಕದ್ದಮೆ: (Litigation):–**

ಇದು ಒಂದು ಬಗೆಯ ಕಾನೂನಿನ ಹೋರಾಟ. ನ್ಯಾಯಕ್ಕಾಗಿ ನಡೆಯುವ ಕಾನೂನುಬದ್ಧ ಹೋರಾಟವಿದು.

**೪. ಅವೈಯಕ್ತಿಕ ಆದರ್ಶಗಳ ಸಂಘರ್ಷ: (Conflict of impersonal):–**

ಇದು ವೈಯಕ್ತಿಕ ಕಾರಣಗಳಿಗಿಂತಲೂ ಕೆಲವು ತತ್ವಗಳಿಗಾಗಿ, ಆದರ್ಶಗಳಿಗಾಗಿ ನಡೆಯುವ ಹೋರಾಟ.

**ಉದಾ:–** ಪ್ರಜಾಪ್ರಭುತ್ವ, ಸಾಮ್ಯವಾದ ತತ್ವಗಳ ಸಮರ್ಥಕರ ನಡುವಿನ ಸಂಘರ್ಷ.ಸಂಘರ್ಷವು ವಿವಿಧ ಜಾತಿಗಳ, ವರ್ಣಗಳ, ವರ್ಗಗಳ, ಸಮುದಾಯಗಳ, ರಾಷ್ಟ್ರಗಳ ನಡುವೆ ನಡೆಯಬಹುದಾದ ಒಂದು ಉದ್ಯಮವಾಗಿರುತ್ತದೆ. ಸಂಘರ್ಷವು ಜೀವನದ ಒಂದು ಅನಿವಾರ್ಯತೆ. ಅದೊಂದು ಅವಶ್ಯಕತೆ ಕೂಡ ಹೌದು. "ಕಿಂಗ್ಸ್ಲೇ ಡೇವಿಸ್ ಹೇಳುವಂತೆ ಸಮಾಜವೇ ಸಂಘರ್ಷದ ಪರಿಸ್ಥಿತಿಗಳನ್ನು ಸೃಷ್ಟಿಸಿ ಸಂಘರ್ಷವನ್ನು ಅನಿವಾರ್ಯವಾಗಿಸಿದೆ. ಸಂಘರ್ಷದಿಂದ ಕೆಟ್ಟ ಪರಿಣಾಮಗಳು ಜತೆಗೆ ಉತ್ತಮ ಪರಿಣಾಮಗಳು ಆಗಿವೆ."[೩] ಸಂಘರ್ಷದ ಬಗ್ಗೆ ಹೆಚ್ಚು ಚರ್ಚಿಸದೆ ಅಧ್ಯಯನಕ್ಕೆ ಸಂಬಂಧಪಟ್ಟಂತೆ ರಗಳೆಗಳಲ್ಲಿ ಏರ್ಪಡುವ ಶರಣರ ನಡುವಿನ ಸಂಘರ್ಷದ ಬಗ್ಗೆ ಚರ್ಚಿಸಲಾಗುವುದು.

ಹರಿಹರನ ರಗಳೆಗಳು ೧೨ನೇ ಶತಮಾನದ ವಚನಕಾರರ ಚರಿತ್ರೆಗಳು, ಕವಿಯ ಸಮಕಾಲೀನ ಬದುಕನ್ನು ಒಳಗೊಂಡಿವೆ. ಅಂದಿನ ಹೊಂದಾಣಿಕೆ, ಸಾಂಸ್ಕೃತಿಕ ಸಂಘರ್ಷಗಳು ಸಂಭವಿಸಿದ ಸನ್ನಿವೇಶಗಳು ಹಲವಾರಿವೆ. "ಕೆಂಭಾವಿ ಭೋಗಣ್ಣ ರಾಜನಿಂದ ಬಹಿಷ್ಕೃತಗೊಂಡಾಗ ಊರಲ್ಲಿಯ ಎಲ್ಲ ಲಿಂಗಗಳು ಅವನ ಬೆನ್ನ ಹಿಂದೆ ಹೋಗಿ ಅವನು ಮರಳುವುದರೊಂದಿಗೆ ತಮ್ಮ ಮೂಲ ಸ್ಥಳ ಮರೆತು ಅವು ಸ್ಥಾನಪಲ್ಲಟ ಮಾಡಿದ್ದು, ಪವಾಡವಾಗಿದೆ"[೪] ವಾಸ್ತವ ಸಂಗತಿ ಲಿಂಗಪ್ರತಿಷ್ಠೆಯೇ ಅವಸರವಸರವಾಗಿ ಅವ್ಯವಸ್ಥೆಯಾಗಿ ಅದಲು ಬದಲಿಗೆ ಕಾರಣವಾಗಿರುವ ಸಾಧ್ಯತೆಯಿದೆ. ಆದರೆ ಈ ಪರಿಸ್ಥಿತಿ ಭಕ್ತರಲ್ಲಿ ಉದ್ವಿಗ್ನ ಸ್ಥಿತಿ ನಿರ್ಮಿಸಿರುತ್ತದೆ.

ಪಂಪ, ರನ್ನರಲ್ಲಿ ಭಾರತ ಪುರಾಣದೊಂದಿಗೆ ಒಂದಿಷ್ಟು ಇತಿಹಾಸ ನೇರವಾಗಿಯೇ, ಪರ್ಯಾಯವಾಗಿಯೇ ಸೇರಿಕೊಂಡರೆ ಹರಿಹರನಲ್ಲಿ ಐತಿಹಾಸಿಕ ಸಂಗತಿಗಳು ಒಂದಿಷ್ಟು ಪುರಾಣಗಳೊಂದಿಗೆ ಚಿತ್ರಣಗೊಂಡಿವೆ. ಪಾತ್ರವಾಗಿ ಬಂದಿರುವ ರಾಜ ಮಹಾರಾಜರು ವಾಸ್ತವದ ಶಿವಭಕ್ತರೊಂದಿಗೆ ಪ್ರಸ್ತಾವನೆಗೊಳ್ಳುತ್ತಾರೆ. ಇಲ್ಲಿ ಶಿವಭಕ್ತರು ಮುಖ್ಯವಾಗಿ, ಉಳಿದವರು ಅಮುಖ್ಯವಾಗುತ್ತಾರೆ. ಹೀಗಾಗಿ ಅರಸರನ್ನು ಕೊಂಡಾಡುವ ಹರಿಹರ ಪೂರ್ವದ ಕವಿಗಳಿಗೂ ಶಿವಭಕ್ತರನ್ನು ಕೊಂಡಾಡುವ ಹರಿಹರನಿಗೂ ಸಾಕಷ್ಟು ವ್ಯತ್ಯಾಸವಿದೆ. ವಚನಕಾರರನ್ನು ಸಮೀಪದಿಂದ ಬಲ್ಲ ಹರಿಹರ ಇಂತಹ ಐತಿಹಾಸಿಕ ರಚನೆಗೆ ತೊಡಗದೆ ಹೋಗಿದ್ದರೆ ಬಸವಾದಿಗಳ ಕ್ರಾಂತಿಕಾರಕ ಬದುಕು ತುಂಬ ಅಸ್ಪಷ್ಟವಾಗುತ್ತಿತ್ತು. ಭವಿಷ್ಯದ ಜೀವನವು ಭೂತ ಕಾಲವನ್ನು ಅನುಸರಿಸುತ್ತದೆ. ಹರಿಹರನ ಕಾಲಾವಧಿಯು ವಚನಕಾರರನ್ನು ಕೆಲಮಟ್ಟಿಗಾದರೂ ಅನುಸರಿಸಿ ಬದುಕನ್ನು ನಡೆಸಿದುದು ಈ ಮೂಲಕ ತಿಳಿದು ಬರುತ್ತದೆ.

ನಾಡ ಪ್ರಭುವನ್ನು ವಿರೋಧಿಸುವಾಗ "ಎಲೆಲೆ ಬಿಜ್ಜಳ, ಭಕ್ತರನ್ನರಿಯದ ಭವಿಯೆ"[೫] ಎಂಬ ಕಠೋರ ಮಾತುಗಳನ್ನು ಹರಿಹರನ ಶಿವಭಕ್ತ ಮಾತ್ರ ನುಡಿಯುವುದನ್ನು ಗಮನಿಸಬೇಕು. ವಾಸ್ತವವಾಗಿ ಅಂದಿನ ದಿಟ್ಟ ಶಿವಭಕ್ತನೊಬ್ಬನ ಪ್ರತಿಭಟನಾ ಸ್ವರೂಪ ಹೇಗಿದ್ದಿರಬೇಕೆಂಬ ಕಲ್ಪನೆಯನ್ನು ಆ ಮಾತು ಮನವರಿಕೆ ಮಾಡಿಕೊಡುತ್ತದೆ. ಹರಿಹರನಂಥ ಶಿವಭಕ್ತನು ಅರಸುತನವನ್ನು ಹೀಗೆ ಧಿಕ್ಕರಿಸಲು ಸಜ್ಜುಗೊಂಡಿದ್ದನ್ನು ಕಂಡಾಗ ವಚನಕಾರರ ಪ್ರತಿಭಟನಾ ಸ್ವಭಾವದ ಪರಿಣಾಮಗಳು ಹರಿಹರನಿಗೆ ಗುಣಾತ್ಮಕವಾಗಿ ಎಷ್ಟು ಗಟ್ಟಿಯಾಗಿ ಬೀರಿದ್ದವೆಂಬುದು ಗೊತ್ತಾಗುತ್ತದೆ. ಹಿಂದಿನ ರಾಗದ್ವೇಷದ ಮಾನಸಿಕ ಸ್ಥಿತಿಗೂ ಕವಿಕಾಲದ ರಾಗದ್ವೇಷಗಳ ಸ್ಥಿತಿಗೂ ವ್ಯತ್ಯಸ್ಥವಾಗಿರುವುದನ್ನು ಇಲ್ಲಿ ಗುರುತಿಸುತ್ತೇವೆ. ಇದೇ ಮಾದರಿಯಲ್ಲಿ ಧರ್ಮ, ದುಡಿಮೆ, ಆರ್ಥಿಕ ವಿಷಯ, ಮದುವೆ ಮುಂಜಿಯಂಥ ವಿಷಯಗಳಲ್ಲಿಯೂ ಬದಲಾವಣೆ ಕಾಣುತ್ತೇವೆ.

ರಗಳೆಗಳಲ್ಲಿ ಧರ್ಮ ಸಂಘರ್ಷದ ಅನೇಕ ಚಿತ್ರಗಳು ದೊರೆಯುತ್ತವೆ. ದೃಷ್ಟಿವಾರಿಯಂಥ ವೃತ್ತಗಳು ಹರಿಹರನ ರಗಳೆಗಳಲ್ಲಿ ಬರುತ್ತವೆ. ಅರಸನಿಗೆ ವೇಳೆವಾಳಿಯಾಗಿ ಪ್ರಾಣಾರ್ಪಣೆ ಮಾಡುವ ಆಚರಣೆಯು ಪ್ರತಿಮೌಲ್ಯವಾಗಿ ಲಿಂಗಕ್ಕೆ, ಜಂಗಮಕ್ಕೆ ವೇಳೆವಾಳಿಯಾಗಬೇಕೆನ್ನುವುದು ಶಿವಭಕ್ತರ ದೃಷ್ಟಿ, ಅರಸನಿಗೆ ದೃಷ್ಟಿವಾರಿಯ ಧೀರರಿದ್ದುದು ಅಂಗಕ್ಕೆ ದೃಷ್ಟಿವಾರಿಯ ಧೀರರಾಗುವಂತೆ ಬದಲಾವಣೆಯಾಗಿರುತ್ತದೆ. ಅರಸು ಮೌಲ್ಯಗಳು ಲಿಂಗಮೌಲ್ಯಗಳಾಗಿ ಸ್ಥಾಪಿತಗೊಂಡಂತೆ 'ಅರಸು ಪ್ರತ್ಯಕ್ಷ ದೇವತಾ' ಎಂಬ ಪರಂಪರೆಗೆ ಪೆಟ್ಟು ಬಿದ್ದಿರುವುದನ್ನು ರಗಳೆಗಳಲ್ಲಿ ನೋಡುತ್ತೇವೆ. ದೃಷ್ಟಿವಾರಿ ಜಂಗಮದ ವೇಳೆ, ಲಿಂಗದ ವೇಳೆ ಎಂಬ ಹರಿಹರೋಕ್ತಿಗಳು ದೇವರಿಗೆ ಪ್ರಾಣಾರ್ಪಣೆ ಮಾಡುವುದನ್ನು

ಸಮರ್ಥಿಸುತ್ತ ಅರಸನಿಗೆ ಪ್ರಾಣ ಕೊಡುವುದನ್ನು ವಿರೋಧಿಸುತ್ತೇವೆ. ಬಸವಣ್ಣನ ಪ್ರಾಣವು ಜಂಗಮರ ಹಿಂದೆ ಹೋಗಿ ಅವರು ಮರಳಿ ಬರುವುದರೊಂದಿಗೆ ಚೈತನ್ಯಗೊಂಡ ಘಟನೆ ಕೂಡ ಜಂಗಮದ ಮಹತ್ವವನ್ನು ತಿಳಿಸುತ್ತ ಅರಸನನ್ನು ಅಪಮೌಲ್ಯಕ್ಕೀಡು ಮಾಡುವುದೇ ಆಗಿದೆ. ಇಂಥ ಪ್ರಯೋಗದ ಮೂಲಕ ಕವಿ ತನ್ನ ಸಮಕಾಲೀನ ಧಾರ್ಮಿಕ ಸಂಘರ್ಷಗಳನ್ನು ಚಿತ್ರಿಸಿದ್ದಾನೆ. ಆದರೆ, ಹರಿಹರನು ಕಟ್ಟಿಕೊಡುವ ಸಾಹಿತ್ಯದಲ್ಲಿ ಅವು ಪ್ರಗತಿಪರ ಬದುಕಿನ ದಾಖಲೆಗಳಾಗಿವೆ.

### ರಗಳೆಗಳಲ್ಲಿ ಸಂಘರ್ಷದ ವ್ಯಾಪ್ತಿ

ಆದರ್ಶ ಮತ್ತು ಮೌಲ್ಯಗಳ ನಡುವೆ ಇರುವ ಸಂಬಂಧವೇ ಸಂಘರ್ಷಕ್ಕೆ ಮೂಲ. ಎಲ್ಲ ಕಾಲ, ಎಲ್ಲ ದೇಶ, ಎಲ್ಲ ಜನಾಂಗಗಳಿಗೆ ಅನ್ವಯಿಸುವ ಜೀವನ ಸತ್ಯಗಳು ಆದರ್ಶ; ಒಂದು ಕಾಲ, ಒಂದು ದೇಶ ಜನಾಂಗಕ್ಕೆ ಅನ್ವಯಿಸುವ ಜೀವನ ಸತ್ಯಗಳು ಮೌಲ್ಯ. ಆದರ್ಶ ಎಷ್ಟು ಪ್ರಯತ್ನಿಸಿದರೂ ಇಡಿಯಾಗಿ ಸಾಧ್ಯವಾಗದು; ಮೌಲ್ಯವು ಪ್ರಯತ್ನದಿಂದ ಇಡೀಯಾಗಿ ಸಾಧ್ಯವಾಗುವಂತಹದು”[೬] ಅಂತಹ ಸತ್ಯದ ಶಾಶ್ವತ ಆದರ್ಶಗಳಿಗೆ ಹೊಂದಿಕೊಂಡು ಕಾಲಕಾಲಕ್ಕೆ ಮೌಲ್ಯ ನಿರ್ಮಾಣಗೊಂಡರೆ ಆ ಮೌಲ್ಯವನ್ನೊಪ್ಪದ ಪೂರ್ವಸ್ಥಿತಿಯಲ್ಲಿ ಇರಬೇಕೆನ್ನುವ ಜಡಪ್ರವೃತ್ತಿವರಿರುತ್ತಾರೆ. ಅದಕ್ಕಾಗಿಯೇ ವಚನಕಾರರು ಜಡಪ್ರವೃತ್ತಿಯನ್ನು ಸ್ಥಾವರವೆಂದು ಹಳಿದು ಚೈತನ್ಯ ಪ್ರವೃತ್ತಿಯನ್ನು ಜಂಗಮವೆಂದು ಕರೆದಿದ್ದು, ಇಂತಹ ವಚನಕಾರರ ಬದುಕಿನ ಮೌಲ್ಯಗಳನ್ನು, ಜೀವನಾದರ್ಶಗಳನ್ನು, ತನ್ನ ಸಮಕಾಲೀನ ಬದುಕಿನೊಂದಿಗೆ ನಿರೂಪಿಸುವಾಗ ನಿರೂಪಣೆಯ ಹಿಂದಿನ ಕವಿಯ ಮನೋಧರ್ಮವನ್ನು ಇಲ್ಲಿ ಗಮನಿಸಬೇಕು.

### ಶಿವಶರಣರ ಹೋರಾಟದ ಮನೋಧರ್ಮ

ರಗಳೆಗಳು ಘಟನೆ ಪ್ರಧಾನ ಭೂಮಿಕೆಗಳನ್ನು ಒಳಗೊಂಡಿವೆ. ಒಂದೊಂದು ಘಟನೆ ಒಂದೊಂದು ಸಾಧನೆಯ ಕುರುಹಾಗಿ ಕಾಣಬರುತ್ತವೆ. ಐತಿಹಾಸಿಕವಾಗಿ ಆಗಿಹೋದ ವಚನಕಾರರ ಚರಿತ್ರೆಗೆ ತೊಡಗಿದಾಗ ಕವಿಯ ಜನನೋದ್ದೇಶ, ಜನನ ಹೋರಾಟದೊಂದಿಗೆ ಬದುಕು ಸಂಘರ್ಷಮಯ ಚಟುವಟಿಕೆಗಳ ಪರಿಣಾಮ ಕೊನೆಗೆ ಶಿವೈಕ್ಯದಂತಹ ನಿರೂಪಣೆಯ ಕ್ರಮವನ್ನು ರಗಳೆಯಲ್ಲಿ ನೀಡಿದ್ದಾನೆ. ಹೀಗಾಗಿ ಸಾಧನೆಯ ಮೊದಲ ಹಂತ ವ್ಯಕ್ತಿಯ ಜನನದೊಂದಿಗೆ ಆರಂಭವಾಗುತ್ತದೆ. ಶಿವಭಕ್ತಿ ಪರಿಸರದಲ್ಲಿ ಇಡುವ ಹೆಸರು ಕೂಡ ಧರ್ಮವನ್ನುವಲಂಭಿಸಿರುತ್ತದೆ. ಶಿವಮತವಲ್ಲದ ಹೆರವರಿಗೆಲ್ಲ ನಾಶಕರ, ಹರಿಯನ್ನು ನಾಶ ಮಾಡುವ 'ಹರ' ಈ ಅರ್ಥವುಳ್ಳ ಕವಿ ಹರಿಹರನಾಗಿದ್ದಾನೆ. ತಮ್ಮ ಆರಾಧ್ಯ ದೈವದ ಹೆಸರನ್ನು ಮಕ್ಕಳಿಗೆ

ಇಡುವುದೂ ಸ್ವಾಭಾವಿಕವಾಗಿತ್ತು. ಹೀಗೆ ಆರಾಧ್ಯ ದೈವದ ನಾಮ ಹೊತ್ತ ಧಾರ್ಮಿಕ ಪರಿಸರ, ಮತಧರ್ಮದ ನಂಟನ್ನು ಜನನದೊಂದಿಗೆ, ಹೆಸರಿನೊಂದಿಗೆ ಅಂಟಿಕೊಂಡು ಬೆಳೆಯುವ ಪರಿಸರ ಹರಿಹರನ ಕಾಲಾವಧಿಯಾಗಿತ್ತು.

ತನ್ನ ಹಿಂದೆ ಆಗಿ ಹೋದ ಶಿವಭಕ್ತರ ಬದುಕಿನ ಸಾರರೂಪವನ್ನು ಜನನೋದ್ದೇಶದೊಂದಿಗೆ ನೀಡಿ ಜನನ ಬೆಳವಣಿಗೆ ಐಕ್ಯದ ಘಟ್ಟಗಳಲ್ಲಿ ಶಿವಭಕ್ತರು ಧರ್ಮ ಮತ್ತು ಅರ್ಥ ಪರವಾಗಿ ಹೋರಾಟ ಮಾಡಿದುದನ್ನು ಇಲ್ಲಿ ವಿವೇಚಿಸಲಾಗಿದೆ. ಏಕದೇವೋಪಾಸನೆ, ಗುರುಲಿಂಗ, ಜಂಗಮಭಕ್ತಿ, ಪ್ರಸಾರ, ದಾಸೋಹ, ಕಾಯಕ ಇವನ್ನು ಭಕ್ತೇತರರು ಒಪ್ಪಿಕೊಳ್ಳುವಂತೆ ಮಾಡಿದ್ದೇ ಧರ್ಮ ಸಂಘರ್ಷಕ್ಕೆ ಕಾರಣವಾಗಿದೆ ಎಂಬುದನ್ನು ರಗಳೆಗಳಲ್ಲಿ ಕಾಣುತ್ತೇವೆ. ಸುಳ್ಳು ಹೇಳಿದ ಪ್ರಮಾದಕ್ಕಾಗಿ ಸತ್ಯವನ್ನು ಪ್ರತಿಪಾದಿಸಲು, ಶಿವನನುಜ್ಞೆಯಂತೆ ಬಸವಣ್ಣ ಭೂಮಿಯಲ್ಲಿ ಅನುಭವಿಸಿ ಸಾಮರ್ಥ್ಯ ಮೆರೆದು ಬರಲೆಂದು ಹುಟ್ಟಿದವನು ರೇವಣಸಿದ್ಧ. ಶಿವಾಲಯ ಸ್ಥಾಪನೆ, ಲಿಂಗಪ್ರತಿಷ್ಠಾಪನೆ, ಲೋಕ ಕಲ್ಯಾಣ ಕಾರ್ಯಗಳು ರೇವಣಸಿದ್ದನವಾಗಿದ್ದ ವೆಂಬುದನ್ನು ರಗಳೆ ಚಿತ್ರಿಸುತ್ತದೆ.

ವೀರಶೈವ ಮೊದಲ ಕವಿ ಕೇಶಿರಾಜ ವರ್ಣ, ವರ್ಗ, ಲಿಂಗಭೇದ ತೊರೆದು ಭಕ್ತ ಧರ್ಮವನ್ನು ಪ್ರಚಲಿತಕ್ಕೆ ತಂದ ಮೊದಲ ಬಸವಣ್ಣನೆನಿಸುತ್ತಾನೆ. ವಚನಕಾರರ ಆಂದೋಲನಕ್ಕೆ ಮೂಲಬೇರು. ಈ ಕೇಶಿರಾಜ, ವೀರಶೈವ ವೃಕ್ಷದ ಬೇರು ಅಧಿಕೃತವಾಗಿ ಚಾಲುಕ್ಯರಲ್ಲಿ ಮೂಡಿ ಕಲಚುರಿಗಳಲ್ಲಿ ಹೆಮ್ಮರವಾಗಿತ್ತು. ಅರಸರ ವಿರುದ್ಧ ಶಿವಭಕ್ತಿ ಸಮರ ಸಾರಿದ ಕೇಶಿರಾಜನ ವೀರಶೈವ ಬುನಾದಿಯ ಮೇಲೆ ಬಸವಣ್ಣನ ವೀರಶೈವ ಧರ್ಮ ಗಟ್ಟಿಗೊಂಡಿತ್ತು ಎಂಬುದು ರಗಳೆಗಳಲ್ಲಿನ ಸಂಘರ್ಷದ ಪ್ರಸಂಗಗಳನ್ನು ನೋಡಿದರೆ ತಿಳಿದು ಬರುತ್ತದೆ."[೭]

**ಸಂಘರ್ಷದ ಸ್ವರೂಪ**

ರಗಳೆಗಳಲ್ಲಿ ಆಂತರಿಕ, ಸ್ವ ಸಾಮುದಾಯಿಕ, ಅನ್ಯ ಸಮುದಾಯಿಕ ಹೋರಾಟ (ಸಂಘರ್ಷ) ಎಂಬ ಮೂರು ಬಗೆಯಲ್ಲಿ ಶಿವಭಕ್ತರ ಹೋರಾಟದ ಚಿತ್ರಣ ಕಾಣುತ್ತೇವೆ. ಲೌಕಿಕವನ್ನು ಮೀರಿ ನಿಲ್ಲುವಲ್ಲಿ ಅಂತರಂಗ ಪರಿಶುದ್ಧತೆಯ ಈಡೆಗೆ ಗಮನಹರಿಸುವ ಶಿವಭಕ್ತರು ತಮ್ಮ ನಡೆ, ನುಡಿ, ಆಚಾರ, ಶೀಲ, ಪೂಜೆಯಂತಹವುಗಳನ್ನು ಅಳವಡಿಸಿಕೊಂಡಿದ್ದರು. ಲೌಕಿಕವನ್ನು ಬದುಕುತ್ತ, ಭಕ್ತ ಪಕ್ಷ, ಒಕ್ಕಟ್ಟಾಗಿರುವಂತೆ ತಮ್ಮೊಳಗಿನ ಭಿನ್ನಾಭಿಪ್ರಾಯ ಬಗೆಹರಿಸಲು ಸ್ವ ಸಾಮುದಾಯಿಕ ಸಂಘರ್ಷಗಳಾಗುತ್ತಿದ್ದವು. ಅವು ಪವಾಡ, ವಾದ-ವಿವಾದ, ಪಶ್ಚಾತಾಪ ಮಟ್ಟದಲ್ಲಿ ನಡೆಯುತ್ತಿದ್ದವು. ತಮ್ಮ ಸಮಾಜ, ತಮ್ಮ ಮತಧರ್ಮದ ಉಳಿವಿಗಾಗಿ ಶಿವಭಕ್ತರು ಅನ್ಯರೊಡನೆ ಬಹಿರಂಗ ಘರ್ಷಣೆಗೆ

ತೊಡಗುತ್ತಿದ್ದರು. ಅಲ್ಲಿ ವಾದ-ವಿವಾದ, ವಾಸ್ತುಭಂಜನೆ, ಮೂರ್ತಿ ಭಂಜನೆ, ಜೀವಹಿಂಸೆ, ಪವಾಡಗಳಂಥ ಘಟನೆಗಳು ಧರ್ಮ ಪರವಾಗಿ ನಡೆದರೆ 'ಅರ್ಥದ ಸಲುವಾಗಿ ಪ್ರಭು ಮತ್ತು ಭಕ್ತರ ನಡುವೆ ನಡೆಯುತ್ತಿದ್ದುದನ್ನು ರಗಳೆಗಳುದ್ದಕ್ಕೂ ಕಾಣುತ್ತೇವೆ. ಆ ಸಂಸ್ಕೃತಿ ಮತ್ತು ಸಾಂಸ್ಕೃತಿಕ ಘರ್ಷಣೆಗಳ ಸ್ವರೂಪವನ್ನು ಈ ರೀತಿ ಚಿತ್ರಿಸಬಹುದಾಗಿದೆ.

ಸಾಮಾನ್ಯವಾಗಿ ಸಂಸ್ಕೃತಿಯನ್ನು ಪ್ರಧಾನ ಸಂಸ್ಕೃತಿ, ಪೂರಕ ಸಂಸ್ಕೃತಿ, ಉಪಸಂಸ್ಕೃತಿ, ಪ್ರತಿ ಸಂಸ್ಕೃತಿಯೆಂದು ವಿಂಗಡಣೆ ಮಾಡಬಹುದಾಗಿದೆ. ಪ್ರಾಚೀನ ಕಾಲದಿಂದಲೂ ವೇದೋಕ್ತ ಕ್ರಮದಲ್ಲಿ ಬದುಕು ನಡೆಸಿದ ಶೈವ- ವೈಧಿಕ ಸಂಸ್ಕೃತಿಯ ಜನತೆ ಪ್ರಧಾನ ಮತ್ತು ಪೂರಕ ಸಂಸ್ಕೃತಿಯಲ್ಲಿ ಬಂದರೆ ಕೆಳವರ್ಗದ ಜನತೆ ಉಪ ಸಂಸ್ಕೃತಿಯ ಒಡಲಲ್ಲಿ ಬರುತ್ತಾರೆ. ಪ್ರಧಾನ ಸಂಸ್ಕೃತಿಯನ್ನು ಪ್ರತಿಭಟಿಸುವ ಜೈನ, ಬೌದ್ಧರಂತಹವರು ಪ್ರತಿ ಸಂಸ್ಕೃತಿಯ ವಕ್ತಾರರೆನಿಸುತ್ತಾರೆ. ಶಿವಭಕ್ತರು ಪ್ರಧಾನ ಸಂಸ್ಕೃತಿಯ ವಾಹಕರಾಗಿ ತಮ್ಮ ಬದುಕಿನ ವಾಹಿನಿಯಲ್ಲಿ ಉಳಿದವರು ಸೇರಬೇಕೆಂದು ಬಯಸಿ ಉಳಿದವರೆಲ್ಲರೊಡನೆ ಸಂಘರ್ಷಕ್ಕೆ ತೊಡಗುತ್ತಿದ್ದರು. ಆ ಸಂಘರ್ಷಗಳು ಶೈವ ಭವಿಗಳೊಡನೆ ವಾದ, ವಿವಾದ-ಪವಾಡ ಪರಿವರ್ತನೆಯಂತಹ ಮಟ್ಟದಲ್ಲಿ ನಡೆದರೆ ಇನ್ನುಳಿದ ಭವಿವರ್ಗ, ಕೆಳವರ್ಗದ ಜನರೊಡನೆ ವಾಸ್ತು, ಮೂರ್ತಿ ಭಂಜನೆ, ಹಿಂಸೆ, ಪವಾಡ, ಮಂತ್ರ-ತಂತ್ರ ಪರಿವರ್ತನೆಯ ಎಲ್ಲ ಹಂತಗಳಲ್ಲಿ ನಡೆಯುತ್ತಿದ್ದವು ಎಂಬುದನ್ನು ಕಾವ್ಯಗಳಲ್ಲಿ ಕಾಣಬಹುದು.

**ಒಳ ಸಂಘರ್ಷಗಳು**

ಮೌಲಿಕವಾದ ಬಾಳು ಭಕ್ತನದು. ತನ್ನೊಳಗಿನ ಅಶುದ್ಧತೆಗಳನ್ನು ಕಳೆದುಕೊಂಡು ಪರಿಶುದ್ಧನಾಗುವುದು; ತನ್ನ ಆರಾಧ್ಯದೈವಕ್ಕೆ ಆತ್ಮೀಯನಾಗುವ ಮೂಲಕ ಅಂತರಂಗ ಶುದ್ಧಿ ಸಾಧ್ಯವೆಂಬ ನಿಲುವು ಭಕ್ತನದು. ಅಷ್ಟ ಶತಕಗಳಂಥ ಹರಿಹರನ ಕಾವ್ಯಗಳು ಕವಿಯ ಅಂತರಂಗ ಶುದ್ಧ ಅರ್ಥಾತ್ ಒಳಸಂಘರ್ಷದ ಚಿತ್ರಣವನ್ನು ನೀಡುತ್ತವೆ. ರಗಳೆಗಳನ್ನು ಶಿವಭಕ್ತರು ಸ್ವಯಂ ಪರಿಶುದ್ಧಿಗೆ ಎಷ್ಟು ಮಹತ್ವ ನೀಡಿದ್ದರೆಂಬುದಕ್ಕೆ ಅವರು ಆಚರಿಸಿದ ವ್ರತ, ನೇಮ, ಪ್ರತಿಜ್ಞೆಗಳು ಸಾಕ್ಷಿಯಾಗಿವೆ.

ಭರದಿಂದ ಲಿಂಗಾರ್ಚನೆ ಮಾಡುವ ಶಿವಕುಲವೊಂದೇ, ಶಿವಾಚಾರವೂ ಅದೇ, ವಿರೂಪಾಕ್ಷನನ್ನು ನೆನೆಯುವುದೇ ಭಕ್ತಿಯೆಂದು ಕವಿ ತನ್ನ ಅಂತರಂಗವನ್ನು ಬಿಚ್ಚಿಕೊಳ್ಳುತ್ತಾನೆ. ಮಾರುಡಿಗೆ ನಾಚಿ ತಂದೆ ಏಕಪತ್ನಿ ವ್ರತಸ್ಥ, ಪರಾಂಗನೆಯರನ್ನು ನೋಡಲಾರ, ಏಕನಿಷ್ಠ, ಪರದೈವದೂರ, ಅತ್ಯುಗ್ರ ಈಶ ಧ್ಯಾನಿಯಾಗಿದ್ದರೆ, ಆದಯ್ಯ ಸದ್ಭಕ್ತಿಯ ಲಾಭದ ಮುಂದೆ ವ್ಯವಹಾರದ

ಲಾಭವೆಂತಹುದೆಂದು ಭೌತ ಸಂಪತ್ತನ್ನು ವಿರೋಧಿಸಿದವನು. ಇಂತಹ ನೂರಾರು ಪಾತ್ರ ಚಿತ್ರಣಗಳು ರಗಳೆಗಳಲ್ಲಿ ಬರುತ್ತವೆ. ಇವೆಲ್ಲ ಅಂತಾರಾತ್ಮ ಶುದ್ಧಿಗೆ ನಡೆಸಿದ ಸ್ವಯಂ ಹೋರಾಟದ ಚಿತ್ರಣಗಳಾಗಿವೆ.

**ಸ್ವ ಸಾಮುದಾಯಿಕ ಸಂಘರ್ಷ**

ಭಕ್ತಿ ಪಕ್ಷದ ಶಿವಭಕ್ತರ ನಡುವೆ ಇರುವ ಭಿನ್ನಾಭಿಪ್ರಾಯಗಳ ಪರಿಹಾರ, ಸತ್ಯಶೀಲ ನ್ಯಾಯ, ಅನ್ಯಾಯಗಳ ವಿಮರ್ಶೆ, ಸ್ವವಿಮರ್ಶೆಗಳನ್ನು ಕವಿ ರಗಳೆಯಲ್ಲಿ ಪ್ರಸ್ತಾಪಿಸಿದುದನ್ನು ಭಕ್ತರ ಸ್ವಸಾಮುದಾಯಿಕ ಹೋರಾಟದಲ್ಲಿ ಕಾಣುತ್ತೇವೆ. ಸ್ವಮತ ಪ್ರತಿಷ್ಠೆಗೆ, ಸ್ವ ಸಮಾಜ ಶುದ್ಧಿಗೆ ಸಮಾಜದ ಸದಸ್ಯ ನಿರ್ಮಲವಾಗಿರಬೇಕಾಗುತ್ತದೆ. ಸಾಮಾನ್ಯವಾಗಿ ಸದ್ಗುಣಗಳ ಮಧ್ಯದಲ್ಲೊಂದು ಅವಗುಣವಿರುತ್ತದೆ. ಭಕ್ತನ ಆ ಅವಗುಣವು ಸಮೂಹದ ಸಮಕ್ಷಮದಲ್ಲಿ ದೂರವಾಗುವಂತಹ ಘಟನೆ ನಡೆಯುತ್ತದೆ. ಇದ್ದ ಅವಗುಣವು ದೂರಾಗುವ ಮೂಲಕ ಪರಸ್ಪರರ ಭಿನ್ನಾಭಿಪ್ರಾಯ ಮಾಯವಾಗುತ್ತದೆ; ಸಮಾಜಕ್ಕೆ ಅದರಿಂದ ಇನ್ನಷ್ಟು ಬಲಬರುತ್ತದೆ.

ವಚನಗಳಲ್ಲಿ ಕಾಗೆ, ಕೋಳಿಗಳ ಹೋಲಿಕೆ ನೀಡಿ, ಬಸವಣ್ಣ ಭಕ್ತಿ ಪಕ್ಷಿಯಾಗಿ ಹಂಚಿ ಉಣ್ಣುವ ಸಲಹೆ ನೀಡುತ್ತಾನೆ. ಹಂಚಿ ಉಣ್ಣುವ ಮನೋಭಾವದ ಕೊರತೆ ಇದ್ದಾಗ ಆ ಮಾತು ಬಂದಿರಬೇಕು. ಇಂಥ ಸದ್ಗುಣಗಳ ಕೊರತೆಯನ್ನು ಕವಿ ಹರಿಹರ ತುಂಬಿಕೊಳ್ಳಲು ಘಟನೆಯೊಂದನ್ನು ನಿರೂಪಿಸುತ್ತಾನೆ. ರಗಳೆಗಳಲ್ಲಿ ಬಸವಣ್ಣನ ಜಂಗಮ ಪ್ರಾಣಿವ್ರತ ಸುಖೀ ಜಂಗಮ ಪ್ರಸಂಗ, ತೆಲುಗು ಜೊಮ್ಮಯ್ಯ-ಕೇಶಿರಾಜನ ನಡುವಿನ ಸತ್ವ ಪರೀಕ್ಷೆ ಉಳ್ಳಿ ಪರ್ವದಂತಹ ಪ್ರಸಂಗಗಳು ಇವೆಲ್ಲ ಭಕ್ತರ ಸ್ವಸಾಮುದಾಯಿಕ ಸಂಘರ್ಷಕ್ಕೆ ಪ್ರಮುಖ ಉದಾಹರಣೆಯಾಗಿ ತೋರುತ್ತವೆ. ಹಿಂದೆ ಸೂಚಿಸಿದಂತೆ ಜನೋದ್ದೇಶಗಳೊಂದಿಗೆ ಹೋರಾಟದ ಪ್ರಕ್ರಿಯೆ; ಭಕ್ತನ ಬೆಳವಣಿಗೆಯೊಂದಿಗೆ ಮುಖಾಮುಖಿ ಸಂಘರ್ಷ ನಡೆಯುವ ಕೆಲವು ಚಿತ್ರಗಳನ್ನು ಇಲ್ಲಿ ನೋಡಬೇಕು.

ಶೈವದ ಕೂಸಾಗಿ ಹುಟ್ಟಿದ ಬಸವಣ್ಣ ವಿಪ್ರಾಚರಣೆಗಳನ್ನು ಪ್ರತಿಭಟಿಸಿ ಜನಿವಾರ ಹರಿದು ಇಷ್ಟಲಿಂಗಧಾರಿಯಾಗಿ ಹೊರಬರುವ ಪ್ರಸಂಗವು ಶೈವವನ್ನು ವೀರಶೈವವನ್ನಾಗಿಸುವ ಕ್ರಿಯೆಯಲ್ಲಿ ಒಂದಾಗಿದೆ. ಶೈವಾಗಮನ ನಿಯಮಗಳ ಪ್ರಕಾರ ಕೇತಕಿ ಕುಸುಮಗಳನ್ನು ಲಿಂಗಕ್ಕೆ ಅರ್ಪಿಸಬಾರದು. ಆದರೆ, ಬಸವಣ್ಣನು ಭಕ್ತರು ಕೊಟ್ಟದ್ದನ್ನು ದೇವ ಸ್ವೀಕರಿಸಬೇಕು ಎಂದು ಮಾಲೆಗಾರನು ನೀಡಿದ ಕುಸುಮದೆಸಳನ್ನು ಶಿವಲಿಂಗಕ್ಕೆ ಏರಿಸಿಕೊಳ್ಳುತ್ತಾನೆ. ಇದರ ಕುರುಹಾಗಿ ಸರ್ವ ಶಿವಲಿಂಗಗಳ ಉತ್ತಮಾಂಗದಲ್ಲಿ, ಮಂಗಳವೇಢೆ ಶಿವಾಲಯಗಳ ಶಿವಲಿಂಗಾಂಘ್ರಗಳಲ್ಲಿ ಬಸವಣ್ಣನ ಕೇದಗಿ ಎಸಳು ಕಂಡು ಬರುತ್ತದೆ".[೮]

ಶೈವಾಗಮಗಳನ್ನು ಮೀರಿದ ಈ ಘಟನೆ ಸಾರ್ವತ್ರಿಕವಾಗಿ ಎಲ್ಲ ಭಕ್ತರನ್ನು ಒಪ್ಪಿಸಿದಂತಿದೆ. ಅದಕ್ಕೆ ಜಡತೆಯ ಶೈವ ಪರಂಪರೆಯನ್ನು ಧಿಕ್ಕರಿಸಿ ಚಲನಶೀಲ ವೀರಶೈವ ಪರಂಪರೆಗೆ ಎಲ್ಲರೂ ಪ್ರೋತ್ಸಾಹ ನೀಡಿದರೆನಿಸುತ್ತದೆ. ಜೊತೆಗೆ ಶೈವಪರಂಪರೆಯ ಜಡ ಪ್ರವೃತ್ತಿಯವರನ್ನು ಈ ಮೂಲಕ ಚಲನಶೀಲರನ್ನಾಗಿಸಿದ ಘಟನೆಯೂ ಇದಾಗಿದೆಯೆನ್ನಬೇಕು. 'ತವನಿಧಿ'ಯ ಅಹಂ ನೆತ್ತಿಗೇರಿದ ಜೇಡರ ದಾಸಿಮಯ್ಯನ ಸೊಕ್ಕನ್ನು ಶಂಕರದಾಸಿಮಯ್ಯನು ಮುರಿದ ರೀತಿ ವಿಡಂಬನೆಯಿಂದ ಕೂಡಿದೆ. ತನ್ನ ಮುಂದಿರುವ ಬಿಡಾರದ ತಿಪ್ಪೆಯಿಂದ ಹೊನ್ನ ಕಡವರಗಳನ್ನು ತೆಗೆದು ಜೇಡರ ದಾಸಿಮಯ್ಯನಿಗೆ ತೋರಿಸಿ ಅವನ್ನು ಪಡೆಯಲು ಸೂಚಿಸುತ್ತಾನೆ."[೯] ಇಲ್ಲಿಯ 'ತವನಿಧಿ' ಮತ್ತು 'ತಿಪ್ಪೆ'ಗಳು ಪಡೆಯುವ ಗೌರವಾಂತಸ್ತುಗಳನ್ನು ಹೋಲಿಸಿ ಕೊಳ್ಳಬೇಕು. ನಂತರ ಪಶ್ಚಾತ್ತಾಪದಿಂದ ಅದೂ ಜೇಡರದಾಸಿಮಯ್ಯನ ಹೆಂಡತಿ ದುಗ್ಗಳೆಯ ಮನಃಪೂರ್ವಕ ಭಕ್ತಿಯಿಂದಾಗಿ ಜೇಡರ ದಾಸಿಮಯ್ಯ ಮರಳಿ 'ತವನಿಧಿ' ಪಡೆಯುತ್ತಾನೆ. ಅವನ ಲೋಕೋಪಕಾರದ ಹಿಂದಿನ ಅಹಂಕಾರ ಬತ್ತಿ ಹೋಗಿ ಆತ ದೋಷರಹಿತ ಭಕ್ತನಾಗುತ್ತಾನೆ.

**ಅನ್ಯ ಸಾಮುದಾಯಿಕ ಸಂಘರ್ಷ**

ತಾವು ಬಾಳುವ ಸಂಸ್ಕೃತಿಯ ಮೇಲೆ ಸಣ್ಣ ಪ್ರಮಾಣ ಪ್ರಹಾರವಾದರೂ ಅಲ್ಲಿ ಸಂಘರ್ಷವೇರ್ಪಡುತ್ತದೆ. ಒಡೆಯನ ಗೆಲುವಿಗೆ ಪ್ರಾಣದ ಹಂಗಿಲ್ಲದೆ ಹೋರಾಡುವ ವೀರರ ಪ್ರಜ್ಞೆಯೇ ಸಂಸ್ಕೃತಿಯ ಉಳಿವಿಗಾಗಿ ಹೋರಾಡುವವರಲ್ಲಿ ಇರುತ್ತದೆ. ಸಾಂಸ್ಕೃತಿಕ ಸಂಘರ್ಷವು ವ್ಯಕ್ತಿಗತ ಮತ್ತು ಸಮೂಹಗತವಾಗಿಯೂ ಏರ್ಪಡುತ್ತದೆ. ಅದು ಮುಖ್ಯವಾಗಿ ಧರ್ಮ ಪರವಾಗಿ ಕೆಲಸ ಮಾಡುತ್ತದೆ. ಉದಾ: ಅರ್ಥ ಸಂಘರ್ಷಕ್ಕೆ ಉದಾಹರಣೆಯಂತಿದ್ದ ಬಸವಣ್ಣನ ಭಂಡಾರ ಸೋರಿ ಹೋದುದರ ಸಮರ್ಥನೆ ಪ್ರಸಂಗದಲ್ಲಿ ಶಿವಭಕ್ತ ಬಸವಣ್ಣ ತನ್ನ ಮತೀಯರಿಗೆ ಬಿಜ್ಜಳನ ಭಂಡಾರವನ್ನು ವ್ಯಯ ಮಾಡುತ್ತಿದ್ದಾನೆಂಬ ಆಪಾದನೆ ಎದ್ದು ತೋರುತ್ತದೆ.

ಪೆರ್ಮಾಡಿರಾಯನೂ ಕೇಶಿರಾಜನ 'ಸಿರಿ ಹಾರಿಹೊಗೆ' ಎಂಬ ಮಾತನ್ನು ಗಟ್ಟಿ ಹಿಡಿದು ಕೇಶಿರಾಜನನ್ನು ಹೊರಗಟ್ಟುತ್ತಾನೆ. ಇಲ್ಲಿ ಕೇಶಿರಾಜನ ಆ ಮಾತು ಕೇವಲ ಒಂದು ನೆಪವಾಗಿದೆ. ಶಿವಭಕ್ತರಿಗೆ ಶಿವನಿಗೆ ಮಣಿದ ಆತ ವೈಷ್ಣವ ಟೀಕೆ ಮಾಡುವುದು; ಮತ್ತು ತನ್ನ ಬೆರಳ ಶಿವಪಾದ ಮುದ್ರಿಕೆಗೆ ಮಣಿದ ಆತ ರಾಜನಿಗೆ ತಲೆಬಾಗದೇ ಇರುವುದು ಮುಖ್ಯ ಕಾರಣಗಳಾಗಿವೆ.

ಧರ್ಮ ಸಂಘರ್ಷಕ್ಕೆ ಆದಯ್ಯನರಗಳೆ, ವೈಜಕವ್ವೆರಗಳೆ, ಮಾರುಡಿಗೆ ನಾಚಿತಂದೆ ರಗಳೆ, ಕೋವೂರ ಬೊಮ್ಮಿ ತಂದೆ ರಗಳೆ, ಏಕಾಂತರಾಮಿ ತಂದೆ ರಗಳೆಗಳು ನಿಚ್ಚಳ ಉದಾಹರಣೆಗಳಾಗಿವೆ."[೧೦]

ವೈಜಕವ್ವೆಯ ಪ್ರಭಾವಶಾಲಿ ವ್ಯಕ್ತಿತ್ವ, ಅವಳ ನಾಯಕತ್ವದಲ್ಲಿ ಪರಿವಳಿಗೆಯ ಜೈನಬಸದಿಯ ಜಿನಮೂರ್ತಿ ಭಂಜನ ಕ್ರಿಯ ನಡೆದು ವೈಜನಾಥ ಲಿಂಗ ಸ್ಥಾಪನೆ, ವೈಜನಾಥ ದೇವಾಲಯದ ಪರಿವರ್ತನ ಕ್ರಿಯೆ ನಡೆಯುತ್ತದೆ. ಪವಾಡದ ಆವರಣದಲ್ಲಿ ಈ ಚಟುವಟಿಕೆಗಳು ನಡೆದಿವೆ. ಶಿವಭಕ್ತನೊಬ್ಬನ ಅಭಿಮಾನ ಭಂಗ ಮಾಡಿದ ಜೈನರ ಉರುವಣಿಯನ್ನು ಪಡೆಯಲು ಮಾರುಡಿಗೆ ನಾಚಿತಂದೆಗಳು ಸಕಲಾಯುಧ ವೀರರ ಸಮೇತವಾಗಿ ಜಿನಬೊಂಬೆಗಳನ್ನು ಒಡೆದು ಲಿಂಗಪ್ರತಿಷ್ಠೆ ಮಾಡಿ ಆ ಪುರವನ್ನೇ ಶಿವಪುರ ಮಾಡುತ್ತಾರೆ. ಆ ಪ್ರದೇಶದ ೨೦೦ ಬಸದಿಗಳನ್ನು ಶಿವಭಕ್ತರು ನಾಶ ಮಾಡುತ್ತಾರೆ.

ಕೋವೂರ ಬೊಮ್ಮಿತಂದೆ ಜೈನ ಸಮುದಾಯದ ನಡುವೆ ರಾಜ್ಯವಾಳುತ್ತ ಗಣಪರ್ವ ಮಾಡಲು ಊರು ಬಿಟ್ಟು ಹೋದಾಗ ರಾಜಪುತ್ರ ಮಲ್ಲಿನಾಥನನ್ನು ಜೈನರು ಸಂಚಿನಿಂದ ಇರಿದು ಕೊಲ್ಲುತ್ತಾರೆ. ಆರು ತಿಂಗಳ ನಂತರ ಗಣಪರ್ವ ಮುಗಿಸಿ ಅರಸು ಮರಳಿದಾಗ ಜೈನ ಋಷಿಗಳು ಅರಸನಿಂದ ಪ್ರತ್ಯಕ್ಷವೊಂದನ್ನು ಮಾಡಿಸುತ್ತಾರೆ. ಆ ಪವಾಡ ಹೀಗಿದೆ; ಜೈನರು ಎದುರಿಗಿರುವ ವಟವೃಕ್ಷವನ್ನು ಪವಾಡದಿಂದಲೇ ಸುಡುತ್ತಾರೆ. ಇದನ್ನು ಅರಸನು ಮತ್ತೆ ಚಿಗುರಿಸಿದರೆ ತಾವೆಲ್ಲ ಶಿವಭಕ್ತರಾಗುವೆವು" ಎಂದು ಶರತ್ತು ಹಾಕುತ್ತಾರೆ. ಇದನ್ನೊಪ್ಪಿದ ಅರಸನು ತನ್ನ ದೇವನನ್ನು ನೆನೆದಾಗ ಭಸ್ಮವಾಗಿದ್ದ ವೃಕ್ಷ ಅಂಕುರಿಸಿ ಪಲ್ಲವಿಸಿ ಶಾಖೆಗಳೊಂದಿಗೆ ಬೆಳೆದು ನಿಲ್ಲುತ್ತದೆ. ಜೈನ ಸಮುದಾಯ ಅಂಜುತ್ತದೆ.

ಈ ಸಂದರ್ಭದಲ್ಲಿ ಅರಸನು "ನಿಮ್ಮ ಮೂರು ತಪ್ಪನ್ನು ಮನ್ನಿಸಿ ನಂತರ ಹರನೊಲಿದಂತೆ ಮಾಡುವೆ" ಎಂದು ಮುನ್ನೆಚ್ಚರಿಕೆ ಕೊಟ್ಟು ಅರಮನೆಗೆ ಬರುತ್ತಾನೆ. ಅಲ್ಲಿ ಮಲ್ಲಿನಾಥ ಸತ್ತುದನ್ನು ಅವನನ್ನು ಗುಹೆಯೊಂದರಲ್ಲಿ ಮುಚ್ಚಿಟ್ಟುದನ್ನು ತಿಳಿದುಕೊಂಡು ಮಗನನ್ನೂ ಬದುಕಿಸಿಕೊಳ್ಳುತ್ತಾನೆ. ಜೈನರು ಮತ್ತೆ ಅರಸನಿಗೆ ಆಹ್ವಾನವೊಡ್ಡುತ್ತ ಸೋಲುತ್ತ ಕೊನೆಗೊಮ್ಮೆ 'ಪುಷ್ಪಾಂಜಲಿ ಪರ್ವ' ಮಾಡಲು ಉದ್ಯುಕ್ತರಾದಾಗ ಶಿವಭಕ್ತ ಅರಸನ ಸಹನೆ ಮೀರುತ್ತದೆ. ಜೈನಕುಲ ಉಳಿಯದಂತೆ ಜಿನಗೊಂಬೆಗಳುಳಿಯದಂತೆ ಕಿತ್ತುತ್ತವೆನೆಂದು ಪಣತೊಟ್ಟು ತನ್ನ ನೆಚ್ಚಿನ ಮೂರು ನೂರು ಒಡೆಯರೊಡನೆ ಕಾದಾಟಕ್ಕೆ ಅಣಿಯಾಗಿ ಪುಷ್ಪಾಂಜಲಿ ಪರ್ವ ನಡೆಯುವಲ್ಲಿಗೆ ಬರುತ್ತಾನೆ. ಬಹುದೊಡ್ಡ ಪ್ರಮಾಣದ ಕಾಳಗ ನಡೆಯುತ್ತದೆ. ಆಹಿಂಸೆಯ ಪರಧರ್ಮವು ನಂಜಿನ ಧರ್ಮವಾಗಿ ಆ ಜೈನರೆಲ್ಲ ಪ್ರತಿದಾಳಿಯೆಸಗುತ್ತ ತಮ್ಮ ಧರ್ಮಕ್ಕೆ ಚ್ಯುತಿ ತಂದರೆಂದು ಹರಿಹರ ಬರೆಯುತ್ತಾನೆ.

ಪಟ್ಟಣದಲ್ಲಿ ಜೈನ ಸಂಹಾರದಿಂದ ಸೋರಿದ ರಕ್ತದ ಮೇಲೆ ನದಿಯ ನೀರನ್ನು ಹರಿಯಿಸಿ, ಪುರವನ್ನು ಶುದ್ಧಮಾಡಿ ಶಿವನಿಗೆ ಸೇವ್ಯೆವಲ್ಲದ ಬಸದಿಗಳನ್ನು ನೆಲಸಮ ಮಾಡಿ ಬಿದ್ದ ಕೋಟೆಗೆ

ಅವಶೇಷಗಳನ್ನು ಸಾಗಿಸಿ ಸೋಮ–ಸೂರ್ಯ ಬೀದಿಗಳಿಂದ ಪಟ್ಟಣವನ್ನು ಶಿವಪುರವನ್ನಾಗಿಸಿದನೆಂದು ಕವಿ ವರ್ಣಿಸುತ್ತಾನೆ. ಪುಲಿಗೆರೆಯ ಸುರಹೊನ್ನೆ ಬಸದಿಯಲ್ಲಿ ಸೌರಾಷ್ಟ್ರದ ಸೋಮೇಶ್ವರನನ್ನು ಬರಿಸುವೆನೆಂದು ಪ್ರತಿಜ್ಞೆ ಹೊತ್ತ ಆದಯ್ಯ ನೇಮ ಕೈಗೊಳ್ಳುತ್ತಾನೆ. ಆ ಪ್ರಕಾರ ನಡೆದು ಸುರಹೊನ್ನೆಯ ಜಿನನನ್ನು ಸೀಳಿ ಎರಡು ಭಾಗ ಮಾಡಿ ಶಿವನು ನಿಂತು 'ಜೈನರನ್ನು ಸಂಹರಿಸು ಶಿವಭಕ್ತಿಯುದ್ಧರಿಸು' ಎಂದು ಬತ್ತೀಸಾಯುಧ, ನೀಡಿ ಆದೇಶಿಸುತ್ತಾನೆ. ಈ ಆಯುಧದಿಂದ ಸಹಸ್ರ ಸಹಸ್ರ ಜೈನರನ್ನು ಸಂಹರಿಸಿದ ಆದಯ್ಯ ಶರಣೆಂದವರನ್ನು ರಕ್ಷಿಸುತ್ತ ಉಳಿದವರನ್ನು ಕೊಂದು ಹಾಕುತ್ತಾನೆ. ಈ ಆಯುಧವನ್ನು ಒಂದಡೆ ಬೈ–ಚಿಟ್ಟಾಗ ಅಲ್ಲಿ ಅದು 'ಖಡ್ಗದ ನಾಮದ ತೀರ್ಥವೆಂದು ಪ್ರಸಿದ್ಧವಾಯಿತೆಂದು ಕವಿ ವಿವರಿಸುತ್ತಾನೆ."[೧೧]

ಏಕಾಂತರಾಮಿ ತಂದೆಯ ಅಬ್ಬಲೂರಿನ ಘಟನೆ ಶಾಸನಗಳಲ್ಲಿಯೂ ದೊರೆಯುತ್ತದೆ. ರಗಳೆ ಮತ್ತು ಶಾಸನಗಳಲ್ಲಿ ಒಂದೆ ತೆರನಾಗಿ ಉತ್ತಮವಾಗಿದೆ. ಶಾಸನಗಳು ಚಿತ್ರಸಮೇತ ಹರಿಹರನು ನಿರೂಪಿಸಿದ ವೀರ ಪ್ರಸಂಗವನ್ನು ಕೆತ್ತಿದಂತಿವೆ. ಈ ಅಬ್ಬಲೂರು ಜೈನರ ತವರೂರು. ಎಲ್ಲೆಡೆ ಜಿನಬಸದಿಗಳು, ಒಂದೇ ಒಂದು ಬ್ರಹ್ಮೇಶ್ವರ ದೇವಾಲಯ, ಛಲಿಭಕ್ತ ಏಕಾಂತರಾಮಿ ತಂದೆ ಸಂಚಾರಗೈಯ್ಯುತ್ತ ನಳನಳಿಸುವ ಬಸದಿಗಳು ಶಿವದೇವಾಲಯವೆಂದು ಬಗೆದು ಕೈಮುಗಿದು ನಂತರ ಹೇಸಿಕೊಳ್ಳುತ್ತಾನೆ. ನಂತರ ಬ್ರಹ್ಮೇಶ್ವರ ದೇವಾಲಯದಲ್ಲಿ ಬೀಡುಬಿಡುತ್ತಾನೆ. ಇರಳು ಕಳೆದು ಬೆಳೆಗಾಗಿ ಶಿವಪೂಜೆಗೆ ಅಣಿಯಾಗುವಾಗ ದೇವಾಲಯದ ರಂಗಮಂಟಪದಲ್ಲಿ ಹರನತ್ತ ಕಾಲುಚಾಚಿ ಮಲಗಿದ ಜೈನನೊಬ್ಬನನ್ನು ನೋಡಿ' ನರಕಿ ಶಿವದ್ರೋಹಿ' ಎಂದು ರಾಮಿ ತಂದೆ ಬೈಯ್ಯುತ್ತಾನೆ.

ಜಿನಭಕ್ತನೂ 'ದಂಬಿನ ಗೊರವಾ' ಎಂದು ಪ್ರತಿ ನುಡಿದು ಕೊನೆಗೆ ಅಣೆ ಪ್ರಮಾಣಗಳಿಗೆ ಮುಂದುವರಿಯುತ್ತದೆ. 'ಹಿಂದಿನ ಮಾತೇಕೆ ? ಇಂದು ನಿನ್ನ ತಲೆ ಕಡಿದು ಮತ್ತೆ ಪಡೆ ಆಗ ನಾವೇ ಜಿನಪ್ರತಿಮೆಗಳನ್ನು ಬಿಸಾಡುವೆವು; ಲಿಂಗ ಪ್ರತಿಷ್ಠೆ ಮಾಡುವೆವು; ಎಂದು ಆಹ್ವಾನವೊಡ್ಡಿದ ಜಿನಭಕ್ತನ ಮಾಲೆಗೊಪ್ಪಿ ಗಣಸಮೂಹ, ಜೈನ ಸಮುದಾಯದ ಮಧ್ಯೆ ರಾಮಿ ತಂದೆಯು ಭಾಷಾಪತ್ರ ಬರೆಯಿಸಿ ಹೊನ್ನ ತಂದೆ ಮತ್ತು ದೇವರಸನನ್ನು ಸಾಕ್ಷಿದಾರರನ್ನಾಗಿಸಿ ಮಾಡಿದ ಪ್ರತಿಜ್ಞೆಯನ್ನು ಈಡೇರಿಸುತ್ತಾನೆ. ಆದರೆ ಇದು ಕೌಟಿಲ್ಯವೆಂದು ಜೈನರು ಆಕ್ಷೇಪಿಸಿ ತರಿದ ಶರೀರವನ್ನು ಏಳು ದಿನಕ್ಕೆ ಜೋಡಿಸಬೇಕೆಂದು ಹೇಳುತ್ತಾರೆ. ಇದಕ್ಕೂ ರಾಮಿತಂದೆಯೊಪ್ಪುತ್ತಾನೆ. ಆಗ ನಾನೂರೊಡೆಯರು ಕಂಕಣಗಟ್ಟಿ ಜಿನಮೂರ್ತಿಗಳನ್ನು ಪುಡಿ ಮಾಡುವ ಸಂಕಲ್ಪಗೈಯ್ಯುತ್ತಾರೆ. ಮುಂದೆ ಶರೀರಕ್ಕೆ ಕಾವಲಿಟ್ಟು ಹೊನ್ನ ತಂದೆಗಳು ಶಿರವಿಟ್ಟ ಹರಿವಾಣ ಹೊತ್ತು ಆಯುಧಗಳೊಡನೆ, ಭಾಷೆಯ ಗಣಗಳೊಡನೆ ಭಕ್ತರ ಸಮೇತ ಪುಲಿಗೆರೆ, ಹಂಪಿಯಾದಿ ಅನೇಕ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ

ತಿರುಗಿ ಅಬ್ಲೂರಿಗೆ ಬಂದು ಶರೀರಕ್ಕೆ ಜೋಡಿಸಿದಾಗ ಕೈಯಲಗು ಸಮೇತ ಗುಡುಗುತ್ತಲೇ ಜೀವ ತಳೆದು ಎದ್ದನಂತೆ ರಾಮಿತಂದೆ.

ಜೈನರು ಹೆದರಿ ಓಡುತ್ತಿರುವಾಗ ಏಕಾಂತರಾಮಿ ತಂದೆ ಕೂರಲಗನ್ನು ತಿರುವುತ್ತ 'ಪರಿದ' ಅಟ್ಟಿದ' ಓಡಿಸಿದ' ಇತ್ತ ಶಿವಭಕ್ತರನ್ನು ಕೈಬೀಸಿ ಕರೆದು ಬಸದಿಯಲ್ಲಿ ನೆರೆಯಿಸಿದನು. ಅವರು ಜಿನಪ್ರತಿಮೆಗಳನ್ನು ಕಿತ್ತು; ಬಿಸಾಡಿದರು. ಎತ್ತಿದರು. ಶಿವಲಿಂಗಗಳನ್ನು ತರಿಸಿ ನಾನಾ ಮುಹೂರ್ತಗಳಿಂದ ಅಲ್ಲಿ ಲಿಂಗಪ್ರತಿಷ್ಠೆ ಮಾಡಿ ಬಸದಿಗಳನ್ನು ಶಿವದೇವಾಲಯಗಳನ್ನಾಗಿ ಪರಿವರ್ತಿಸಿದರೆಂದು ಅಷ್ಟೇ ಅವೇಶಮುಖಿಯಾಗಿ ಚಿತ್ರಿಸಿದ್ದಾನೆ ಹರಿಹರ. ಇಂತಹ ಜೈನ ಸಂಹಾರಕರಿಗೆ 'ಜೈನವನ ದಾವಾಗ್ನಿ, ಜೈನಕುಲ ಕುಮುದ ಮಾರ್ತಾಂಡ, ಅರುಹಕುಲ ವಿಲಯಾಗ್ನಿ, ಜೈನ ಹರಿ ಶರಭಮುಖ ಎಂಬಂತಹ ಬಿರುದಾವಳಿಗಳಿದ್ದುದನ್ನು ರಗಳೆಗಳು ವ್ಯಕ್ತಗೊಳಿಸುತ್ತವೆ."[೧೨]

ಬ್ರಹ್ಮೇಶ್ವರ ದೇವಾಲಯದ ರಂಗಮಂಟಪದಲ್ಲಿ ನಡೆದ ಪ್ರತಿಜ್ಞಾವಿಧಿ, ಬರೆಸಿದ ಭಾಷಾಪತ್ರ, ಕೈಕೊಂಡ ಚಟುವಟಿಕೆ ನೋಡಿದರೆ ಧಾರ್ಮಿಕ ವಿಷಯಗಳಿಗೆ ದೇವಾಲಯಗಳು ಅವುಗಳಲ್ಲಿನ ರಂಗಮಂಟಪಗಳು ಕಾರಣ ಕ್ಷೇತ್ರಗಳಾಗಿದ್ದವು. ಕೇಂದ್ರ ಸ್ಥಾನವಾಗಿದ್ದವೆನಿಸುತ್ತದೆ. ಪ್ರಸ್ತುತ ಏಕಾಂತರಾಮಿ ತಂದೆ ಜೈನ ಸಂಹಾರ ಸತ್ರದ ನಾಯಕನಾಗಿರಬೇಕು. ಶಾಸನಗಳೂ ಈ ವಿಷಯ ಹೊತ್ತಿವೆಯೆಂದರೆ ಆತ ಜಿನಮತ ವಿರೋಧಕ್ಕೆ ಸಾಕಷ್ಟು ಪ್ರಸಿದ್ಧಿ ಪಡೆದಿದ್ದಾನೆ. ಪವಾಡದ ಆವರಣ ತೆಗೆದರೆ ಜೈನಮತ ಪ್ರಾಬಲ್ಯವನ್ನು ತಡೆಗಟ್ಟಿ ಶಿವಮತ ಪ್ರಸಾರ ಮಾಡುವುದಕ್ಕೆ ಈ ಸಂಘರ್ಷಗಳು ನಡೆದು ಅವು ಜೀವಹಿಂಸೆ, ವಸ್ತು ಭಂಜನೆ, ಮೂರ್ತಿ ಭಂಜನೆಯಂತಹ ಕ್ರಿಯೆಯಲ್ಲಿ ಮುಂದುವರಿದು ಮನಪರಿವರ್ತನೆ, ಬಸದಿ ಪರಿವರ್ತನೆ, ಲಿಂಗಾಪ್ರತಿಷ್ಠಾಪನೆಯಲ್ಲಿ ಅಂತ್ಯಗೊಂಡಿವೆಯೆನಿಸುತ್ತದೆ.

'ಮೃಢನ ಭಕ್ತರು ಮುಳಿದರೆ ಏನುವಂ ಬಗೆವರೆ' ಎಂಬ ಹರಿಹರೋಕ್ತಿಯನ್ನು ನೆನೆಯಬೇಕು. ಜೈನರ ಉಪಟಳ ಹೆಚ್ಚಾದಾಗ ಆ ಮಾತಿನಂತೆ ಶಿವಭಕ್ತರು ಒಗ್ಗಟ್ಟಾಗಿ ಸಂಹಾರ ಕಾರ್ಯ ನಡೆಸುತ್ತಿದ್ದರು. ಮುನ್ನೂರೊಡೆಯರು, ನಾನುರೊಡೆಯರು, ಬಾವನ್ನವೀರರು, ತೇರಸರು, ಪನ್ನಿಚ್ಛಾಸಿರ ಒಡೆಯರು, ಭಾಷಾಗಣ ಸಮಿತಿಯವರು ಇವರೆಲ್ಲ ತಮ್ಮ ಮತಧರ್ಮ ರಕ್ಷಣೆಯ ಭಾರ ಹೊತ್ತವರೆನಿಸುತ್ತದೆ. ಪರಸ್ಪರ ಪರಿಚಯ ಮಾಡಿಕೊಳ್ಳುವಾಗ ನಿಮ್ಮ ಮಠ ಯಾವುದು ? ಎಂದು ಕೇಳುತ್ತಿದ್ದರು. ಆಗ ತಮ್ಮ ಆರಾಧ್ಯ ದೈವದ ಹೆಸರು ಹೇಳುವ ಮೂಲಕ ಶಿವಭಕ್ತರನ್ನು ಗುರುತಿಸುತ್ತಿದ್ದರೆಂದು ಸೂಚಿಸುತ್ತದೆ. ಶಿವಭಕ್ತರನ್ನು 'ಗೊರವ'ರೆಂದು ಕರೆಯುತ್ತಿದ್ದರು. ವೈಜಕವ್ವೆಯ ಗಂಡ, ಆದಯ್ಯನ ಅತ್ತೆ, ಮಾವಂದಿರು, ಅಬ್ಬಲೂರಿನ; ಜೈನರು ಹಾಗೆ 'ಗೊರವ'ರೆಂದು ಕರೆದ ವಿವರಗಳು ರಗಳೆಯಲ್ಲಿ ಬಂದಿವೆ. ಹೀಗೆ

ತರ್ಕಮುಖಿ, ಪವಾಡಮುಖಿ, ಸಂಘರ್ಷಮುಖಿ ಪ್ರಯೋಗಗಳು ಹರಿಹರನಲ್ಲಿದ್ದದು ಕಂಡುಬರುತ್ತದೆ.

ತೀವ್ರ ಖಂಡನೆ, ವೇದ ಖಂಡನೆ ಮಾಡುವ ಹರಿಹರ ಪುರೋಹಿತ ವರ್ಗವನ್ನು, ಕ್ಷತ್ರಿಯ ವರ್ಗವನ್ನು ಬಲ್ಲಂತೆ ಟೀಕಿಸುತ್ತಾನೆ. ಅರಸು ಪರಧರ್ಮವಾದ ವೈಷ್ಣವದಲ್ಲಿ ಈ ವಿಪ್ರರು, ಕ್ಷತ್ರಿಯರು ನಿಶ್ಚಿಂತೆಯಿಂದ ಬದುಕಿದವರು. ಇಂತಹ ವೈಷ್ಣವ ಪ್ರಭಾವದಿಂದ ತನ್ನ ಶಿವಮತ ಮೇಲೆಳಬೇಕಾಗಿತ್ತು. ಈ ಸಂದರ್ಭದಲ್ಲಿಯೂ ಪವಾಡ ಕಲ್ಪಿತ ಅನೇಕ ಘಟನೆಗಳು ರಗಳೆಯಲ್ಲಿ ದೊರಕುತ್ತವೆ. "ನಂದಿಯ ಮೊಗವಾಡದ ಶಂಕರದಾಸಿಮಯ್ಯನು ಜಯಸಿಂಹರಾಜನ ವಿಷ್ಣು ಪ್ರತಿಮೆಯನ್ನು ಸುಟ್ಟುಹಾಕಿದರು; ಹಾವಿನಹಾಳ ಕಲ್ಲಯ್ಯ ನಾಯಿಯಿಂದ ವೇದದ ಸಾಲುಗಳನ್ನು ಓದಿಸಿದುದು; ಕಾರಣಿಕ ರೇವಣಸಿದ್ಧನು ವಿಷ್ಣು ಪ್ರತಿಮೆಯನ್ನು ನುಡಿಸುವುದಕ್ಕಾಗಿ ತನ್ನ ಪುಲ್ಲಿಂಗದಿಂದ ವೀರ್ಯ ತೆಗೆದು ವಿಷ್ಣು ಪ್ರತಿಮೆಯ ನೆತ್ತಿಯ ಭಾಗಕ್ಕೆ ಒತ್ತುತ್ತಾನೆ ಎಂದು ಕವಿ ನಿರೂಪಿಸುತ್ತಾನೆ."[೧೩] ಇಲ್ಲೆಲ್ಲ ಪವಾಡಗಳ ಅನಾವರಣ ಮಾಡಿದರೆ ವಾದ ವಿವಾದ, ತರ್ಕ, ಚರ್ಚೆ, ಸಂಘರ್ಷಗಳ ಮೂಲಕ ವೈಷ್ಣವ ಮತ ಭಂಗವು ಶಿವಭಕ್ತರಿಂದ ನಡೆದುದು ರಗಳೆಗಳಲ್ಲಿ ಕಂಡು ಬರುತ್ತದೆ. ಇದಿಷ್ಟು ಸಂಘರ್ಷದ ಬಗ್ಗೆ ವಿವರಿಸಲಾಗಿದೆ. ವಿಸ್ತಾರದ ಅಧ್ಯಯನದ ಅನುಕೂಲಕ್ಕೆ ನಾಲ್ಕು ವಿಭಾಗಗಳನ್ನಾಗಿ ಮಾಡಿಕೊಂಡು ಶಿವಭಕ್ತರು ನಡೆಸಿದ ಹೋರಾಟ ಕುರಿತು ಚರ್ಚಿಸಿ ವಿಶ್ಲೇಷಿಸಲಾಗಿದೆ.

೧. ಭಕ್ತ, ಭಕ್ತರ ನಡುವಿನ ಸಂಘರ್ಷ.

೨. ಜೈನರು, ಶಿವಭಕ್ತರ ನಡುವಿನ ಸಂಘರ್ಷ

೩. ವೈಷ್ಣವ ಧರ್ಮ, ಶಿವಭಕ್ತರ ನಡುವಿನ ಸಂಘರ್ಷ

೪. ಅರ್ಥ ಸಂಘರ್ಷ.

## ೧. ಭಕ್ತ, ಭಕ್ತರ ನಡುವಿನ ಸಂಘರ್ಷ

ಹರಿಹರ ಕಾವ್ಯ ಬರೆಯ ಹೊರಟಿದ್ದು, ಒಂದು ಚೌಕಟ್ಟಿನ ಅಡಿಯಲ್ಲಿ, ಭಕ್ತಿಯನ್ನು ಪ್ರಧಾನವಾಗಿಟ್ಟುಕೊಂಡು ಆ ಚೌಕಟ್ಟಿನ ಅಡಿಯಲ್ಲಿಯೇ ಪ್ರತಿಯೊಂದು ರಗಳೆಯನ್ನು ಕಟ್ಟುವ

ಪ್ರಯತ್ನ ಮಾಡಿದ್ದಾನೆ. ಕಾವ್ಯಕ್ಕೆ ಯಾವ ವಸ್ತುವನ್ನೇ ಆರಿಸಿಕೊಳ್ಳಲಿ, ಅದರ ಮೂಲಕ ಭಕ್ತಿಯನ್ನು ಚಿತ್ರಿಸುತ್ತಾನೆ. ಆದರೆ, ಅಧ್ಯಯನದ ವಸ್ತು ಇದಲ್ಲ, ಭಕ್ತ–ಭಕ್ತರ ನಡುವೆ ಸಂಘರ್ಷ ಹುಟ್ಟು ಹಾಕಿ ಭಕ್ತರಲ್ಲಿರುವ ನಿಜವಾದ ಶಿವಭಕ್ತಿ ಗುರುತಿಸುವಂತಹ ಸನ್ನಿವೇಶ ಬಹುತೇಕ ರಗಳೆಗಳಲ್ಲಿದೆ.

**ಸಾಮವೇದಿ ರಗಳೆ**

ಈ ರಗಳೆಯಲ್ಲಿ ಸಾಮವೇದಿ ಎಂಬ ಬ್ರಾಹ್ಮಣ ಪುರೋಹಿತ, ಶ್ವಪಚನೆಂಬ ಶಿವಭಕ್ತ ಇವರಿಬ್ಬರು ಭಕ್ತರೆ ಆದರೆ, ಸ್ವಲ್ಪ ಭಿನ್ನತೆಯಿದೆ. ಉತ್ತರ ಪ್ರದೇಶದ ಛತ್ತೀಸಪುರ ಎಂಬಲ್ಲಿ ಸಾಮವೇದಿಯೆಂಬ ಬ್ರಾಹ್ಮಣನಿರುತ್ತಿದ್ದ ಅವನು ಸರ್ವ ವಿದ್ಯಾಪಾರಂಗತ ಅವನಿಗೆ ೩೫೦೦೦ ಶಿಷ್ಯರಿದ್ದರು. ಆ ಪುರದ ಅರಸು ಅವನ ಪಾಂಡಿತ್ಯ ಪ್ರಭಾವಗಳಿಗೆ ಮೆಚ್ಚಿ ೩೬ ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟಿದ್ದ ಸರ್ವಜನರು ಆತನನ್ನು ಪ್ರೀತ್ಯಾದರಗಳಿಂದ ಕಾಣುತ್ತಿದ್ದರು. ವಿದ್ಯಾಸಾಧನೆಯಿಂದ ಅವನು ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದ. ನಿತ್ಯ ಪ್ರಶಾಂತ ಸ್ಥಾನದಲ್ಲಿ ಕುಳಿತು ಶಿಷ್ಯರಿಗೆ ವೇದಾಧ್ಯಯನ ಮಾಡುವುದನ್ನು ಕಲಿಸುತ್ತಿದ್ದ.

ಒಂದುದಿನ, ಸಾಮವೇದಿ 'ಅರಣ್ಯ'ವನ್ನು ಓದಬೇಕೆಂದು ತನ್ನ ಶಿಷ್ಯರೊಡಗೂಡಿ ಅರಣ್ಯಕ್ಕೆ ಬಂದು ಅಶ್ವತ್ಥವೃಕ್ಷದ ಕೆಳಗೆ ಕುಳಿತು ವೇದಾಧ್ಯಯನ ಮಾಡುವ ರೀತಿಯನ್ನು ಕಲಿಸ ತೊಡಗಿದ. ಛಂದಸ್ಸು, ಋಕ್ಕು, ವೇದ ಇತ್ಯಾದಿಗಳನ್ನು ಹೇಳುತ್ತಿರಲು ಮಧ್ಯಾಹ್ನವಾಯಿತು. ಅಲ್ಲಿಗೆ ಪಾಠ ಮುಗಿಸಿ, ಗ್ರಾಮಕ್ಕೆ ಮರಳಲು ಶಿಷ್ಯರೆಲ್ಲ ಪಾದಚಾರಿಗಳಾಗಿ ನಡೆದರೆ ತಾನು ಗಗನಗಾಮಿಯಾಗಿ ಹೊರಟ, ಹಾಗೆ ಹೊರಟಿರುವಾಗ ಮಾರ್ಗ ಮಧ್ಯದಲ್ಲಿ ಶ್ವಪಚಯ್ಯನೆಂಬ ಭಕ್ತ ಹೂ ಪತ್ರಿಗಳಿಂದ ಶಿವನರ್ಚಿಸಿ ಆರೋಗಣೆಗೆಂದು ತನ್ನ ಜಾತಿಗನುಗುಣವಾಗಿ ಪಾತ್ರೆಗಳಲ್ಲಿದಿರಲು ನಾಯಿಯ ತಲೆಬುರುಡಿಯಲ್ಲಿ ಆಹಾರ ಸಿದ್ಧಗೊಳಿಸಲು ತೊಡಗಿದ್ದನು. ಒಮ್ಮೆಲೆ ಸಾಮವೇದಿ ಮೇಲೆ ಹೊರಟಿರುವುದನ್ನು ಕಂಡು ಅಲ್ಲಿಯೇ ಬಿದ್ದ ಕೆರಹಿನಿಂದ ಆ ಪದಾರ್ಥವನ್ನು ಮುಚ್ಚುತ್ತಾನೆ. ಹೀಗಾಗಿ ಸಾಮವೇದಿಗೆ ಅಚ್ಚರಿಯಾಗುತ್ತದೆ. 'ಇವನೆಂಥ ಭಕ್ತ ನಾನು ನೋಡಬಾರದೆಂದು ಪದಾರ್ಥವನ್ನು ಮುಚ್ಚಿ ನನಗೆ ಅವಮಾನ ಮಾಡಿದ; ಎಂದು ಸಿಟ್ಟಾಗುತ್ತಲೇ ಅವನ ಯೋಗಶಕ್ತಿಯೆಲ್ಲ ಮಾಯವಾಗಿ ಕೆಳಗಿಳಿದು ಬಿಟ್ಟ.

ಆಗ ನನಗೆ ಹೀಗಾಗಲು ಶ್ವಪಚಯ್ಯನೇ ಕಾರಣವೆಂದು ಅವನಿದ್ದಲ್ಲಿಗೆ ಬಂದು ಮಾತನಾಡಿಸಿದ ಅವ ಎಷ್ಟು ಪರಿಯಿಂದ ಮಾತನಾಡಿದರೂ ಮಾತನಾಡಲಿಲ್ಲ. ಸೊಕ್ಕಿದವನೆಂದು ಅವನ ಮೇಲೆ ಸಿಟ್ಟಾಗಿ ಹಾಗೆಯೇ ಮನೆಗೆ ನಡೆದ. ಮತ್ತೆ ಮರುದಿನವೂ ಬಂದು ಮಾತನಾಡಿಸಿದ. ಆಗಲೂ

ಮಾತನಾಡಲಿಲ್ಲ. ಸಾಮವೇದಿಗೆ ತನ್ನ ಸತ್ವವೆಲ್ಲ ಮಾಯವಾದುದನ್ನು ಕಂಡು ಭಯವಾಯಿತು. ಅವನು ಚಿಂತೆಗೊಳಗಾದ ಶಿವ ಅವನ ಮನಸ್ಸು ಸ್ವಲ್ಪ ಮಟ್ಟಿಗೆ ಪರಿವರ್ತನೆಯಾದುದನ್ನು ಕಂಡು ನೀನು ಹೀಗೆ ಶ್ವಪಚಯ್ಯನನ್ನು ಕಾಣಲು ಹೋಗಬೇಡ. ಅವನು ಮಹಾಶಿವಭಕ್ತ. ಆದುದರಿಂದ ನೀನು ಶಿವಲಾಂಛನಧಾರಿಯಾಗಿ ಅವನನ್ನು ಕಾಣು, ಅಂದೆ ಮಾತನಾಡುತ್ತಾನೆ ಎಂದು ಹೇಳಿ ಮಾಯವಾದ. ಸಾಮವೇದಿ ಸಂತೋಷದಿಂದ ಬೆಳಗಾಗುತ್ತಲೇ ಎದ್ದು ವಿಭೂತಿ ರುದ್ರಾಕ್ಷಿಧಾರಣೆ ಮಾಡಿ ಶಿವಮಂತ್ರವನ್ನು ಜಪಿಸುತ್ತ ಶ್ವಪಚಯ್ಯನಲ್ಲಿಗೆ ಬರುತ್ತಾನೆ.

ಅವನು ಶಿವಲಾಂಛನವನ್ನು ಕಂಡು ಮಾತನಾಡಿಸುತ್ತಾನೆ. ಆಗ ಸಾಮವೇದಿ ನಾನು ಗಗನ ಮಾರ್ಗವಾಗಿ ಬರುವಾಗ ಕುದಿದ ಪಾತ್ರೆಯನ್ನು ಕೆರಹಿನಿಂದೇಕೆ ಮುಚ್ಚಿದಿರಿ' ಎಂದು ಕೇಳಲು ಲಿಂಗಾರ್ಚನೆಯ ಕಾಲದಲ್ಲಿ ಭವಿಗಳೊಡನಾಟ ಭವಿಗಳ ಸೋಂಕು ಸಲ್ಲದು ಎಂದು ಹೇಳಿದ. ಆಗ ಸಾಮವೇದಿ ನೀನು ಕುದಿಸುವ ಅನ್ನದ ಸುತ್ತಲೂ ಗಿಡ, ಮರಗಳಿವೆ. ಅವು ಭಕ್ತರೆ ? ಮೃಗಪಕ್ಷಿಗಳು ನಡೆದಾಡುತ್ತವೆ. ಅವು ಭಕ್ತರೆ ? ಅವು ನಿನ್ನನ್ನೂ ನೋಡಲಾರವೆ ? ಎಂದು ಕೇಳುತ್ತಾನೆ. ಅದಕ್ಕೆ ಶ್ವಪಚಯ್ಯ ಗಿಡಮರದ ಹೂಪತ್ರಿಗಳು ಶಿವನಿಗರ್ಪಿತವಾಗುತ್ತವೆ. ಈ ಮರಕ್ಕೆ ಕಾಮವುಂಟೆ ? ಲತೆಗೆ ಕ್ರೋಧವುಂಟೆ ? ಆದರೆ ಅವೆಲ್ಲ ನಿನ್ನಲ್ಲಿವೆ ಆದುದರಿಂದ ನಿನ್ನ ಸೋಂಕು ತಿಲಮಾತ್ರವೂ ಅನ್ನಕ್ಕೆ ತಗುಲಬಾರದು, ಇಲ್ಲಿ ಮೃಗಗಳು ಹುಲ್ಲು ತಿಂದು ನೀರು ಕುಡಿದು ಮಾಯಮೋಹದಲ್ಲಿ ಸಿಲುಕಿಲ್ಲ. ಗಗನದಲ್ಲಿ ನಡೆಯುತ್ತೇನೆಂಬ ಅಹಂಕಾರ ನಿನಗಿದೆ.

ಗಗನದಲ್ಲಿ ಹಕ್ಕಿ ಹಣ್ಣೆಲೆಗಳು ನಿನ್ನಂತೆ ಹಾರಾಡುತ್ತವೆ. ನೀನು ಶಿವನನ್ನು ಪೂಜಿಸದ ಪಾಪಿ. ಅದಕ್ಕಾಗಿ ಗಿಡಮರ, ಪಶು ಪಕ್ಷಿಗಳಿಗಿಂತಲೂ ನೀನು ಕಡೆ ನಿನ್ನಂಥವನ ಮುಖವನ್ನು ಭಕ್ತರು ನೋಡಲಾರರು ಎಂದು ಜರಿಯುತ್ತಾನೆ. ಅಲ್ಲದೆ ನೋಡು ನಿನ್ನ ನೆರಳು ಬಿದ್ದಷ್ಟು ಭಾಗ ಆಹಾರವೆಲ್ಲ ಕೊಳೆತು ದುರ್ಗಂಧ ವಾಸನೆಯಾಗಿದೆ. ಕೆರಹು ಮುಚ್ಚಿದ ಭಾಗ ಪುಷ್ಪರೂಪವಾಗಿ ಸುವಾಸನೆ ಬಿರುತ್ತಿದೆ ಎಂದು ತೋರಿಸುತ್ತಾನೆ. ಅದನ್ನು ಕಂಡು ಸಾಮವೇದಿ ಬೆರಗಾಗುತ್ತಾನೆ. ತಕ್ಷಣ ಅವನು ಮನ ಪರಿವರ್ತನೆ ಹೊಂದಿ ಭಕ್ತಿ ಭಾವ ಬೆಳೆಯುತ್ತದೆ. ಹೀಗಾಗಿ ಸಾಮವೇದಿ ಕೊನೆಗೆ ಶ್ವಪಚಯ್ಯನ ಶಿಷ್ಯನಾಗಿ ಪರಿವರ್ತನೆ ಹೊಂದುತ್ತಾನೆ. ಇಲ್ಲಿ ಶ್ವಪಚಯ್ಯನೂ ಭಕ್ತ, ಸಾಮವೇದಿಯೂ ಭಕ್ತ. ಆದರೆ, ಇವರಿಬ್ಬರ ಮಧ್ಯೆ ಘರ್ಷಣೆ ಏರ್ಪಟ್ಟು ಸಾಮವೇದಿ ಶ್ವಪಚಯ್ಯ ಮಹಾನ್ ಭಕ್ತಿಗೆ ಶರಣಾಗುವ ಪರಿ ಬಗ್ಗೆ ಹರಿಹರ ಕಾವ್ಯದಲ್ಲಿ ಚಿತ್ರಿಸಿದ್ದಾನೆ. ಹೀಗೆ ಹರಿಹರನ ಪುಷ್ಪರಗಳೆ, ಪಂಪಾಕ್ಷೇತ್ರದ ರಗಳೆಗಳಂಥವುಗಳನ್ನು ಬಿಟ್ಟರೆ ಮಿಕ್ಕವೆಲ್ಲ ಶರಣರ ಚರಿತ್ರೆಗಳು. ಇವರಲ್ಲಿ ೬೩ ಪುರಾತನರು ಈ ಮೊದಲೇ ತಮಿಳು ಪೆರಿಯ ಪುರಾಣದಲ್ಲಿ ಮೂರ್ತಿಭವಿಸಿದವರು.

ಹರಿಹರ ತನ್ನ ಪುರಾತನರ ರಗಳೆಗಳ ವಸ್ತುಗಳು ಮಾತ್ರ ಈತನ ಹೊಸ ಆಯ್ಕೆ, ಈತನ ಹೊಸ ಸೃಷ್ಟಿ. ಪುರಾತನ, ನೂತನ ವರ್ಗದ ಬಹುಜನ ಶರಣರು ವ್ಯವಸ್ಥೆಯ ವಿರುದ್ಧ ಹೋರಾಟ ನಡೆಸಿದವರು. ಹೀಗಾಗಿ ಹರಿಹರನ ಪ್ರತಿಯೊಂದು ರಗಳೆಯಲ್ಲೂ ಸಂಘರ್ಷ ಅನಿವಾರ್ಯವಾಗಿ ತೋರಿ ಬರುತ್ತದೆ. ಆತನ ಯಾವುದೇ ರಗಳೆಯ ಪಾತ್ರಗಳಲ್ಲಿ ಎರಡು ಪಕ್ಷಗಳು ಏರ್ಪಡುತ್ತವೆ. ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣ, ಸಂಬೋಳಿ ನಾಗಿದೇವ, ಮೊದಲಾದ ಬಸವ ಸಂವಿಧಾನವನ್ನು ಒಪ್ಪಿಕೊಂಡ ಪ್ರಜೆಗಳದು ಒಂದು ವರ್ಗ, ಬಿಜ್ಜಳ, ಪುರೋಹಿತರು ಮೊದಲಾದ ಬಿಜ್ಜಳ ಸಂವಿಧಾನವನ್ನು ಒಪ್ಪಿಕೊಂಡ ಪ್ರಜೆಗಳದು ಇನ್ನೊಂದು ವರ್ಗ, ಈ ಎರಡು ವರ್ಗಗಳ ಹೋರಾಟ ಬಸವರಾಜ ದೇವರ ರಗಳೆಯ ಉದ್ದಕ್ಕೂ ಕೇಳಿಸುತ್ತದೆ. ಹೀಗೆಯೇ ನಿರಂಕುಶಮತಿತ್ವದ ಕೊಂಡಗುಳಿ ಕೇಶಿರಾಜ-ಸಾರ್ವಭೌಮತ್ವದ ವಿಕ್ರಮಾದಿತ್ಯ, ಭಕ್ತಿಯ ಕಣ್ಣಪ್ಪ-ಕರ್ಮದ ವಿಪ್ರ, ಭೋಗಲಾಲಸೆಯ ಕೌಶಿಕ, ಯೋಗಶೀಲತೆಯ ಮಹಾದೇವಿ ಇತ್ಯಾದಿ ಪಕ್ಷ-ಪ್ರತಿಪಕ್ಷಗಳು ಅಲ್ಲಲ್ಲಿ ಗೋಚರಿಸುವುದನ್ನು ಕಾಣಬಹುದು.

ಹರಿಹರನ ಧೋರಣೆಗಳಲ್ಲಿ ಒಂದು ಅಂತರಂಗದ ಸಂಘರ್ಷ, ಇನ್ನೊಂದು ಬಹಿರಂಗದ ಸಂಘರ್ಷ ಹೀಗೆ ಸಂಘರ್ಷದ ನೆಲೆಗಳು ಕಂಡುಬರುತ್ತವೆ. ಇವುಗಳಲ್ಲಿ ಒಂದು ಆತ್ಮಶುದ್ಧಿಗೆ ಸಂಬಂಧಿಸಿದುದು, ಇನ್ನೊಂದು ಸಮಾಜ ಶುದ್ಧಿಗೆ ಸಂಬಂಧಿಸಿದುದು. ಹರಿಹರನ ಎಲ್ಲಾ ಕಥಾನಾಯಕರು. ಅಂತರಂಗ ಶುದ್ಧಿಯ ವ್ಯಕ್ತಿಗತ ಹೋರಾಟದಲ್ಲಿ ಮೊದಲು ಜಯಶಾಲಿಯಾದವರು; ಆ ಮೇಲೆ ಅವರಲ್ಲಿ ಕೆಲವರು ಬಾಹ್ಯದಲ್ಲಿ ವ್ಯಕ್ತಿ-ವ್ಯಕ್ತಿನಡುವೆ ಸಂಘರ್ಷ-ವ್ಯಕ್ತಿ -ಸಮಾಜದ ಸಂಘರ್ಷಕ್ಕಿಳಿದವರು. ಕೌಶಿಕ 'ಮಹಾದೇವಿಗಳಂಥವರ ಮಧ್ಯದ ಘರ್ಷಣೆ ವ್ಯಕ್ತಿ ಮಟ್ಟದ ಹೋರಾಟವಾದರೆ ಬಸವಣ್ಣ-ಬಿಜ್ಜಳರ ನಡುವಿನದು ವ್ಯಕ್ತಿ -ಸಮಾಜದ ಮಟ್ಟದ ಹೋರಾಟವಾಗಿದೆ.

ಸಮಾಜವೆನ್ನುವುದು ನಾವು ರೂಪಿಸಿಕೊಂಡ, ಪ್ರಧಾನವಾಗಿ ಸ್ವಾರ್ಥಿಗಳು ಅನುಕೂಲಿಸಿಕೊಂಡ ಒಂದು ವ್ಯವಸ್ಥೆ. ಪುರೋಹಿತರಿಂದ ವರ್ಣಭೇದ, ರಾಜರಿಂದ ವರ್ಗಭೇದ, ಪುರುಷರಿಂದ ಲಿಂಗಭೇದ ವ್ಯವಸ್ಥೆಗಳು ನಮ್ಮ ಸಮಾಜದಲ್ಲಿ ನಿರ್ಮಾಣವಾಗಿದೆ. ಹರಿಹರ ಅನೇಕ ದಾರಿಗಳಿಂದ ಈ ಭೇದಗಳ ವಿರುದ್ಧ ಧ್ವನಿಯೆತ್ತುತ್ತಾನೆ. ಪಾತ್ರಗಳ ಮೂಲಕ ಹೋರಾಟವನ್ನು ನಡೆಸಿದ ಸನ್ನಿವೇಶವೂ ರಗಳೆಗಳಲ್ಲಿ ವ್ಯಕ್ತವಾಗಿದೆ. ವರ್ಣಭೇದ ಭಾರತೀಯ ಜನಾಂಗದ ಒಂದು ಅಭಿಶಾಪ. ಈ ಭೇದದಿಂದ ಸಮಾಜ ಸ್ಪೃಶ್ಯ-ಅಸ್ಪೃಶ್ಯವೆಂದು ಎರಡು ನೆಲೆಗಳಲ್ಲಿ ಸ್ಥಾವರಗೊಂಡಿದೆ. ಇಲ್ಲಿಯ ಮಾದರ ಚೆನ್ನಯ್ಯನ ರಗಳೆ, ತಿರುನಾಳ್ವೋವರ ರಗಳೆಗಳಲ್ಲಿ ಈ ಸ್ಥಾವರಗಳು ತಾವಾಗಿಯೇ ಜಂಗಮಗೊಳ್ಳುವಂತೆ ಘಟನೆಗಳನ್ನು ಸಂಯೋಜಿಸಲಾಗಿದ್ದರೆ ಸಾಮವೇದಿ ರಗಳೆ, ಕೆಂಭಾವಿ

ಭೋಗಣ್ಣನ ರಗಳೆ, ಬಸವರಾಜ ದೇವರ ರಗಳೆಗಳಲ್ಲಿ ಘಟನೆಗಳು ಸಂಘರ್ಷರೂಪ ತಾಳುವ ಮೂಲಕ ಅಲ್ಲಿಯ ಮಾತು-ಕೃತಿಗಳಲ್ಲಿ ಕಿಡಿ ಸಿಡಿಯುತ್ತ ಹೋಗುತ್ತದೆ; ಬೆಳಕಿನೊಂದಿಗೆ ಬೆಂಕಿಯೂ ಎದ್ದು ಬರುತ್ತದೆ.

ಶಿವನು ಚಕ್ರವರ್ತಿ ಚೋಳನಲ್ಲಿ ಉಣ್ಣದೆ ಮಾದರ ಚೆನ್ನಯ್ಯನಲ್ಲಿ ಉಣ್ಣುವುದು, ಇದನ್ನು ತಿಳಿದ ಚೋಳ ಆನಂದ ಆಶ್ಚರ್ಯದಿಂದ ಹೊಲಗೇರಿಗೆ ಬರುವುದು, ಚೆನ್ನಯ್ಯನಿಗೆ ನಮಸ್ಕರಿಸಿ ಶರ್ವನೊಡನುಂಡ ನಿಮ್ಮಯ ಜಾತಿಗಾಂ ಸರಿಯೇ ? ಸರ್ವಜ್ಞ ನಿಮ್ಮ ಕೆರ್ಪಿಂಗೆನ್ನ ಶಿರಸರಿಯೆ ? ಎಂದು ನುಡಿಯುವುದು, ಪಟ್ಟಗಜದ ಮೇಲೆ ಮಾದಿಗನಾದ ಚೆನ್ನಯ್ಯನನ್ನು ಮೆರವಣಿಗೆ ಮಾಡುವುದು. ಇವು ಜಾತಿಭೇದ ನಿರ್ಮೂಲನವನ್ನು ಭಕ್ತಿಗೆ ಜಾತಿ ಸೂಚಕವಿಲ್ಲವೆಂಬುದನ್ನು ಸಾರುವ ಅಂಶಗಳಾಗಿವೆ. ಚಕ್ರವರ್ತಿಯ ಮಕುಟಮಂಡಿತ ಶಿರಸ್ಸು ಅಸ್ಪೃಶ್ಯನ ಧೂಳುಮುಸುಕಿದ ಪಾದಗಳನ್ನು ಸ್ಪರ್ಶಿಸುವುದು, ಪೂಜ್ಯನ್ ಅಮರಾವಳಿಯೊಳಗೆನಿಸಿ ಬದುಕುವ ಚೋಳನು ಹಿರಿಯ ಕೇರಿಯ ಕಾಣುತುರವಣಿಸಿ ಬರುವುದು ಅಸಾಮಾನ್ಯ ದಾಖಲೆಗಳಾಗಿವೆ. ಇಲ್ಲಿ ಅಧಿಕಾರ ದೊಡ್ಡದಲ್ಲ ಅಂತರಂಗ ಶುದ್ಧಿ ದೊಡ್ಡವೆಂಬ ಅಂಶ ಅಡಗಿದೆ.

ದೇವರ ಜಾತ್ರೆಗೆ ಹೋಗಬೇಕೆಂದು ಶೂದ್ರನ ಹಂಬಲವನ್ನು ಪ್ರತಿಸಲವೂ ವಿಪ್ರ ಕೈತುಂಬ ಕೆಲಸಕೊಟ್ಟು ತಡೆಯುವುದು, ಕೊನೆಗೆ ಶೂದ್ರನಿಗೆ ದೇವರು ಒಲಿಯುವುದು ತಿರುನಾಳ್ಪೋವರ ರಗಳೆಯ ವಸ್ತುವಾಗಿದೆ. ದೈವತ್ವಕ್ಕೇರಬೇಕೆಂಬ ಶೂದ್ರನಿಗೆ ವಿಪ್ರ ಅಡ್ಡ ಬರುವುದನ್ನೂ ಶ್ರಮದ ಮೂಲಕ ಶೂದ್ರನನ್ನು ವಿಪ್ರ ಶೋಷಿಸುತ್ತಿರುವುದನ್ನು ಶುದ್ಧ ಭಕ್ತಿಗೆ ಶಿವನು ಒಲಿಯುವನೆಂಬುದನ್ನು ಈ ರಗಳೆ ಧ್ವನಿಸುತ್ತದೆ. ಆಕಾಶಗಾಮಿಯಾದ ವಿಪ್ರ ಸಾಮವೇದಿಯ ನೆರಳು ತಾನು ಬೇಯಿಸುತ್ತಿದ್ದ ನಾಯಿ ಮಾಂಸದ ಗಡಿಗೆಯ ಮೇಲೆ ಬೀಳಬಾರದೆಂದು ಶೂದ್ರನಾದ ಶ್ವಪಚಯ್ಯ ತನ್ನ ಕೆರವಿನಿಂದ ಮುಚ್ಚುವುದು ಸಾಮವೇದಿ ರಗಳೆಯ ವಸ್ತುವಾಗಿದೆ. ಭವಿಯಾಗಿದ್ದವನು ಸಾಮವೇಧಿ ಪಂಡಿತನಾಗಿದ್ದರೂ ಗಗನಗಾಮಿ ವಿದ್ಯಾಸಂಪತ್ತುಳ್ಳವನಾಗಿದ್ದರೂ ಶರಣ ಸಂವಿಧಾನದಲ್ಲಿ ಅವನಿಗೆ ಈ ಕವಡೆಯ ಬೆಲೆ ಇಲ್ಲವೆಂಬುದನ್ನು ಈ ರಗಳೆ ಸೂಚಿಸುತ್ತದೆ. ಅಸ್ಪೃಶ್ಯತೆ ನಿವಾರಣೆಯ ಉದ್ದೇಶವನ್ನು ಈ ಮೂರು ರಗಳೆಗಳು ಸಂಘರ್ಷದ ಮಾರ್ಗವನ್ನು ಬಿಟ್ಟು ಸೌಮ್ಯವಾಗಿ ಸಾಧಿಸುತ್ತವೆ. ಇಲ್ಲಿ ಚನ್ನಯ್ಯ 'ಚೋಳ, ತಿರುನಾಳ್ಪೋವ-ವಿಪ್ರ, ಶ್ವಪಚಯ್ಯ ಸಾಮವೇದಿ, ಭೋಗಣ್ಣ-ಚಂದಿಮರಸ ಹೀಗೆ ವ್ಯಕ್ತಿಮಟ್ಟದಲ್ಲಿ ಅಸ್ಪೃಶ್ಯತಾ ನಿರ್ಮೂಲನೆ ಘಟನೆಗಳು ಜರುಗಿದರೆ ಬಸವರಾಜ ದೇವರ ರಗಳೆಯಲ್ಲಿ ಮಾತ್ರ ಆಂದೋಲನದ ರೂಪದಲ್ಲಿ ಸಾಮಾಜಿಕ ಸಮಸ್ಯೆ ಚರ್ಚೆಗೆ ವಸ್ತುವಾಗುತ್ತದೆ. ಅಲ್ಲಲ್ಲಿ ತೀಕ್ಷ್ಣ ಹೋರಾಟದ ಧ್ವನಿ ಡಂಗುರ ಹೊಡೆದಂತೆ ಕೇಳಿಸುತ್ತದೆ.

ಆಸ್ಥಾನದಲ್ಲಿ ಬಸವಣ್ಣನು ಕೇತಕಿ ಪುಷ್ಪವನ್ನು ಇಷ್ಟಲಿಂಗಕ್ಕೆ ಅರ್ಪಿಸಿಕೊಳ್ಳಲು ಶೈವಾಗಮಂಗಳೊಳು ಕೇತಕಿ ಕುಸುಮಂ ಭೂತೇಶ್ವರಂಗೇರಿಸಲಾಗದೆಂಬುದುಂಟುತದಂ ಮಾಣ್ದಾಗಮಮಂ ಮೀರಿ ದಂಡನಾಯಕರ್ಕೂಡುವುದರಿದು ಎಂದು ನಾರಾಯಣಭಟ್ಟ ನುಡಿದರೆ ಎಲೆ, ಮರಳು ವಿಪ್ರಾ.. .. .. . ಎಲೆ ಕರ್ಮದ ಕಡುಜಡನೆ ಕೇಳ್ಕೇಳು, ದೇವಂ ಭಕ್ತರ್ ಕೊಟ್ಟೊಡೆ ಕೆಕೊಳ್ವಂ' ಎಂದು ವಾದಿಸುತ್ತ, ಕುಸುಮಗಳಲ್ಲಿಯೂ ಕಲ್ಪಿಸಿದ್ದ ಸ್ಪೃಶ್ಯಾಸ್ಪೃಶ್ಯತೆಯನ್ನು ತಳ್ಳಿ ಹಾಕುತ್ತಾನೆ. ಇದೇ ರೀತಿ ಸಂಭೋಳಿ ನಾಗಿದೇವನ ಪ್ರಸಂಗವನ್ನೂ ಉದಾಹರಣೆಯಾಗಿ ಕೊಡಬಹುದು. ಇವೆಲ್ಲ ಹರಿಹರನ ಹೋರಾಟ ಧ್ವನಿಗೆ ಸಾಕ್ಷಿಯಾಗಿದೆ. ಸ್ಪೃಶ್ಯಾಸ್ಪೃಶ್ಯತೆಯ ಪ್ರಶ್ನೆ ಎತ್ತಿಕೊಂಡು ಒಬ್ಬ ಮಹಾಸಚಿವನನ್ನು, ಒಬ್ಬ ಮಹಾಪುರುಷನನ್ನು ನಡುಬೀದಿಯಲ್ಲಿ ನಿಲ್ಲಿಸಿ ನಡೆಸಿದ ಸಾರ್ವಜನಿಕ ನ್ಯಾಯವಿಚಾರಣೆ (ಬಿಜ್ಜಳ–ಬಸವಣ್ಣ), ಜಗತ್ತಿನ ಇತಿಹಾಸದಲ್ಲಿ ದಾಖಲಾಗುವಂತಹದು.

ಈ ಮುಖ್ಯ ಘಟನೆಗಳಲ್ಲದೆ ಪುರೋಹಿತರು ವ್ಯವಸ್ಥಿತವಾಗಿ ಪೋಷಿಸಿಕೊಂಡು ಬಂದಿದ್ದ ದಾನ, ಕರ್ಮಾಚರಣೆ, ಗೋಗ್ರಹಣಯುದ್ಧ ಮೊದಲಾದ ಮೌಲ್ಯ ಮತ್ತು ಆಚರಣೆಗಳನ್ನು ಹರಿಹರ ಆಗ ಪ್ರಶ್ನಿಸುತ್ತಾನೆ. ವಿಡಂಬಿಸುತ್ತಾನೆ. ತಳ್ಳಿ ಹಾಕುತ್ತಾನೆ. "ತಿಲದಾನದ ಕುಲಹೀನರಂ, ಗೋದಾನದ ಸಾಧಕರಂ, ಮಹಿಷೀದಾನದ ಸಾಹಸಿಗರಂ.. .. .. . ತಳಾಪುರುಷದ ದಾಳಿಕಾರರೆಲ್ಲಂ ನೆರೆದು ಅರಸಂಗೆ ಆಶೀರ್ವಾದಂಗೊಟ್ಟು" ಎನ್ನುವಲ್ಲಿ ಬ್ರಾಹ್ಮಣರು ವ್ಯವಸ್ಥೆಗೊಳಿಸಿದ್ದ ದಾನಗಳನ್ನು ಒಂದೊಂದಾಗಿ ತೆಗಳುತ್ತಾನೆ. ಅವರನ್ನು ವೇದ ಜಡರು' ಎಂದು ಅನೇಕ ಸಲ ಕರೆದಿದ್ದಾನೆ. ಅಲ್ಲದೆ "ವೇದದ ಡಂಗುರಂ ಹೆದರಿ ಸ್ವೈವೆರಗಾದವು ಶಾಸ್ತ್ರ ಸಂಭ್ರಮಂ ಪೋದುವು, ನಿಚ್ಚಲೋದುವ ಪುರಾಣದ ಮಾತಿನ ಮಾಲೆ ನುಚ್ಚುನೂರಾದವು" ಎಂದು ಅವುಗಳ ಬಗ್ಗೆ ತನಗಿರುವ ಉಪೇಕ್ಷೆಯನ್ನೂ ಅಸಹನೆಯನ್ನೂ ವ್ಯಕ್ತಗೊಳಿಸುತ್ತಾನೆ. ಇನ್ನೂ ಮುಂದೆ ಹೋಗಿ ಹಾವಿನಹಾಳ ಕಲ್ಲಯ್ಯ ತನ್ನ ನಾಯಿಯ ಮೂಲಕ ವೇದ ಓದಿಸಿದ ಘಟನೆಯನ್ನು ಚಿತ್ರಿಸುತ್ತ ವೇದ ಸಂಸ್ಕೃತಿಯನ್ನು ವಿಡಂಬಿಸುತ್ತಾನೆ.

"ಶಿವಭಕ್ತಿಯುಂ ಕರ್ಮಮುಂ ಎಂದುಂ ಒಂದಾಗಿರದು" ಎಂಬುದು ಹರಿಹರನ ಗಟ್ಟಿನಂಬಿಕೆ, ಇದನ್ನು ಮಾತಿನ ಮೂಲಕ, ಘಟನೆಗಳ ಮೂಲಕ ಆಗಾಗ ಎತ್ತಿಹಿಡಿಯುತ್ತಾನೆ" ಕರ್ಮಲತೆಯಂತಿರ್ದ ಜನ್ನಿವಾರಮಂ ಬಿಸುಟು" ಮನೆಬಿಟ್ಟನೆನ್ನುವ ಜನ್ನಿವಾರ, ಮೌಂಜಿ ಕರ್ಮಗಳನ್ನು ಹರಿದು ಹಾಕಿಸುತ್ತಾನೆ. ಕಣ್ಣಪ್ಪನ ರಗಳೆಯ ವಸ್ತು ಎರಡು ಬಗೆಯ ಪೂಜೆಗಳನ್ನೊಳಗೊಂಡಿದ್ದು, ಕರ್ಮಕ್ಕಿಂತ ಭಕ್ತಿ ಶ್ರೇಷ್ಠವೆಂದು ತೋರಿಸುವುದಾಗಿದೆ. ಪಾರ್ವನಗಬ್ಬವಣಿ ತಿಳಿ, ಮನ ಕರಡು ಎಲೆಗೌರಿ' ಎಂದು ಬ್ರಾಹ್ಮಣನನ್ನು, ಅವನ ಕೈಯೊಳು ಹೊಲಸು ಮನದೊಳಮೃತಂ ಗೌರಿ" ಎಂದು ಕಣ್ಣಪ್ಪನನ್ನು ಕುರಿತು ಹೇಳುತ್ತ ಕರ್ಮ –ಭಕ್ತಿಗಳ ವ್ಯತ್ಯಾಸವನ್ನು ಸ್ಪಷ್ಟಪಡಿಸುತ್ತಾನೆ. ಬಸವಣ್ಣನ ಮನೆಯ

ಗೋವುಗಳು ಸೆರೆ ಹೋದರೆ ಯುದ್ಧ ಸಾರುವ ವೈದಿಕ ಮೌಲ್ಯವನ್ನು ಚರ್ಚಿಸದೆ. ಅದನ್ನು ನಿರಾಕರಿಸುವ ರೀತಿಯಲ್ಲಿ ತಾಯ್ಗಳುಮ್ಮಳಿಸವಾಗದು ಕರುಗಳಂ ಬಿಡಿರೇ" .. .. .. ಮಕ್ಕಳುಗಳವ್ವೆಗಳು ನೋಯಲಾಗದು ಬಿಡಿರೇ" ಎಂದು ಕರುಗಳನ್ನು ಹೊಡೆದಟ್ಟುವ ಘಟನೆಯನ್ನು ಯೋಜಿಸುತ್ತಾನೆ.

ಹೀಗೆ ಹೊಲೆಯರನ್ನು ಕಥಾನಾಯಕರನ್ನಾಗಿ ಮಾಡಿಕೊಳ್ಳುವುದು, ಅವರು ಹೀನರಲ್ಲವೆಂದು ಸಾಬೀತುಗೊಳಿಸುವ ಘಟನೆಗಳನ್ನು ಸಂಘಟಿಸುವುದು, ಅದರ ಸಮರ್ಥನೆಗೆ ಪರಿಣಾಮಕಾರಿ ಮಾತುಗಳನ್ನು ಬಳಸುವುದು; ಇದಕ್ಕೆ ಪ್ರತಿಯಾಗಿ ಬ್ರಾಹ್ಮಣರ ಮೌಲ್ಯ-ಆಚರಣೆ-ವಿಚಾರಣೆಗಳನ್ನು ವಿಡಂಬಿಸುವುದು, ಅವರ ಸೋಲನ್ನು ಚಿತ್ರಿಸುವುದು, ಈ ಸಂದರ್ಭದಲ್ಲಿ ಪುರೋಹಿತ ವರ್ಗ ಪ್ರಭುವರ್ಗಗಳು ಒಂದಾಗಿ ನಿಲ್ಲುವುದು, ಇವೆಲ್ಲ ಆತನ ಸಂಘರ್ಷದ ಪ್ರವೃತ್ತಿಗೆ ನಿದರ್ಶನವೆನಿಸಿವೆ. ವರ್ಣಭೇದ ನಿವಾರಣೆಯಂತೆ ವರ್ಗಭೇದ ನಿವಾರಣೆಗಾಗಿಯೂ ರಗಳೆಗಳು ಧ್ವನಿಎತ್ತಿವೆ. ಹರಿಹರನ ರಗಳೆಗೆ ಕಥಾನಾಯಕರೆಲ್ಲ ಸಂಪ್ರದಾಯ ವಿರೋಧಿಗಳಾಗಿರುವುದರಿಂದ ಸಹಜವಾಗಿಯೇ ಅವರು ವ್ಯವಸ್ಥೆಯನ್ನು ರಕ್ಷಿಸಿಕೊಂಡು ಹೋಗುವ ರಾಜನ ವಿರೋಧವನ್ನು ಕಟ್ಟಿಕೊಳ್ಳುತ್ತಾರೆ. ಇವರಲ್ಲಿ ಇತಿಹಾಸ ಪ್ರಸಿದ್ಧ ಆರನೆಯ ವಿಕ್ರಮಾದಿತ್ಯ, ಬಿಜ್ಜಳನೊಂದಿಗೆ ಅನೇಕ ಶರಣರು ವಾದಕ್ಕೆ ನಿಂತರೆ, ಸ್ಥಳೀಯ ಅರಸರಾದ ಚಂದಿಮರಸ ಮೊದಲಾದವರನ್ನು ಕೆಲ ಶರಣರು ಎದುರು ಹಾಕಿಕೊಂಡ ನಿದರ್ಶನಗಳಿವೆ. ಹೀಗೆ ಬೇರೆ ಬೇರೆ ರಗಳೆಗಳಲ್ಲಿ ಬೇರೆ ಬೇರೆ ಕಾರಣಗಳಿಗಾಗಿ ರಾಜನೊಂದಿಗೆ ವಾದಕ್ಕೆ ನಿಂತರೆ, ಬಸವರಾಜ ದೇವರ ರಗಳೆಯಲ್ಲಿ ರಾಜತ್ವವನ್ನೇ ಪ್ರಶ್ನಿಸುವ ವಿಚಾರವನ್ನು ಕೈಗೆತ್ತಿಕೊಳ್ಳಲಾಗಿದೆ. ಇಲ್ಲಿಯೂ ರಾಜವರ್ಗ-ಪುರೋಹಿತ ವರ್ಗಗಳು ಒಂದಾಗಿ ನಿಲ್ಲುವುದು ಗಮನಾರ್ಹ ಸಂಗತಿಯಾಗಿದೆ. ಮಂತ್ರಿ ಕೇಶಿರಾಜ ಆಸ್ಥಾನದಿಂದ ಹೊರಡುವಾಗ ನನಗೆ ನಮಸ್ಕಾರ ಹೇಳಿದುದನ್ನು ಗಮನಿಸಿ "ನನ್ನಿಂದ ಈ ಅಧಿಕಾರ, ಈ ಸಂಪತ್ತು ಪಡೆದು ನನ್ನನ್ನೇ ಉದಾಸೀನ ಮಾಡುವುದೇ" ? ಎಂದು ಅರಸು ವಿಕ್ರಮಾದಿತ್ಯ ಕೇಳುವುದೇ ತಡ,

ಕೇಳರಸ, ಕೇಳರಸ ನಿನ್ನ ಸಿರಿ ನಿನಗಿಕ್ಕೆ

ಶೂಲಿಯಣುಗರ ಸಂಗ ಸಂಪವದೆನಗಿಕ್ಕೆ

.. .. .. .. .. .. .. .. .. ..

ಕಂಕಣದಿಂ ಮುದ್ರಿಕೆಯನುಚ್ಚಿ, ಬೀಸಾಡುತ್ತೆ

ಶಂಕಿಸದೆ ಕೇಯೂರಮಂ ತೆಗೆದು ನೀಡುತ್ತೆ

ಹೊನ್ನ ಕರಡಗೆ ಸೆಜ್ಜೆ ನಿನ್ನವೆಂದವಗಿತ್ತು

ಅಂಗೈಯ ಸಜ್ಜೆಯೊಳು ಸೋಮನಾಥ ನಿರಿಸಿ

ಆಸೆಗೆಡಗುಡದೆ ತನ್ನಯ ವಸ್ತ್ರಮಂ ಬಿಟ್ಟು

ಆಶಾಂಬರನ ಸುತಂ ಕೇಶಾಂಬರವನುಟ್ಟು

ಸೇವಕಾವೃತ್ತಿಯಂ ಮನದ ಕಾಲಿಂದೊದೆದು"

ನಿಂತ ಕಾಲ ಮೇಲೆ ಆಸ್ಥಾನದಿಂದ ನಿರ್ಗಮಿಸುತ್ತಾನೆ. ಈ ಸುದ್ದಿಯನ್ನು ಆತನ ಹೆಂಡತಿ ಗಂಗಾದೇವಿಯರ್ಕೇಳ್ದು, ಪೆರ್ಮಾಡಿರಾಯನ ಸೋಮಪ್ಪ ಕಟಕ ಮಕುಟ ಕೆಯೂರಾದಿ ಸರ್ವಾಭರಣಂ ಮೊದಲಾದ ಸಕಲವಸ್ತುವಂ, ಭಂಡಾರಮಂವಜ್ರ ಮಾಣಿಕ್ಯ ಮೌಕ್ತಿಕಾದಿ ರತ್ನಂಗಳುಮಂ ಕಾಪಿನೇರ್ಗೊಪ್ಪಿಸಿಕೊಟ್ಟು, ನೇತ್ರ ಮನುಟ್ಟು, ಭಸಿತಮನಿಟ್ಟು, ಕರಕಮಲಸ್ಥಿತ ಶಿವಲಿಂಗ ಸಂಪನ್ನೆಯಾಗಿ ನಿಳಯಂ ಪೊರಮಟ್ಟು, ರತ್ನದೊಡನೆ ಕಾಂತಿ, ಚಂದ್ರಮನೊಡನೆ ಬೆಳ್ದಿಂಗಳು ತರುಣಿಯೊಡನೆ ಕಿರಣಗಳು ಹೋಗುವಂತೆ' ದಣ್ಣಾಯಕರೊಡನೆ ಹೋಗುತ್ತಾಳೆ. ರಾಜತ್ವವನ್ನು ಧಿಕ್ಕರಿಸಿ ಹೊರಟ ಈ ಸಚಿವ ದಂಪತಿಗಳ ಮನೋಧರ್ಮ ಅಪರೂಪದ ನಿದರ್ಶನವಾಗಿದೆ. "ವಿಕ್ರಮಾದಿತ್ಯನಂಥ ಅರಸು ಹಿಂದೆಯೂ ಇರಲಿಲ್ಲ, ಇಂದೂ ಇಲ್ಲ, ಮುಂದೆಯೂ ಆಗುವುದಿಲ್ಲ"ವೆಂಬ ದರ್ಪದ ಚಕ್ರವರ್ತಿಯನ್ನು ಲೆಕ್ಕಿಸದ ಪ್ರಸಂಗವಿದು.

ಇನ್ನೊಬ್ಬ ಶರಣ ತೆಲುಗು ಜೊಮ್ಮಯ್ಯ, ಇದೇ ಅರಸನಲ್ಲಿ ಸಾಮಂತನಾಗಿದ್ದನು. ಈತ ಜೋಳವಾಳಿಯೊಳಿರ್ಪನಾ ಧರನಾಥಂಗೆ ! ವೇಳೆವಾಳಿಯೊಳಿರ್ಪನಾ ಭೀಮನಾಥಂಗೆ ! ಪೆರ್ಮಾಡಿರಾಯಂಗೆ ಹೊಡವಡಂ ಲೆಕ್ಕಿಸಂ" ಎಂಬಂತೆ ಅರಸನ ಕೂಡ ವರ್ತಿಸುತ್ತಾನೆ. ಪುರುಷ ಸಿಂಹವನಾಳ್ವಿ ಮಾತಂಗಪತಿಯಂತೆ ! ಅರಸು ಹೆಮ್ಮಾಡಿರಾಯಂ ಭೀತಿಯಿಂದಿಂತೆ ! ಪೋಗೆನ ಲ್ಕಮ್ಮನವಂ ನೋಡಿ ಅರಸನೊಂದಿಗಿನ ಈತನ ನಿರ್ಭೀತ ನಡವಳಿಕೆಯನ್ನು ಸೂಚಿಸುತ್ತವೆ. ಮತ್ತೊಬ್ಬ ಶರಣ ಬಾಹೂರ ಬೊಮ್ಮಯ್ಯ ಏರಿಬಂದ ವಿಕ್ರಮಾದಿತ್ಯನ ಆನೆಯನ್ನು ಕೊಲ್ಲುತ್ತಾನೆ. ಹೀಗೆ ಕೇಶಿರಾಜ–ತೆಲುಗು ಜೊಮ್ಮಯ್ಯ-ಬಾಹೂರ ಬೊಮ್ಮಯ್ಯ–ವಿಕ್ರಮಾದಿತ್ಯರಲ್ಲದೆ ಶಂಕರದಾಸಿ ಮಯ್ಯ ಮತ್ತು ಜಯಸಿಂಹ: ರೇವಣಸಿದ್ಧ ಮತ್ತು ವಿಕ್ರದಿಮಾತ್ಯ ವೈಷ್ಣವ ಚೋಳ ಬಿಜ್ಜಳ–ಮಹಾ

ದೇವಿ ಮತ್ತು ಕೌಶಿಕ ಕೆಂಭಾವಿ ಭೋಗಣ್ಣ, ಚಂದಿಮರಸ ಇವರ ವಾದ ವಿವಾದಗಳು, ಅರಸರ ಸೋಲು–ಶರಣಾಗತಿಗಳು, ಶರಣರು ರಾಜಸತ್ತೆಯನ್ನು ಉಪೇಕ್ಷಿಸುತ್ತಿದ್ದುದರ ಉದಾಹರಣೆಗಳಾಗಿವೆ.

**ಹಾವಿನಹಾಳ ಕಲ್ಲಯ್ಯ ಶಿವನಯ್ಯರ ನಡುವಿನ ಸಂಘರ್ಷ**

ಹರಿಹರನ ರಗಳೆಗಳಲ್ಲಿ ಹಾವಿನಹಾಳ ಕಲ್ಲಯ್ಯನ ರಗಳೆಯೂ ಒಂದು, ಇದು ಕಲ್ಲಯ್ಯನ ಭಕ್ತಿಸಾಧನೆ, ಪರಿಶ್ರಮಗಳನ್ನು ಮನೋಜ್ಞವಾಗಿ ಚಿತ್ರಿಸುತ್ತದೆ. ಸಾಧಕನಿಗೆ ಸಾಧನೆಯ ಹಾದಿಯಲ್ಲಿ ನಡೆಯುವಾಗ ಎರಡು ತೊಡರುಗಳು ಎದುರಾಗುವುದು ಸಹಜ, ಆದರೆ, ಸಾಧಕನಾದವನು ಅಂಥ ಕಷ್ಟಗಳು ಎದುರಾದಾಗ ಯಾವ ಕಾರಣಕ್ಕೂ ಎದೆಗುಂದಬಾರದು. ಹಾಗೆ ಎದೆಗುಂದದದೆ ಮುನ್ನಡೆದಲ್ಲಿ ಆತ ಗುರಿ ತಲುಮವುದರಲ್ಲಿ ಯಾವ ಅನುಮಾನವೂ ಇಲ್ಲ. ಅಂತೆಯೇ ರಗಳೆಯಲ್ಲಿ ಕಥಾನಾಯಕ ಹಾವಿನಹಾಳ ಕಲ್ಲಯ್ಯ ಸಾಧನೆಯ ಹಾದಿಯಲ್ಲಿ ಬರುವ ಎಲ್ಲ ಕಷ್ಟಗಳನ್ನು ಎದುರಿಸಿ ಕೊನೆಗೂ ಗುರಿ ತಲುಪುತ್ತಾನೆ.

ಇಲ್ಲಿ ಹಾವಿನಹಾಳ ಕಲ್ಲಯ್ಯ ಮತ್ತು ಶಿವನಯ್ಯ ಇಬ್ಬರೂ ಶಿವಭಕ್ತರೆ ಅಲ್ಲದೆ ಶಿವನಯ್ಯನ ಮಗ ಕಲ್ಲಯ್ಯ ಹೀಗೆ ಸಂಬಂಧವಿರುವಾಗ ಕಲ್ಲಯ್ಯನ ಹಿರಿಮೆಯನ್ನು ಸಾರಲು ಕವಿ ಕೆಲ ಸನ್ನಿವೇಶಗಳನ್ನು ಸೃಷ್ಟಿಸಿ ಸಂಘರ್ಷಕ್ಕೆ ಅನುವು ಮಾಡಿಕೊಡುವಂತಹ ಪ್ರಸಂಗವನ್ನು ಸೃಷ್ಟಿಸುತ್ತಾನೆ. ಈ ಸನ್ನಿವೇಶಗಳಲ್ಲಿ ಮೊದಲನೆಯದು, ಕಲ್ಲಯ್ಯ ಕರುಳನ್ನು ಕಿತ್ತುಕೊಂಡು ಲಿಂಗವನ್ನು ಅಪ್ಪಿಕೊಳ್ಳುವ ಸನ್ನಿವೇಶ. ಒಮ್ಮೆ ಶಿವನಯ್ಯನು 'ಚೆಲ್ವುತ್ತರಿಗೆ' ಮಾಡಲು ಕಲ್ಲಯ್ಯನನ್ನು ಕರೆಯುತ್ತಾನೆ. ಎಷ್ಟು ಕರೆದರೂ ಕಲ್ಲಯ್ಯ ಶಿವನಯ್ಯನ ಕರೆಗೆ ಓಗೊಡುವುದಿಲ್ಲ. ಆಗ ಶಿವನಯ್ಯ ಸಂಪಾದಿಸಿದ ಹಣವೆಲ್ಲವೂ ವ್ಯರ್ಥವಾಗುತ್ತದೆ ಎಂಬ ಸಿಟ್ಟಿನಲ್ಲಿ ಕಲ್ಲಯ್ಯನಿಗೆ ಚೆನ್ನಾಗಿ ಹೊಡೆಯುತ್ತಾನೆ.

ತಂದೆಯಿಂದ ಏಟು ತಿಂದ ಕಲ್ಲಯ್ಯ ಶಿವಾಲಯಕ್ಕೆ ಹೋಗಿ ತನ್ನ ಕರುಳನ್ನು ಇರಿದುಕೊಂಡು ಶಿವಲಿಂಗವನ್ನು ಅಪ್ಪಿ ಮಲಗುತ್ತಾನೆ. ಬೆಳಗ್ಗೆ ಎಂದಿನಂತೆ ಪೂಜೆಗೆ ಬಂದ ಪೂಜಾರಿ ಕಲ್ಲಯ್ಯನ ಸ್ಥಿತಿಯನ್ನು ನೋಡಿ ಬೆದರುತ್ತಾನೆ. ಇಂಥ ಭೀಭತ್ಸ ಸನ್ನಿವೇಶ ನಡೆದಿರುವಾಗ ತಂದೆ ಮಗನ ನಡುವೆ ಸಂಘರ್ಷ ನಡೆದಿದೆ ಎಂಬುದಕ್ಕೆ ಇದು ನಿದರ್ಶನ. ಕಲ್ಲಯ್ಯ ಶಿವಲಿಂಗಕ್ಕೆ ಕರುಳು ಹಾಕಿ ಮಲಗಿರುವುದನ್ನು ಕಂಡ ಪೂಜಾರಿ (ಪುರೋಹಿತ) ಅಸಹ್ಯ ಪಡುತ್ತಾನೆ. ಕಲ್ಲಯ್ಯನ ತಂದೆ ತಾಯಿ ಮತ್ತು ಇತರರಿಗೆಲ್ಲ ಸುದ್ದಿ ಮುಟ್ಟಿಸುತ್ತಾನೆ. ಎಲ್ಲರೂ ಬಂದು ಕಲ್ಲಯ್ಯನ ಇರುವಿಕೆ ನೋಡಿ ಮರುಕಪಡುತ್ತಾರೆ. ಚೆಲ್ಲಿದ ಕರುಳನ್ನು ಕಲ್ಲಯ್ಯನ ಹೊಟ್ಟೆಯಲ್ಲಿಟ್ಟು ಭಸಿತವನ್ನು ಸವರುತ್ತಾರೆ. ಹಾಗೆ ಸವರುತ್ತಿದ್ದಂತೆಯೇ ಕಲ್ಲಯ್ಯನ ದೇಹ ಜೀವ ಪಡೆಯುತ್ತದೆ. ಈ ಮಹಿಮೆಗೆ ನೆರೆದ ಜನ

ಅಚ್ಚರಿಪಡುತ್ತಾರೆ. ಇನ್ನೊಂದು ಸನ್ನಿವೇಶ ಕಲ್ಲಯ್ಯನಿಗೆ ಹಾವು ಕಚ್ಚುವಂತಹದ್ದು, ಒಮ್ಮೆ ಶಿವಪೂಜೆಯಲ್ಲಿ ಕಲ್ಲಯ್ಯ ನಿರತನಾಗಿರುವಾಗ ಹಾವೊಂದು ಹಿಂದಿನಿಂದ ಬಂದು ಕಚ್ಚುತ್ತದೆ. ಸಾಧಾರಣ ಭಕ್ತನಾಗಿದ್ದರೆ ಆ ಹಾವನ್ನು ಕೊಂದು ಬರುತ್ತಿದ್ದ, ಇಲ್ಲವೇ ಕೊಲ್ಲಿಸುತ್ತಿದ್ದ. ಆದರೆ, ಕಲ್ಲಯ್ಯ ಹಾಗೆ ಮಾಡುವುದಿಲ್ಲ. ತನ್ನನ್ನು ಕಚ್ಚಿ ಸತ್ತ ಹಾವಿಗೆ ಮರುಕ ಪಡುತ್ತಾನೆ. ಮತ್ತೆ ಆ ಹಾವನ್ನು ಬದುಕಿಸುತ್ತಾನೆ.

ಇದೇ ರೀತಿ ಇನ್ನೊಂದು ಸನ್ನಿವೇಶವನ್ನು ನೋಡಬಹುದು. ಒಮ್ಮೆ ಸಿದ್ದರಾಮಯ್ಯ ಕಲ್ಲಯ್ಯನಿಗೆ ಮದುವೆ ಮಾಡಿಕೊಳ್ಳುವಂತೆ ತಿಳಿಸುತ್ತಾನೆ. ಆದರೂ ಒಪ್ಪದ ಕಲ್ಲಯ್ಯ ಸಾಂಸಾರಿಕ ಬದುಕನ್ನು ತಿರಸ್ಕರಿಸುತ್ತಾನೆ. ಹಾಗೆಂದ ಮಾತ್ರಕ್ಕೆ ಆತ ಸಂಸಾರವನ್ನು ತೇಜಿಸಿದ್ದ ಎಂದರೆ ತಪ್ಪಾಗುತ್ತದೆ. ಏಕೆಂದರೆ ಅವನು ಸಂಸಾರಿಯೂ ಆಗಿದ್ದದು ಉಂಟು, ಒಮ್ಮೆ ತನ್ನನ್ನು ಮೋಹಿಸಿ ಬಂದ ಭಕ್ತೆಯೊಬ್ಬಳನ್ನು ಮೋಹಿಸಿ ಮದುವೆಯಾಗುತ್ತಾನೆ. ಕಲ್ಲವ್ವೆ ಎಂಬ ಮಗಳನ್ನು ಪಡೆಯುತ್ತಾನೆ. ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಿದ್ದು, ಕಲ್ಲಯ್ಯ ತಿರಸ್ಕರಿಸಿದ್ದು, ಲೌಕಿಕ ಸುಖ–ಭೋಗಗಳಿಂದ ತುಂಬಿದ ಸಂಸಾರವನ್ನೇ ಹೊರತು ಶಿವಭಕ್ತಿ ತುಂಬಿದ ಸಂಸಾರವಲ್ಲ ಎಂಬುದನ್ನು ಗಮನಿಸಬಹುದು.

ಈ ಎಲ್ಲವುಗಳಿಗಿಂತ ಕಲ್ಲಯ್ಯನು ನಾಯಿಯಿಂದ ವೇದವನ್ನು ಓದಿಸಿದ ಪ್ರಸಂಗ, ಈ ಪ್ರಸಂಗ ಕಲ್ಲಯ್ಯನ ಪಾರಮಾರ್ಥಿಕ ಬದುಕಿನ ಔನ್ನತ್ಯಕ್ಕೆ ಹಿಡಿದ ಕನ್ನಡಿ ಹಾಗೂ ಎಲ್ಲ ದೈವಗಳಿಗಿಂತಲೂ ಶಿವನೇ ಶ್ರೇಷ್ಠ ಎಂಬುದರ ಸಮರ್ಥ ಅಭಿವ್ಯಕ್ತಿ, ಈ ಪ್ರಸಂಗದಲ್ಲಿ ಕಲ್ಲವ್ವೆಯು ಕಾರಣಕ್ಕಾಗಿ ಬ್ರಾಹ್ಮಣರು ಮತ್ತು ಕಲ್ಲಯ್ಯನ ನಡುವೆ ವಾದ– ವಿವಾದಗಳು ಏರ್ಪಟ್ಟು ಸಂಘರ್ಷ ಉದ್ಭವಿಸುತ್ತದೆ. ಆ ಸಂದರ್ಭದಲ್ಲಿ ಕಲ್ಲಯ್ಯ ಬ್ರಾಹ್ಮಣೋತ್ತಮ ಸೋಮಯಾಜಿಯನ್ನು ಶಿವಭಕ್ತರ ಮನೆಯ ನಾಯಿಯೂ ನಿಮ್ಮನ್ನು ಮುಟ್ಟುವುದಿಲ್ಲವೆಂದು ಹೀಯಾಳಿಸುತ್ತಾನೆ. ಆಗ ಸೋಮಯಾಜಿ ನಾವು ನಾಯಿಗಳಿಗಿಂತ ಕಡೆ ಎಂದ ಮೇಲೆ ನಾಯಿಯಿಂದ ವೇದವನ್ನು ಓದಿಸಿ, ಶಿವಭಕ್ತರು ಬ್ರಾಹ್ಮಣರಿಗಿಂತಲೂ ಶ್ರೇಷ್ಠರು ಎಂಬುದನ್ನು ಪ್ರಾಮಾಣಿಕರಿಸಲು ಕೇಳುತ್ತಾನೆ.

ಆಗ ಕಲ್ಲಯ್ಯನು ಶುನಕವನ್ನು ಕರೆಯಿಸಿ ಉಚ್ಚಲಿಂಗೋಚ್ಚಪ್ಪ ಭೋಗಿಯೇ ಉಚ್ಚರಿಸು' ಉಚ್ಚ ಓಂಕಾರಾಂಕ ಯೋಗಿಯೇ ಉಚ್ಚರಿಸು' ಆವ ವೇದದೊಳೊಂದು ಠಾವಪೇಳು"೧೪ ಎನ್ನುತ್ತಾನೆ. ಹಾಗೆ ಹೇಳುತ್ತಿದ್ದಂತೆಯೇ ನಾಯಿ ವೇದಾಂತದೊಳಗುಳ್ಳ ಅರ್ಥನಿಚಯಂಗಳನ್ನು ತನ್ನ ಚಾತು: ಶೃತಿಗಳಿಂದ ವಿಸ್ತರಿಸುತ್ತದೆ. ನಾಯಿಯೊಂದು ವೇದ ಓದಿದ್ದನ್ನು ಕೇಳಿ ಬ್ರಾಹ್ಮಣರೆಲ್ಲರೂ ಬ್ರಾಹ್ಮಣತ್ವವನ್ನು ಕಳಚಿ ಶಿವಸ್ತೋತ್ರ ಮಾಡಿ ಶಿವಭಕ್ತರಾಗುತ್ತಾರೆ. ಒಟ್ಟಾರೆ ಮೂರು ಪ್ರಸಂಗಗಳು ಸೃಷ್ಟಿಯಾದರೂ ಕೂಡ ಸಂಘರ್ಷ ವೇರ್ಪಟ್ಟು, ಕಡೆಗೆ ಬ್ರಾಹ್ಮಣರೂ ಕೂಡ ಶಿವಭಕ್ತರಾಗುತ್ತಾರೆ.

ಒಟ್ಟಿನಲ್ಲಿ ರಗಳೆ ಕಲ್ಲಯ್ಯನ ಪಾರಮಾರ್ಥಿಕ ಜೀವನದ ವಿಕಾಸ, ಸಾಧನೆಯನ್ನು ಚೆನ್ನಾಗಿ ನಿರೂಪಿಸುತ್ತದೆ. "ತಂದೆ ಮಕ್ಕಳಲ್ಲಿ ನಡೆದ ವಿರಸ ಪ್ರಸಂಗ ನಾಟಕೀಯವಾಗಿದೆ. ಎರಡು ವಿಭಿನ್ನ ಸ್ಥರಗಳಲ್ಲಿ ನಿಂತ ವ್ಯಕ್ತಿಗಳ ನಡುವಿನ ತಾಕಲಾಟ; ತಂದೆಯ ಲೌಕಿಕ ನಿಲುವನ್ನೂ ಮಗನ ಪಾರಮಾರ್ಥಿಕ ನಿಲುವನ್ನು ಯಶಸ್ವಿಯಾಗಿ ಚಿತ್ರಿಸುತ್ತದೆ. ಕಲ್ಲಯ್ಯ ಸಿದ್ಧರಾಮರ ನಡುವೆ ಇದ್ದಂತಹ ಅನ್ಯೋನ್ಯತೆ ಮನ ಸೆಳೆಯುವಂತಹದ್ದಾಗಿದೆ. ಕೆಲವು ಕ್ಷಣದಲ್ಲಿ ಮಾತ್ರ ಸುಳಿದು ಹೋಗುವ ಸಿದ್ಧರಾಮನ ನಿಲುವು, ರಗಳೆಗಳಲ್ಲಿ ಜೀವಂತವಾಗಿ ಮೂರ್ತಿವೆತ್ತಿದೆ. ಒಂದೇ ಸ್ಥಲದ ರಗಳೆಯಲ್ಲಿ ಕವಿ ಇಷ್ಟೆಲ್ಲ ಯಶಸ್ಸನ್ನು ಸಂಪಾದಿಸಿರುವುದು"೧೫ ಅಚ್ಚರಿ ಹುಟ್ಟಿಸುತ್ತದೆ.

**ಉದ್ಭಟಯ್ಯ ಮಂಗಳಾಂಬೆ ನಡುವಿನ ಸಂಘರ್ಷ**

ಈ ಪ್ರಸಂಗ ಉದ್ಭಟಯ್ಯನ ರಗಳೆಯಲ್ಲಿ ಕಾಣಬಹುದು, ಉದ್ಭಟಯ್ಯ ಮತ್ತು ಮಂಗಳಾಂಬೆ ಇಬ್ಬರು ಶಿವಭಕ್ತರು. ಅವರು ಮಾಡಿದುದೆಲ್ಲ ಶಿವಪೂಜೆ, ನೆನೆವುದೆಲ್ಲಾ ಪರಮಾತ್ಮನ ಜ್ಞಾನ, ಶಿವಸಾಮರಸ್ಯವೇ ಅವರ ನಿತ್ಯಕರ್ತವ್ಯ. ಒಮ್ಮೆ ಇಬ್ಬರೂ ಕುಳಿತು. ಲೆತ್ತವನ್ನಾಡುತ್ತಿದ್ದ ಸಂದರ್ಭದಲ್ಲಿ, ಉದ್ಭಟಯ್ಯ ಇದ್ದಕ್ಕಿದ್ದಂತೆ ನಗಲು ಪ್ರಾರಂಭಿಸುತ್ತಾನೆ.

ಉದ್ಭಟಯ್ಯನ ಈ ನಗುವಿಗೆ ಮಂಗಳಾಂಬೆಗೆ ಸಿಟ್ಟು ಬರುತ್ತದೆ. ಆ ಸಿಟ್ಟಿನಲ್ಲಿ ಉದ್ಭಟಯ್ಯನ ನಗುವಿಗೆ ಕಾರಣ ಕೇಳುತ್ತಾಳೆ. ಹೀಗೆ ಇಬ್ಬರ ನಡುವೆ ವಾದ-ವಿವಾದ ನಡೆದು ಘರ್ಷಣೆಗೆ ಬಂದು ನಿಲ್ಲುತ್ತದೆ. ಶಿವಭಕ್ತರಿಬ್ಬರ ನಡುವೆ ದೀರ್ಘವಾದ ಮಾತುಕತೆ ನಡೆಯುತ್ತದೆ. ಮಂಗಳಾಂಬೆ ಕಟಕಿಯಾಡುತ್ತಾಳೆ. ಈ ಕಟಕಿಯನ್ನು ಸಹಿಸಲಾರದ ಉದ್ಭಟಯ್ಯ, ಇಡೀ ಪುರವನ್ನು ಕೈಲಾಸಕ್ಕೆ ಕೊಂಡೊಯ್ಯುವೆನೆಂದು ಸವಾಲು ಹಾಕುತ್ತಾನೆ. ಹಾಗಾದರೆ ಮಾಡಿ ತೋರಿಸುವುದು ಬಿಟ್ಟು ಅಪಹಾಸ್ಯ ಮಾಡುವುದು ಶಿವಭಕ್ತರಿಗೆ ತರವಲ್ಲ ಎಂದು ಎದಿರೆಟು ನೀಡುತ್ತಾಳೆ.

ಕೈಲಾಸಕ್ಕೆ ಇಡೀ ಪುರವನ್ನೇ ಕೊಂಡೊಯ್ಯುವುದಿರಲಿ, ಒಬ್ಬನೇ ಹೋಗುವುದು ಕೂಡ ಲೌಕಿಕವಾಗಿ ಅಸಾಧ್ಯ ಕೆಲಸ. ಆದರೆ, ಭಕ್ತನಾದವನಿಗೆ ಇದು ಅಸಾಧ್ಯ ಕೆಲಸವಲ್ಲ. ಉದ್ಭಟಯ್ಯನು ಒಬ್ಬ ಶ್ರೇಷ್ಠ ಭಕ್ತ ತನ್ನ ಭಕ್ತಿಯಿಂದಾಗಿ ಪುರವನ್ನು ಕೈಲಾಸಕ್ಕೆ ಕೊಂಡೊಯ್ಯುತ್ತಾನೆ. ಅವನ ಕರಣಗಳು ಶಿವನ ಉಪಕರಣಗಳಾಗಿದ್ದವು. ಪ್ರಾಣವೇ ಶಿವಲಿಂಗವಾಗಿತ್ತು. ಹಗಲು ಇರುಳೆನ್ನದೆ ಶಿವನನ್ನು ಆರಾಧಿಸುತ್ತಿದ್ದ, ಅವನ ನೋಟ, ಮಾಟ, ಭೇಟಿ, ಕೂಟಗಳೆಲ್ಲಾ ಶಿವನಲ್ಲೆ ಇದ್ದು, ಮಾಡಿದ್ದೆಲ್ಲವೂ ಪೂಜೆಯಾದರೆ, ಆಡಿದ್ದೆಲ್ಲವೂ ಸ್ತೋತ್ರವಾಗಿತ್ತು. ಇಂಥ ಭಕ್ತನ ಬಯಕೆಯನ್ನು ಶಿವಪೂರೈಸುವುದಿಲ್ಲ ಎನ್ನುತ್ತಾನೆಯೇ !

ಒಮ್ಮೆ ಪುರವನ್ನೇ ಕೈಲಾಸಕ್ಕೆ ಕೊಂಡೊಯ್ಯುವ ಬಯಕೆ ಹೊತ್ತು. ಉದ್ಭಟಯ್ಯ ಶಿವಾಲಯಕ್ಕೆ ಬರುತ್ತಾನೆ. ರುದ್ರಾಕ್ಷಿ ಧರಿಸಿ "ಶಿವಲಿಂಗಕ್ಕೆ ಅಭಿಷೇಕಂ ಮಾಡಿಸಿ ನವಪೂಜೆಗಳಂ ಮಾಡಿಸಿ/ ಧೂಪಾರತಿಗಳ ನೊಲವಿಂದೀವುತೆ/ ಭಾಪುರೆ ಶಿವಯೆಂದಭವ ನನೋವುತೆ/ ಆರೋಗಿಸಲಿತ್ತನು ನಯದಿಂದಂ/ ಧೀರಂ ತಾಂಬೂಲವ ನೊಲವಿಂದಂ"[೧೬] ಕೊಡುತ್ತಾ ಶಿವನ ಸದ್ಭಕ್ತನೂ ಆದ ಉದ್ಭಟಯ್ಯ ಶಿವನ ಸಮ್ಮುಖದಲ್ಲಿ ಕುಳಿತುಕೊಳ್ಳುತ್ತಾನೆ. ಆನಂದ ರಸ ಉಕ್ಕಿ ಹರಿದು ಶಿವನ ವರ್ಣನೆಯಲ್ಲಿ ತೊಡಗುತ್ತಾನೆ. ಶಿವನ ಮೇಲೆ ಹಲವು ಪದ್ಯಗಳನ್ನು ಹಾಡುತ್ತಾನೆ. ಉದ್ಭಟಯ್ಯನ ಹೃದಯ ತುಂಬಿದ ಭಕ್ತಿಗೆ ಶಿವ ತಾನಾಗಿಯೇ ಒಲಿಯುತ್ತಾನೆ. ಅವನ ಬಯಕೆಯನ್ನು ಈಡೇರಿಸುತ್ತಾನೆ. ಹೀಗೆ ವಾಗ್ವದದಲ್ಲಿ ಆರಂಭಗೊಂಡ ಚರ್ಚೆ ಭಕ್ತಿ ರೂಪದಲ್ಲಿ ಅಂತ್ಯಗೊಳ್ಳುತ್ತದೆ.

**ಮಂಗಳಾಂಬೆ:** ಏಕಾಯ್ತೀಗಳ ಕಾರಣ ಹಾಸ್ಯ

ಏಕೆನ್ನಿಂದುಂಟೇ ಅಪಹಾಸ್ಯಂ

ಏತಱಕುಂದಂ ಕಂಡಿರಿ ನೀವೆನೆ

ಏತಕ್ಕಾದುದು ನಸುನಗೆ ನಿಮಗೆನೆ" [೧೭]

**ಉದ್ಭಟಯ್ಯ:** ನಿನ್ನಯ ಕಾರಣವಲ್ಲಂಭುಜ ಮುಖೀ

ಎನ್ನಯ ಶರಣರ ಸರಸಂ ಶಶಿಮುಖಿ"[೧೮]

**ಮಂಗಳಾಂಬೆ:** ನಗೆಯೊಪ್ಪುವುದೀ ಪುರಸಹಿತೊಯ್ಬೊಡೆ

**ಉದ್ಭಟಯ್ಯ:** ಪುರಮಂ ಕೊಂಡೊಯ್ದು ಪೆನರಿದಾವುದು

ಧರೆ ಚಿತ್ರವೆನಲ್ಕೊಯ್ದು ಪೆನೇವುದು

ನಾಡಿದು ಪೋಪೆಂ ಸೋಮನ ವಾರಂ"[೧೯]

ಹೀಗೆ ಇಡೀ ಕಾವ್ಯದ ತುಂಬಾ ಮೊದಲಿಂದ ಕೊನೆಯವರೆಗೂ ಮುಂದುವರಿಯುವ ಈ ಮಧುರ ಸಂಭಾಷಣೆಯಲ್ಲಿ, ಕವಿ ಅತ್ಯಂತ ಸುಂದರವಾದ ಪ್ರೇಮದ ಬದುಕನ್ನು ಸೆರೆಹಿಡಿಯುತ್ತಾನೆ. ಆ ಸಂಭಾಷಣೆಯಲ್ಲಿಯೇ ಶಿವನ ಮಹತ್ವ ಭಕ್ತಿ ಹಿರಿಮೆಯನ್ನು ಸಾರುತ್ತಾನೆ.

## ಕಣ್ಣಪ್ಪ, ಬ್ರಾಹ್ಮಣ ಪೂಜಾರಿ ನಡುವೆ ಸಂಘರ್ಷ

ಈ ಪ್ರಸಂಗ ಬೇಡದ ಕಣ್ಣಪ್ಪನ ರಗಳೆಯಲ್ಲಿ ಬರುತ್ತದೆ. ಕವಿ ಪೂಜಾರಿ ಹಾಗೂ ಕಣ್ಣಪ್ಪನ ಭಕ್ತಿಯ ಎರಡು ವಿಭಿನ್ನ ಸ್ವರೂಪಗಳನ್ನು ನಿರೂಪಿಸುತ್ತಾನೆ. ದಿನವೂ ಬೇಟೆಯಾಡಿ ಹಸನಾದ ಮಾಂಸ ತಂದು ಶಿವನಿಗೆ ಅರ್ಪಿಸುವುದು ಕಣ್ಣಪ್ಪನ ಭಕ್ತಿ. ವಿಧಿಯುಕ್ತವಾಗಿ ಮಂತ್ರ ಹೇಳಿ ಬಿಲ್ವಪತ್ರೆ, ಧೂಪ ಮುಂತಾದವುಗಳಿಂದ ಶಿವಲಿಂಗವನ್ನು ಪೂಜಿಸುವುದು ಪೂಜಾರಿಯ ಭಕ್ತಿ. ಇವರಿಬ್ಬರದು ಅಪರಿಮಿತವಾದ ಭಕ್ತಿ. ಆದರೆ ಇಬ್ಬರ ನಡುವೆ ಘರ್ಷಣೆ ಸಂಭವಿಸುವುದನ್ನು ಸಹಜವಾಗಿ ಕಾಣುತ್ತೇವೆ. ಶಿವ ಎಂದರೆ ಕಣ್ಣಪ್ಪನಿಗೆ ಎಲ್ಲಿಲ್ಲದ ಭಕ್ತಿ. ಒಮ್ಮೆ ಮಾಯಾಮೃಗವೊಂದು ಕಾಣಲು ಅದನ್ನು ಅಟ್ಟಿಸಿಕೊಂಡು ಹೋಗುತ್ತಾನೆ. ಕಾಳಹಸ್ತಿಯ ಶಿವ ದೇವಾಲಯ ಬರುತ್ತಿದ್ದಂತೆಯೇ ಮಾಯಾಮೃಗ ಮಾಯವಾಗುತ್ತದೆ. ದೇವಾಲಯವನ್ನು ಕಾಣುತ್ತಿದ್ದಂತೆಯೇ ಕಣ್ಣಪ್ಪನಿಗೆ ಶಿವ ಭಕ್ತಿಯುಂಟಾಗುತ್ತದೆ. ಶಿವನನ್ನು ಆರಾಧಿಸುವುದು, ರಕ್ಷಿಸುವುದು ಈತನಿಗೆ ಕಾಯಕವಾಗಿ ಬಿಡುತ್ತದೆ.

"ಎನ್ನವನೇ ಎನ್ನವನೆ ಹಸಿದಯ್ಯ ಹಸಿದಯ್ಯ

ಚೆನ್ನವನೆ ಚೆನ್ನವನೆ ಹೊತ್ತು ಹೋದುದಯ್ಯ"[೨೦]

ಎಂದು ಮೃಗಗಳ ಮಾಂಸ ತಂದು ಹಾಡುತ್ತಾನೆ. ಅಲ್ಲದೇ ಶಿವನಿಗೆ ಮಾಂಸಾಹಾರ ಅರ್ಪಿಸುತ್ತಾನೆ. ಹೀಗೆ ಅರ್ಪಿಸಿದ ಆಹಾರವನ್ನು ಶಿವ ಸೇವಿಸುತ್ತಾನೆ. ಶಿವನು ತನ್ನ 'ನೇಹದೋಗರ'ವನ್ನು ಉಂಡನೆಂದು ಕಣ್ಣಪ್ಪ ಸಂತಸಪಡುತ್ತಾನೆ. ಒಮ್ಮೆ "ಶಿವಲಿಂಗ ಕಣ್ಣೊಡೆದು ರಕ್ತ ಸುರಿಯುವುದನ್ನು ನೋಡಿದ ಕಣ್ಣಪ್ಪನು ಬಾಡುವ ಹೆಣದಂತಾಗಿ ಬಿಲ್ಲನ್ನು ಬಿಸುಟು ನೈವೇದ್ಯದ ಮಾಂಸವನ್ನು ಚೆಲ್ಲುತ್ತಾನೆ. ಅವನ ದೃಷ್ಟಿಯಲ್ಲಿ ಶಿವನಿಗೆ ಬಂದ ಆಪತ್ತಿನ ಕಡೆ ಕೇಂದ್ರಿತವಾಗಿತ್ತು. ಶಿವನ ಕಷ್ಟವನ್ನು ಹೇಗೆ ಪರಿಹರಿಸಬೇಕೆಂಬ ಚಿಂತೆ ಅವನಿಗೆಷ್ಟು ವೇದನೆಯೋ ಎಂಬ ಚಿಂತೆ, ತನ್ನೊಡೆಯನನ್ನು ಅಗಲಿ ಕೆಟ್ಟೆನೆಂಬ ಚಡಪಡಿಕೆ"[೨೧] ಅವನಲ್ಲಿ ನೆಲೆಯೂರಿತ್ತು. ಆ ಚಡಪಡಿಕೆಯಲ್ಲಿ ಇಂದು ಮುಂದು

ನೋಡದೇ ತನ್ನೊಂದು ಕಣ್ಣನ್ನು ಕಿತ್ತು ಶಿವನಿಗೆ ನೀಡುತ್ತಾನೆ.

ಇನ್ನೊಂದು ಕಣ್ಣಿನಲ್ಲೂ ರಕ್ತ ಸುರಿಯುತ್ತಿರಲೂ, ತನ್ನ ಇನ್ನೊಂದು ಕಣ್ಣನ್ನು ಕಿತ್ತು ಶಿವನಿಗೆ ನೀಡುತ್ತಾನೆ. ಅವನಿಗೆ ಕುರುಡನಾದೆಂಬ ಕಳವಳವಿಲ್ಲ, ತನ್ನ ಸಾಮರ್ಥ್ಯದ ಮತಿಯಿಲ್ಲ, ತನಗಾಗಿ ಏನು ಆಸೆಯಿಲ್ಲ, ಶಿವನ ಮೇಲಿನ ನಂಬಿಕೆಯೇ ಅವನ ಆಸೆ, ಶಿವಭಕ್ತಿಯೇ ಶಕ್ತಿ. ಶಿವ ಸುಖವೇ ಅವನ ಮುಕ್ತಿ"[೨೨] ಕಣ್ಣಪ್ಪನ ಈ ಭಕ್ತಿಯಲ್ಲಿ ಶಿವನಿಗಾಗಿ ಸರ್ವಸ್ವವನ್ನೂ ಅರ್ಪಿಸುವ ಗುಣ ಎದ್ದು ತೋರುತ್ತದೆ. ಇದು ಕಣ್ಣಪ್ಪನ ಶಿವಭಕ್ತಿಯ ಸ್ವರೂಪವಾದರೆ ಶಿವ ಬ್ರಾಹ್ಮಣನ ಶಿವಭಕ್ತಿಯ ಸ್ವರೂಪ ಇನ್ನೊಂದು ರೀತಿಯದು, ಅವನೊಬ್ಬ ಸಂಪ್ರದಾಯ ನಿಷ್ಠ, ವಿಭೂತಿ ರುದ್ರಾಕ್ಷಿಗಳಿಲ್ಲದೇ ಆತ ಪೂಜೆ ಮಾಡುವುದಿಲ್ಲ. ರುದ್ರ ಮಂತ್ರ, ಬಿಲ್ವಪತ್ರೆ ಮುಂತಾದವುಗಳಿಂದ ಪೂಜೆ ಮಾಡುತ್ತಾನೆ. ದೇವಾಲಯದಲ್ಲಿ ಚೆಲ್ಲಿರುವ ಮಾಂಸ ಕಂಡು ಅಸಹ್ಯ ಪಡುತ್ತಾನೆ. ಕಟುಕನು ಶುದ್ಧ ಮನದ ಶಿವನ ಮನೆಯನ್ನು ಮಲಿನ ಮಾಡಿದನೆಂದು ಕಸಗುಡಿಸಿ ಸ್ವಚ್ಛ ಮಾಡುತ್ತಾನೆ. ಹೇಸಿಗೆಯ ಕಿರಾತನನ್ನು ದೇವಾಲಯದೊಳಗೆ ಸೇರಿಸಬೇಡ ಎಂದು ಶಿವನನ್ನು ಕೇಳುತ್ತಾನೆ.

ಎರಡನೇ ಸಲ ದೇಗುಲದಲ್ಲಿ ಮಾಂಸದ ರಾಶಿ ಬಿದ್ದಿರುವುದನ್ನು ನೋಡಿದಾಗಂತಲೂ ಬ್ರಾಹ್ಮಣನಿಗೆ ಅತಿವೇದನೆಯಾಗುತ್ತದೆ; ರೋಷ ಉಕ್ಕುತ್ತದೆ. ಅವನಿಗೆ ಅವನ ಮೇಲೆಯೇ ಸಿಟ್ಟು ಬರುತ್ತದೆ. ಇಂಥ ಅನಾಚಾರವೇ! ಪ್ರಾಣಿಗಳನ್ನು ಕೊಲ್ಲುವುದು ಧರ್ಮವೇ? ಎಂದು ಶಿವನಿಗೆ ಸವಾಲು ಹಾಕುತ್ತಾನೆ. ಆದರೆ ಹಾಗೆ ಹೇಳಿದ ಅಹಿಂಸಾ ಪ್ರಿಯನು, ಕಿರಾತನನ್ನು ಕೊಲ್ಲುತ್ತೇನೆ ಎಂದು ತನ್ನೊಳಗಿನ ಹಿಂಸೆಯ ಭಾವನೆಯನ್ನು ಪ್ರಕಟಿಸುತ್ತಾನೆ! ತತ್ವ ಒಂದಾದರೆ ಮಾಡುವ ಕ್ರಿಯೆ ಇನ್ನೊಂದು. ಅವನಿಗೆ ನೇಮದಲ್ಲಿ ನಿಷ್ಠೆಯೇ ಹೊರತು ಶಿವನಲ್ಲಿ ನಿಜವಾದ ಪ್ರೇಮವಿಲ್ಲ! ಎಲ್ಲ ತೋರಿಕೆಗಾಗಿ ಮಾಡುವ ಢಂಬಾಚಾರ. ಶಿವ ಬ್ರಾಹ್ಮಣನೆಲ್ಲಿ, ಕಣ್ಣಪ್ಪನೆಲ್ಲಿ ಶಿವಬ್ರಾಹ್ಮಣ ಎಂಬ ಪದವೇ ಒಂದು ಅಭಾಸ. ಶಿವನ ಕಣ್ಣಿನಲ್ಲಿ ರಕ್ತ ಸೋರಿದರೆ ಅವನಿಗೆ ಬರುವುದು ಶಿವನ ಮೇಲೆ ಅನುಕಂಪವಲ್ಲ, ಬದಲಾಗಿ ಮೊದಲು ತನ್ನ ಸಲುವಾಗಿಯೇ ಭಯಪಟ್ಟನು. ಅನಂತರ ಅರಸನಿಗೆ ಕೇಡಾಯಿತೋ, ದೇಶಕ್ಕೆ ಕೇಡಾಯಿತೋ. ಇದು ಯಾವ ಉತ್ಪಾತದ ಸೂಚನೆಯೋ ಎಂಬ ಹೆದರಿಕೆ! ಈ ಕೌತುಕದ ಸುದ್ದಿಯನ್ನು ಊರಿನಲ್ಲಿ ಹಂಚಿ ತೆಪ್ಪಗೆ ಉಳಿದವನು. ಶಿವ ಅವನಿಗೆ ನಿಮಿತ್ತ ಮಾತ್ರ"[೨೩] ಇಲ್ಲಿ ಸಹಜವಾಗಿ ಪುರೋಹಿತ ಪೂಜಾರಿಯ ಮತ್ತು ಕಣ್ಣಪ್ಪನಿಗೂ ಕಲಹಗಳು ಸೃಷ್ಟಿಯಾಗಬೇಕಿತ್ತು. ಆದರೆ ಇಲ್ಲಿ ಕವಿ ಸಂಘರ್ಷ ನಡೆಯದಂತೆ ನೋಡಿಕೊಂಡಿದ್ದಾನೆ. ಭಕ್ತಿ ಮೂಲಕವೇ ಎಲ್ಲವನ್ನು ಸಾಧಿಸಿ ತೋರಿಸಬಹುದು ಎಂಬುದನ್ನು ಕಾವ್ಯದ ಮೂಲಕ ಕಟ್ಟಿಕೊಟ್ಟಿದ್ದಾನೆ. ಇದೇ ರೀತಿ ಕಲಿಕಾಮದೇವರ ರಗಳೆ, ಮಾರುಡಿಗೆ ನಾಚಿ ತಂದೆ ರಗಳೆಗಳಲ್ಲೂ ಇಂಥ ಸನ್ನಿವೇಶಗಳು ಬರುತ್ತವೆ.

## ೨. ಜೈನರು,ಶಿವಭಕ್ತರ ನಡುವಿನ ಸಂಘರ್ಷ

ಹರಿಹರನ ಕಾಲದಲ್ಲಿ ಜೈನಧರ್ಮ ಸಾಕಷ್ಟು ಪ್ರಬಲವಾಗಿತ್ತೆಂದು ತೋರುತ್ತದೆ. ಕಲಚೂರಿಯ ಅರಸನಲ್ಲಿ ಬಸವಣ್ಣನನ್ನು ಕುರಿತು ತಿಳಿಸುವವರಲ್ಲಿ ಜೈನರೂ ಇದ್ದರೆಂದು ರಗಳೆ ಸೂಚಿಸುತ್ತದೆ. ಶಿವಭಕ್ತರ ಉಪಟಳವನ್ನು ಸಹಿಸದೇ ಜೈನರು ಆಳುವ ಅರಸನಿಗೆ ಚಾಡಿ ಹೇಳುತ್ತಿದ್ದರು. ಕೆಲವೊಮ್ಮೆ ಜೈನರು ಧರ್ಮಾಂಧರಾಗಿ ವರ್ತಿಸುತ್ತಿದ್ದರು. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದಲ್ಲಿ ಶಿವಭಕ್ತರ ಮನಸ್ಸು ನೋಯುವಂತೆ ದೇವರಿಗೆ ಕಾಲು ನೀಡಿ ಮಲಗಿದ್ದ ಜೈನರ ಉದಾಹರಣೆ ಬಂದಿದೆ.

ಮಾರುಡಿಗೆ ನಾಚಿತಂದೆಯ ರಗಳೆಯಲ್ಲಿ ಶಿವಭಕ್ತನನ್ನು ಹೊಡೆದು ಅಭಿಮಾನ ಭಂಗವಾಗು ವಂತೆ ಅಪಮಾನಿಸಿದ ಜೈನರ ವರ್ತನೆ ಅಸಹ್ಯ ಉಂಟು ಮಾಡುವಷ್ಟಿದೆ. ಕೋವೂರ ಬೊಮ್ಮಿ ತಂದೆಯ ರಗಳೆಯಲ್ಲಿ ಅರಸು ಗಣಪರ್ವ ಮಾಡಲು ಹೋದಾಗ ಅವನ ಮಗನನ್ನು ಇರಿದು ಕೊಂದ ಜೈನರ ಮೋಸದ ಪ್ರಕರಣವಿದೆ. ಪ್ರತ್ಯಕ್ಷ ಮಾಡಿ ತೋರಿಸಿದರೆ ತಾವು ಶಿವಭಕ್ತರಾಗುತ್ತೇವೆ ಎಂದು ಆಹ್ವಾನಿಸಿ ಪವಾಡ ನಡೆಸಿದ ಜೈನರ ಉಲ್ಲೇಖ ಅದೇ ರಗಳೆಯಲ್ಲಿದೆ. ತೊರೆದ ಶಿರ ಮತ್ತೆ ಪಡೆಯಬೇಕೆಂದು ಸವಾಲು ಹಾಕಿ ಶಿವಭಕ್ತರಿಂದ ಹಾನಿಗೊಳಗಾದ ಜೈನರ ವಿವರ ಏಕಾಂತರಾಮಿ ತಂದೆ ರಗಳೆಯಲ್ಲಿದೆ.

ಜೈನರ ಬಸದಿಗಳು ನಾಡಿನ ತುಂಬ ವ್ಯಾಪಿಸಿದ್ದವು. ಅಬ್ಬಲೂರ, ಮಾರುಡಿಗೆ, ಮಂಗಳವೇಢೆ, ಕಲ್ಯಾಣ, ಕೇವಲ ಕೋವೋರೊಂದರಲ್ಲಿಯೇ ೭೦೦ ಬಸದಿಗಳಿದ್ದವು. ಬೊಮ್ಮಯ್ಯನ ಆಸ್ಥಾನದಲ್ಲಿ ಜೈನರೇ ಅಧಿಕಾರಿಗಳಾಗಿದ್ದರು. ಕ್ಷತ್ರಿಯರನ್ನು ಸೇವಿಸುತ್ತ ಅರಸುಪ್ರಿಯರಾಗಿ ಶಿವಭಕ್ತರನ್ನು ಎದುರು ಹಾಕಿಕೊಂಡ ಜೈನಧರ್ಮಿಯರ ಚಿತ್ರಣ ಧರ್ಮ ಸಂಘರ್ಷದ ಸಂದರ್ಭದಲ್ಲಿ ಹೆಚ್ಚು ಕಂಡುಬರುತ್ತದೆ. ಶಿವಭಕ್ತರೊಡನೆ ಮದುವೆಯಂಥ ಸಂಬಂಧಗಳನ್ನು ಇಟ್ಟುಕೊಂಡಿದ್ದರು. ಅವು ಒತ್ತಾಯ, ರಕ್ತ ಸಂಬಂಧದ ಸಂದರ್ಭದಲ್ಲಿ ಮಾತ್ರ ನಡೆಯುತ್ತಿದ್ದವು. ಧರ್ಮ ಸಂಘರ್ಷದ ವೈಪರೀತ್ಯ ಕಾಲಾವಧಿ ಹರಿಹರನದು, ಜೈನರನ್ನು ಬೈಯ್ಯುವ, ಜಿನಮೂರ್ತಿಗಳನ್ನು, ಜೈನ ಬಸದಿಗಳನ್ನು ನಾಶ ಮಾಡಿದ ಶಿವಭಕ್ತರ ಉಗ್ರ ಚಟುವಟಿಕೆಗಳು ರಗಳೆಗಳಲ್ಲಿ ವ್ಯಾಪಕವಾಗಿ ದೊರೆಯುತ್ತವೆ.

### ಆದಯ್ಯ ಮತ್ತು ಜೈನರ ಸಂಘರ್ಷ

ಈ ಪ್ರಸಂಗ ಆದಯ್ಯನ ರಗಳೆಯಲ್ಲಿ ಬಂದಿದೆ. ಕಾವ್ಯದಲ್ಲಿ ಪದ್ಮಾವತಿ ಆದಯ್ಯರ ದಾಂಪತ್ಯ ಬದುಕು ಅತ್ಯಂತ ಸುಂದರವಾಗಿ ಮೂಡಿಬಂದಿದೆ. ಪದ್ಮಾವತಿ ಜೈನರವಳಾದರೂ ತನ್ನ

ಜೈನತ್ವವನ್ನು ಎಂದು ಪ್ರದರ್ಶಿಸಿದವಳಲ್ಲ. ಕಥೆಯ ಉದ್ದಕ್ಕೂ ಆದರ್ಶ ಗೃಹಿಣಿಯಾಗಿ ಕಂಡಿದ್ದಾಳೆ. ಗಂಡ ಆದಯ್ಯ ಶಿವಭಕ್ತ. ಈತನ ಆಗುಹೋಗುಗಳಲ್ಲಿ ಬಾಗಿಯಾಗುತ್ತಾಳೆ. ಎಂತಹ ಸಂದರ್ಭದಲ್ಲೂ ಗಂಡನೊಡನೆ ಅಸಭ್ಯವಾಗಿ ವರ್ತಿಸಿದಂತೆ ಕಂಡುಬರುವುದಿಲ್ಲ. ಅಂತೆಯೇ ಆದಯ್ಯನೂ ಅಷ್ಟೇ ಪ್ರೀತಿಯಿಂದ ಬಾಳುತ್ತಾನೆ. ಇದು ಕಥೆಯ ವಸ್ತು. ಕೊಲೆ, ಸುಲಿಗೆಯಂಥ ಹಿಂಸಾ ಮಾರ್ಗಗಳು ಯಾವುದೇ ಸಮಸ್ಯೆಗಳಿಗೆ ಪರಿಹಾರವಾಗುವುದಿಲ್ಲ. ಆಕಸ್ಮಿಕವಾಗಿ ಸಿಕ್ಕಿದರೂ ಅದು ತಾತ್ಕಾಲಿಕವಾದುದಾಗಿರುತ್ತದೆ. ಆದುದರಿಂದ ವಿವೇಕ ಇರುವ ವ್ಯಕ್ತಿ. ಇಂಥ ಮಾರ್ಗಗಳಿಂದ ಸಮಸ್ಯೆಗಳಿಗೆ ಪರಿಹಾರವನ್ನು ಬಯಸುವುದಿಲ್ಲ. ಆದರೆ ಕೆಲವೊಂದು ಸಮಯ, ಸನ್ನಿವೇಶಗಳು: ಮನುಷ್ಯ, ಅವನಷ್ಟೇ ತಾಳ್ಮೆಯ ವ್ಯಕ್ತಿಯಾಗಿದ್ದರೂ ಆ ತಾಳ್ಮೆಯನ್ನು ಕೆಣಕಿ ಹಿಂಸಾ ಮಾರ್ಗವನ್ನು ಹಿಡಿಯುವಂತೆ ಮಾಡುತ್ತದೆ. ಇಂಥದೊಂದು ಸನ್ನಿವೇಶ ಆದಯ್ಯನ ರಗಳೆಯಲ್ಲಿ ಬರುತ್ತದೆ.

ಇಲ್ಲಿ ಬರುವ ಸವಣರೇ ಕೆಣಕುವ ವ್ಯಕ್ತಿತ್ವದವರು. ವಾಸ್ತವವಾಗಿ ಆದಯ್ಯನ ವ್ಯಕ್ತಿತ್ವವೇ ತಾಳ್ಮೆಯದು. ಎರಡು ಸಾರಿ ಸವಣರು ಕೆಣಕಿದಾಗಲೂ ಆತ ಸಿಟ್ಟಾದವನಲ್ಲ. ಆದರೆ ಸವಣರು ಮತ್ತ ಮತ್ತೆ ಕೆಣಕುವುದನ್ನು ಮುಂದುವರಿಸಿದಾಗ ಆದಯ್ಯನಿಗೆ "ಹಿಂಸೆಯಲ್ಲದೇ ಬೇರೆ ಮಾರ್ಗವಿರಲಿಲ್ಲ, ಹಾಗಾಗಿ ಆತ ಹಿಂಸೆಯಲ್ಲಿ ತೊಡಗಿದ ತಮ್ಮ ಕೆಣಕುವ ಬುದ್ಧಿಯಿಂದಾಗಿ ಸವಣರೂ ನಾಶವಾದರು. ಕಥೆಯಲ್ಲಿ ಬರುವ ಒಂದೆರಡು ಘಟನೆಗಳನ್ನು ಸವಣರು ಕೆಣಕು ಬುದ್ಧಿಗೆ ಉದಾಹರಿಸಬಹುದು.

೧)ಆದಯ್ಯ ತಪೋಧನರಿಗಾಗಿ ಮಾಡಿಸಿಟ್ಟ ಅಡುಗೆಯನ್ನು ಪಾರಿಷ ಪಂಡಿತನು (ಪದ್ಮಾವತಿಯ ತಂದೆ, ಜೈನ) ಪದ್ಮಾವತಿ ತಡೆದರೂ ಲೆಕ್ಕಿಸದೇ ತೆಗೆದುಕೊಂಡು ಹೋಗಿ ಋಷಿಗಳಿಗೆ ಬಡಿಸಿದ್ದು, ಅದನ್ನು ಕವಿ ಕರೆದು "ಕೇಸರಿ ಕೋರಿತೆಗೆ ಕತ್ತುವಿಯಂ ಕೊಳುವಂತೆ ಸುಣ್ಣದ ಕೊರತೆಗೆ ಬೆಣ್ಣೆಯಂ ಬಳಸುವಂತೆ ಬೇಲಿಯ ಕೊರೆತೆಗೆ ಕಲ್ಪತರವಂ ತರುವರಂತೆ ಪದ್ಮಾವತಿಯ ಜೋನಮಂ ಬೇಡೆ ಪದ್ಮಾವತಿ ನಡನಡಂ ಬೇಡ ಬೇಡ ಕೊಡುವುದಿಲ್ಲವೆಂದು ಬಾಗಿಲೊಳ್ನಿಲೆ ಚಂದ್ರಕಳೆಯಂ ರಾಹು ಪಿಡಿದಂತೆ ಪಿಡಿದು ಒಳಪೊಕ್ಕು ಕೊಂಡು ಪೋಗಿ ಸುರಹೊನ್ನೆಯ .......... ....... ಪೊರಮೊಡುವ ಸಮಯದೊಳ್"[೨೪] ಎಂದು ಚಿತ್ರಿಸುತ್ತಾನೆ. ಇಲ್ಲಿ ಕವಿ ಜೈನರ ಸಣ್ಣತನವನ್ನು ಚೆನ್ನಾಗಿ ಹಿಡಿದಿಟ್ಟಿದ್ದಾನೆ. ಪದ್ಮಾವತಿ ತಮ್ಮ ಮಗಳು, ಆದಯ್ಯ ತಮ್ಮ ಅಳಿಯ ಎಂಬುದನ್ನು ಕಾಣದೆ ತಮ್ಮ ಮುಖದ ನೇರಕ್ಕೆ ನಡೆದುಕೊಳ್ಳುತ್ತಾರೆ. ಪದ್ಮಾವತಿ ಗಡಗಡನೆ ನಡುಗುತ್ತಾ ಬೇಡ ಬೇಡೆವೆಂದರೂ ಬಿಡದೆ ಬಲವಂತವಾಗಿ ಕಿತ್ತೊಯ್ಯುವುದು ಅವರ ಅಮಾನವೀಯ, ಹೇಯ ವ್ಯಕ್ತಿತ್ವದ ಘೋರ ರೂಪ. ಅವರಲ್ಲಿ ಕಿಂಚಿತ್ತೂ ವಿನಯವಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ.

೨) ಆದಯ್ಯ ಊಟವನ್ನೇ ತ್ಯಜಿಸಿದ್ದು, ತನಗಾದ ನೋವನ್ನು ವ್ಯಕ್ತಪಡಿಸಿಕೊಳ್ಳಲಾಗದ ಆದಯ್ಯ ಊಟ ಬಿಡುವುದು ಸಹಜವೇ ಆಗಿದೆ. ಅವನು ಊಟ ಬಿಡಲು ಕಾರಣ ಪಾರಿಷ ಪಂಡಿತ. ಆದ್ದರಿಂದ ಏನಾದರೂ ಮಾಡಿ ಆದಯ್ಯ ಊಟ ಮಾಡುವಂತೆ ಮಾಡಬೇಕಾದದ್ದು ಅವನ ಕರ್ತವ್ಯವಾಗಿತ್ತು. ನೊಂದ ಮನಸ್ಸಿಗೆ ಶಾಂತಿಯನ್ನು ಹೇಳಬೇಕಿತ್ತು. ಹಾಗೆಯ ನಡೆದುಕೊಂಡಿದ್ದರೆ ಪಂಡಿತನ ವ್ಯಕ್ತಿತ್ವ ಹೆಚ್ಚುತ್ತಿತ್ತು. ಆದರೆ ಗರ್ವ ತುಂಬಿದ ಪಂಡಿತನಿಗೆ ಅದು ಹೇಗೆ ತಾನೇ ಸಾಧ್ಯ? ಅದಕ್ಕೆ ಬದಲಾಗಿ ಇಂತಪ್ಪ ಛಲಿಯೆಂ ತಾದೊಡಂ ತಾನರ್ಚಿಪ ಸೋಮನಾಥನಂ ಸುರಹೊನ್ನೆಯ ಬಸದಿಗೆ ತಂದಲ್ಲದುಂಬನಲ್ಲ"[೨೫] ಎಂದು ಕಟಕಿಯಾಡುತ್ತಾನೆ. ತಮ್ಮ ತಪ್ಪಿನಿಂದಾಗಿಯೇ ಆತ ಊಟ ಬಿಟ್ಟಿರುವುದು ಎಂದು ತಿಳಿದಾಗಲೂ ಹೀಗೆ ನಡೆದುಕೊಳ್ಳುವುದು ಅವನ ದುರ್ನಡತೆಯ ಅತಿರೇಕವನ್ನು ವ್ಯಕ್ತಪಡಿಸುತ್ತದೆ.

ಒಟ್ಟಾರೆ ಹೇಳುವುದಾದರೆ ಇದೊಂದು ಮತೀಯ ಕಾವ್ಯ. ಹರಿಹರ ತನ್ನ ಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವುದಕ್ಕಾಗಿಯೇ ಪ್ರತಿಯೊಂದು ಸನ್ನಿವೇಶವನ್ನು ಸೃಷ್ಟಿಸಿದ್ದಾನೆ. ಆದರೂ ಕಾವ್ಯದಲ್ಲಿ ಭಕ್ತಿ, ಪ್ರೇಮ, ವೀರತ್ವ, ಜೈನರ ದುರ್ನಡತೆಗಳು ಆಕರ್ಷಕವಾಗಿ ಮೂಡಿ ಬಂದಿವೆ.

**ಏಕಾಂತರಾಮಿ ತಂದೆ,ಜೈನರ ಸಂಘರ್ಷ**

ಜೈನರಿಗೆ ಮತ್ತು ಜೈನ ಬಸದಿಗಳಿಗೆ ಅಬ್ಬಲೂರು ಪ್ರಸಿದ್ಧ ಸ್ಥಳ. ಎಲ್ಲೆಲ್ಲಿ ನೋಡಿದರೂ ಜೈನ ಬಸದಿಗಳೇ. ಅವುಗಳ ಮಧ್ಯೆಯೇ ಬ್ರಹ್ಮೇಶ್ವರ ಶಿವದೇವಾಲಯವೂ ಇದ್ದು, ಅದು ಜೈನರ ವಿರೋಧದಿಂದಾಗಿ ಪಾಳು ಬಿದ್ದಿರುತ್ತದೆ. ಪೂಜೆ ಇಲ್ಲ, ಪುನಸ್ಕಾರಗಳಿಲ್ಲ, ಸದ್ಭಕ್ತರೊಬ್ಬರೂ ಅತ್ತ ಸುಳಿಯುವುದೂ ಇಲ್ಲ. ಈ ವಿರೋಧಗಳ ಮುಕ್ತಿಗಾಗಿ ಶಿವಶರಣನೊಬ್ಬನ ನಿರೀಕ್ಷೆಯಲ್ಲಿರುವಾಗ ಆ ಸಮಯಕ್ಕೆ ಸರಿಯಾಗಿ, ಕಲಿಯೂ, ಅಪ್ರತಿಮ ಶಿವಭಕ್ತನೂ ಆದ ಏಕಾಂತರಾಮಯ್ಯ ಆ ಮಾರ್ಗವಾಗಿ ಬರುತ್ತಾನೆ. ಶಿವನ ದುಃಸ್ಥಿತಿ ಕಂಡು ಮರುಗಿ, ಜೈನರನ್ನೆಲ್ಲ ಸದೆ ಬಡಿದು, ಜೈನ ಬಸದಿಗಳನ್ನೆಲ್ಲ ಕಿತ್ತು ಬಿಸಾಡಿ, ಮತ್ತೆ ಶಿವಧರ್ಮವು ನೆಲೆಗೊಳ್ಳುವಂತೆ ಮಾಡುತ್ತಾನೆ. ಹಾಳುಬಿದ್ದ ಶಿವದೇವಾಲಯವೊಂದರ ಪುನರುಜ್ಜೀವನದ ಈ ಕಥೆಯಲ್ಲಿ ಏಕಾಂತರಾಮಯ್ಯನ ಭಕ್ತಿ, ಶಕ್ತಿ, ವಿರೋಚಿತ ಹೋರಾಟಗಳಿಲ್ಲದೇ ಜೈನರ ದುರ್ನಡತೆ, ಅವುಗಳಿಂದಾಗಿ ಅವರು ಅವನತಿ ಹೊಂದಿದ ಚಿತ್ರಣವಿದೆ.

ಶಿವಲಿಂಗ, ಶಿವಕ್ಷೇತ್ರಗಳನ್ನು ನೋಡುವ ಉದ್ದೇಶದಿಂದ ಅಬ್ಬಲೂರಿಗೆ ಏಕಾಂತರಾಮಯ್ಯ ಬರುತ್ತಾನೆ. ಅವನು ಬರುತ್ತಿದ್ದಂತೆಯೇ ಅಬ್ಬಲೂರಿನ ಜಿನಪ್ರತಿಮೆಗಳು ನಡುಗಲಾರಂಭಿಸುತ್ತವೆ.

ಜಿನಬೊಂಬೆಗಳ ಕಣ್ಣಲ್ಲಿ ಕಣ್ಣೀರು ಸುರಿಯಲಾರಂಭಿಸುತ್ತದೆ. ಅವುಗಳನ್ನು ಕಾಣುತ್ತಿದ್ದಂತೆಯೇ ಏಕಾಂತರಾಮಯ್ಯ ಸಿಡಿಮಿಡಿಗೊಳ್ಳುತ್ತಾನೆ. ಛೀ: ಛೀ ಎನ್ನುತ್ತ ನೆಲವನ್ನು ಒದೆದು ತನ್ನನ್ನು ತಾನು ಬೈದುಕೊಳ್ಳುತ್ತಾನೆ. ಆ ಹೊತ್ತಿಗೆ ಶಿವಭಕ್ತನೊಬ್ಬನ ಆಗಮನವನ್ನೇ ಕಾಯುತ್ತಿದ್ದ ಶಿವ ಪ್ರತ್ಯಕ್ಷನಾಗುತ್ತಾನೆ. ಶಿವದರ್ಶನವನ್ನು ಪಡೆದ ರಾಮಯ್ಯ 'ತನ್ನಯ್ಯ ಶಿವನೆ ಎಮ್ಮಳಿಸುತಿರ್ದ್ಯ ತಂದೆ' ಎಂದು ಕೇಳುತ್ತಾನೆ. ಆಗ ಶಿವನು ಜೈನರಿಂದಾಗಿ ತಾನು ಅನುಭವಿಸುತ್ತಿರುವ ವಿರೋಧಗಳನ್ನೆಲ್ಲ ರಾಮಿ ತಂದೆಯನ್ನು ಬಿಗಿದಪ್ಪಿಕೊಂಡು ವಿವರಿಸುತ್ತಾನೆ. ಪ್ರತಿಯಾಗಿ ಅರುಹನ ಪ್ರತಿಮೆಗಳನೆತ್ತಿ ಬಿಸುಡಯ್ಯ ನೆರೆದಿರ್ದ ಜೈನ ಸಂಕುಳವನ್ನೆಬ್ಬಟ್ಟಯ್ಯ"[೨೬] ಎಂದು ತನ್ನ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಭಕ್ತನನ್ನು ರಕ್ಷಿಸಬೇಕಾದ ಶಿವನೇ ತನ್ನನ್ನು ದುಃಸ್ಥಿತಿಯಿಂದ ಪಾರು ಮಾಡು ಎಂದು ಭಕ್ತನೊಬ್ಬನನ್ನು ಬೇಡಿಕೊಳ್ಳುವ ದೃಶ್ಯ ಅತ್ಯಂತ ಕುತೂಹಲಕರವಾಗಿದ್ದು, ಏಕಾಂತರಾಮಯ್ಯನ ಅಸದೃಶ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತದೆ.

ಶಿವಪ್ರತ್ಯಕ್ಷನಾಗಿ, ಜೈನರನ್ನು ಸಂಹರಿಸುವಂತೆ ತಿಳಿಸಿಯೂ ಬಿಟ್ಟ. ಆದರೆ ಭಕ್ತನಾದ ರಾಮಯ್ಯ ಶಿವನ ಇಂಗಿತದಂತೆ ಖಡ್ಗ ಹಿಡಿದು ಜೈನರನ್ನು ಸಂಹರಿಸಲು ಹೊರಟಿದ್ದರೆ ಕಥೆ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿದ್ದು, ಧರ್ಮದ್ವೇಷದ ಹಿನ್ನೆಲೆಯಲ್ಲಿ ರಚನೆಯಾದ ಧಾರ್ಮಿಕ ಅಸೂಯೆಯ ಕಾವ್ಯ ಎಂದೆನಿಸಿಕೊಳ್ಳುತ್ತಿತ್ತು. ಆದರೆ ಕವಿ ತನ್ನ ಚಾಣಕ್ಷತೆಯಿಂದ ಬೇರೊಂದು ಸನ್ನಿವೇಶವನ್ನು ಸೃಷ್ಟಿ ಮಾಡುತ್ತಾನೆ. ಜೈನರ ದುರ್ವರ್ತನೆಗಳು ಅವನಿಗೆ ಗೋಚರವಾಗುತ್ತದೆ. ಏಕಾಂತ ರಾಮಯ್ಯ ಶಿವಪೂಜೆಗೆ ಬರುವಾಗ, ರಂಗಮಂಟಪದ ಮಧ್ಯೆ ಶಿವನಿಗೆ ಎದುರಾಗಿ, ಕಾಲುಚಾಚಿ ಸವಣನೊಬ್ಬ ಮಲಗಿರುವುದನ್ನು ಕಾಣುತ್ತಾನೆ. ಇದು ರಾಮಯ್ಯನಿಗೆ ಸಿಡಿಮಿಡಿಗೊಳ್ಳುವಂತೆ ಮಾಡುತ್ತದೆ. ಸವಣ, ರಾಮಯ್ಯನ ನಡುವೆ ಮಾತಿನ ಚಕಮಕಿ ನಡೆಯುತ್ತದೆ. ಸವಣ ಶಿವನನ್ನು ಕನಿಷ್ಠವಾಗಿ ಕಾಣುತ್ತಾನೆ. ರಾಮಯ್ಯ ಸಹನೆಯನ್ನು ಕಳೆದುಕೊಳ್ಳುತ್ತಾನೆ.

"ಕೇಳೆಲವೋ ಮಾರುಂ ಪ್ರದವನುರುಪಿದನನರಿಯ

ಕಾಲನಂ ಬಸ್ಮೀಕೃತಂ ಮಾಡಿದವನರಿಯ

. . . . . . . . . . . . . . . . . . . . . . . .

ಅಹಮುರವೆರಸಿ ಉದ್ಭಟಯ್ಯನನೊಯ್ದು ನನರಿಯ

ಎಲವೋ ದಾಸಂಗೆ ತವನಿಧಿಯನಿತ್ತ ನನರಿಯೆ"[೨೭]

ಎಂದು ಹಲವು ರೀತಿಯಿಂದ ಶಿವನ ಬಣ್ಣನೆಯನ್ನು ಮಾಡುತ್ತಾನೆ. ಆದರೂ ಸವಣನಿಗೆ ಶಿವನ ಮಹಿಮೆಯ ಅರಿವಾಗುವುದಿಲ್ಲ. ಎಲೆ ಭಕ್ತ ತೆಗೆ ಪುರಾಣದ ಮಾತು ನಿನಗೇಕೆ' ಎಂದು ಅಣಕವಾಡುತ್ತಾನೆ. ಎಲ್ಲರೂ ನೋಡುತ್ತಿರುವಂತೆಯೇ ತಲೆಯನ್ನು ಕತ್ತರಿಸಿಕೊಂಡು ಮತ್ತೆ ಪಡೆಯಬೇಕೆಂದು ಸವಾಲು ಹಾಕುತ್ತಾನೆ. ಈ ಘಟನೆ ಮತ್ತಷ್ಟು ರಾಮಯ್ಯನನ್ನು ಕೆಣಕುತ್ತದೆ. ಶಿವನನ್ನು ಕೀಳಾಗಿ ಕಂಡವನಿಗೆ ತಕ್ಕ ಪಾಠ ಕಲಿಸಲು ಸಿದ್ಧವಾಗುತ್ತಾನೆ. ಇಬ್ಬರೂ ಭಾಷಾ ಪತ್ರವನ್ನು ಬರೆಸುತ್ತಾರೆ. ಒಂದು ಕಡೆ ಅಗ್ಗವಣಿಯ ಹೊನ್ನ ತಂದೆ ಹಾಗೂ ಅನೇಕ ಶರಣರ ಸಮೂಹ, ಮತ್ತೊಂದು ಕಡೆ ಅದುಹುತನ ಭಕ್ತ ಸಮೂಹ ಏಕಾಂತರಾಮಯ್ಯನ ಸಾಹಸ ನೋಡಲು ಕಿಕ್ಕಿರಿದು ನೆರೆಯುತ್ತದೆ. ಆ ಸಮಯದಲ್ಲಿ ಸರ್ಪಭೂಷಣನ ಭಕ್ತನಾದ ರಾಮಯ್ಯ ಬೆಳಗುವ ಹೊಸ ಭಸಿತವನ್ನು ಧರಿಸಿ ಕರಮುರಂ ಕಂಠದೊಳುರುದ್ರಾಕ್ಷಿಯಂ ಧರಿಸಿ ಶಿರಕರ್ಣ ತೋಳ್ಗಳೊಳಗಂತವಂ ಸಿಂಗರಿಸಿ .................. ಶಿವಭಕ್ತರಿಗೆ ಮೈಯಕ್ಕಿ ಹೋ ಹೋ ಎಂದು ಭವನತ್ತ ಕೈಯೆತ್ತಿ ಶರಣಾರ್ಥಿ ಶರಣೆಂದು ನಿನ್ನಯ ಕರುಣಮಂ ಈವುದನಗೆಂದು"[೨೮]. ತನ್ನ ಶಿರವನರಿದುಕೊಳ್ಳುತ್ತಾನೆ.

ಭಾಷಾಪತ್ರದಂತೆ ಜೈನರ ಸೋಲು ಖಚಿತವಾಗಿದೆ. ಜಿನಪ್ರತಿಮೆಗಳನ್ನೆಲ್ಲಾ ಎತ್ತಿ ಬಿಸುಟು ಶಿವಲಿಂಗಗಳನ್ನು ಸ್ಥಾಪಿಸಬೇಕಿದೆ. ಆದರೆ ಕಪಟ ಜೈನರಿಗೆ ತಮ್ಮ ಸೋಲನ್ನು ಒಪ್ಪಿಕೊಳ್ಳುವುದು ಸಾಧ್ಯವಾಗುತ್ತಿಲ್ಲ. ಹಾಗಾಗಿ ಮತ್ತೆ ಅಣಕವಾಡುತ್ತಾರೆ. 'ಮಾಯಾವಿದು ಮಂತ್ರವಿದು ಮಹೇಂದ್ರ ಜಾಲವಿದು' ಎನ್ನುತ ಬೇರೆಯಾದ ರುಂಡ ಮುಂಡಗಳನ್ನು ಏಳು ದಿನಗಳ ನಂತರ ಮತ್ತೆ ಪಡೆಯುವಂತೆ ನುಡಿಯುತ್ತಾರೆ. ವಾಸ್ತವವಾಗಿ ಶರಣರು ಮತ್ತು ಜೈನರ ನಡುವೆ ಇಲ್ಲಿಯೇ ಭೀಕರ ಹೋರಾಟ ಆರಂಭವಾಗಬೇಕಿತ್ತು. ಆದರೆ, ಶರಣರು ಜೈನರ ಈ ಸವಾಲನ್ನು ಪ್ರೀತಿಯಿಂದಲೇ ಸ್ವೀಕರಿಸುತ್ತಾರೆ. ಅಲ್ಲೆ ಇದ್ದ ಹೊನ್ನ ತಂಡಗಳು ಹೊನ್ನ 'ಪರಿಯಾಣ'ವೊಂದನ್ನು ತರಿಸಿ ಅದರೊಳಗೆ ರಾಮಯ್ಯನ ಶಿರವನಿರಿಸುತ್ತಾರೆ.

ವೀರಶರಣರನ್ನು ದೇಹದ ರಕ್ಷಣೆಗೆ ನೇಮಿಸಿ ಹೊನ್ನ ಪರಿಯಾಣ'ವನ್ನು ಅಣ್ಗಿಗೆರೆಯ ಅಮೃತನಾಥ. ಕೆಂಭಾವಿಯ ಭೋಗನಾಥ, ಕಪ್ಪಡಿಯ ಸಂಗಮೇಶ, ಸೊನ್ನಲಿಗೆಯ ಸಿದ್ದರಾಮನಲ್ಲಿಗೆ ಬಂದು, 'ದೇವ ನಿಮ್ಮಯ ಕರುಣವಿಯೆನುತ್ತ' ಅವರ ಕರುಣವನ್ನು ಪಡೆಯುತ್ತಾರೆ. ಏಳುದಿನಗಳ ಕಾಲ ಹೀಗೆ ಮೆರೆಸಿದ ಹೊನ್ನ ತಂದೆ ಏಳನೇ ದಿನಕ್ಕೆ ಸರಿಯಾಗಿ ಆ ಶಿರವನ್ನು ತಂದು, ಬ್ರಹ್ಮೇಶ್ವರ ದೇವಾಲಯದ ಶಿವನ ಪೀಠ ಮೂಲದಲ್ಲಿ ಹೊನ್ನ ಪರಿಯಾಣದ ಸಹಿತ ಇಳುಹುತ್ತಾರೆ. ಸುತ್ತಮುತ್ತ ನೆರೆದಿದ್ದ ಸವಣರನ್ನೆಲ್ಲಾ ಕಂಡು ಬಗುಳ್ದ ಸವಣನೋರ್ಡಿರೊ' ಎನ್ನುತ್ತಾ" ಇದು ಶಿವಲಿಂಗ ಪ್ರತಿಷ್ಠೆಯಂ ಮಾಳ್ಪಂತೆ /ತಂದು ಪೀಠಿಕೆಯೊಳಗೆ ಲಿಂಗವನಿಳುಪುವಂತೆ"[೨೯] ರಾಮಿ ತಂದೆಗಳ

ಶಿರವನ್ನು ತಂದು ಅವರ ದೇಹದ ಮೇಲೇರಿಸುತ್ತಾರೆ. ಹಾಗೆ ಇಳುಹುತ್ತಿದ್ದಂತೆಯೇ ರಾಮಿ ತಂದೆಯ ದೇಹ ಜೀವ ಪಡೆಯುತ್ತದೆ.

ಒಂದು ಕೈಯಲ್ಲಿ ಶಿರವ ಹತ್ತಿಸಿಕೊಳ್ಳುತ್ತಾ, ಮತ್ತೊಂದು ಕೈಯಲ್ಲಿ ಕೂಡಲಗಿ ಆಯುಧವನ್ನಿಡಿದು ಘರ್ಜಿಸುತ್ತ, ರಾವಿತಂದೆಗಳು ಸವಣರ ಮೇಲೆ ಬೀಳುತ್ತಾರೆ. ಶಿವಪಡೆಯನ್ನು ಕೈ ಬೀಸಿ ಕರೆಯುತ್ತಿದ್ದಂತೆಯೇ ಕಾರಮಿಂಚಿನ ಹಾಗೆ ಮುತ್ತಿ, ಅರುಹುಕಾಲ ನಿಕರವನ್ನು 'ಪರಿದಟ್ಟಿ' ಓಡಿಸುತ್ತಾರೆ. ಬಸದಿಗಳೊಳಗೆ ನುಗ್ಗಿ ಜಿನ ಪ್ರತಿಮೆಗಳನ್ನೆಲ್ಲಾ ಕಿತ್ತು ಬೀಸಾಡುತ್ತಾರೆ. ಆ ಉತ್ಸಾಹದಲ್ಲಿ ಶರಣಪಡೆ ನಲಿನಲಿದು 'ನೆಗೆನೆಗೆದು' ನಿಂತು ಆಡತೊಡಗುತ್ತದೆ. ಅವರನ್ನೆಲ್ಲಾ ಈಕ್ಷಿಸುತ್ತಾನಿಂತ ರಾಮಯ್ಯ ಆನಂದದಿಂದ ಶಿವಲಿಂಗಗಳನ್ನು ಧರಿಸಿ 'ನಾನಾ ಮೂಹೂರ್ತದಿಂದಂ ಲಿಂಗವಂ ಇರಿಸಿ' ಲಿಂಗ ಪ್ರತಿಷ್ಠೆಯನ್ನು ಮಾಡುತ್ತಾನೆ. ಹೀಗೆ ಇಡೀ ಸವಣ ಸಮೂಹ ತಾವು ಮಾಡಿದ ಕುಹಕಗಳಿಂದಾಗಿ ಸರ್ವನಾಶ ಹೊಂದಿ, ಅಬ್ಬಲೂರಿನಲ್ಲಿ ಮತ್ತೆ ಶಿವನ ಮೂರ್ತಿ ಪ್ರತಿಷ್ಠಾಪನೆಯಾಗುತ್ತದೆ. ಒಟ್ಟಿನಲ್ಲಿ ವೀರ ರಸದ ತೀಕ್ಷ್ಣತೆ, ಭಾವಾವೇಶದ ಕೆಚ್ಚು ಈ ರಗಳೆಯ ಮುಖ್ಯ ಶಕ್ತಿ. ಮಾತಿಗೆ ಮಾತು ಬೆಳೆದು ಕಲಹದ ಕಿಡಿಗೆದರಿ, ಸನ್ನಿವೇಶ ಕಾವೇರುವಂತೆ ನಿರೂಪಿಸುವ ಕವಿಯ ಕಲೆ ಇಲ್ಲಿ ಯಶಸ್ವಿಯಾಗಿದೆ. ಏಕಾಂತ ರಾಮಯ್ಯ ತನ್ನ ತಲೆಯನ್ನು ಕಡಿದಿಡುವ ಸನ್ನಿವೇಶ ರೋಮಾಂಚಕಾರಿಯಾಗಿದೆ. ಮತೀಯ ಘರ್ಷಣೆ ಎಂಬೊಂದು ಅಂಶವನ್ನು ಬದಿಗಿರಿಸಿ ರಸೈಕ ದೃಷ್ಟಿಯಿಂದ ಅವಲೋಕಿಸಿದಲ್ಲಿ ಕವಿಯ ಹೋರಾಟದ ವ್ಯಕ್ತಿತ್ವ ಎದ್ದು ಕಾಣುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು. ಹೀಗೆ ಒಂದಿಲ್ಲೊಂದು ಕಾರಣಗಳಿಗಾಗಿ ಜೈನರು, ಶಿವಭಕ್ತರ ನಡುವೆ ಸಂಘರ್ಷಗಳು ನಡೆದಿರುವ ಪ್ರಸಂಗಗಳು ಸಾಕಷ್ಟಿವೆ.

### ವೈಜಕವ್ವೆ, ನೇಮಿಶೆಟ್ಟಿ ನಡುವೆ ಸಂಘರ್ಷ

ಇವರ ಪ್ರಸಂಗ ವೈಜಕವ್ವೆ ರಗಳೆಯಲ್ಲಿ ಬರುತ್ತದೆ. ಇಲ್ಲಿ ವೈಜಕವ್ವೆ ಶಿವ ಭಕ್ತೆ. ದುರ್ದೈವದಿಂದ ಅವಳು ಜೈನನೊಬ್ಬನನ್ನು ಮದುವೆಯಾಗಬೇಕಾಗುತ್ತದೆ. ತನ್ನ ಮನದ ಬಯಕೆಗೆ ಅನುಗುಣನಲ್ಲದವನನ್ನು ಮದುವೆಯಾಗಿ ಸಂಸಾರ ಹೂಡಿದ ಅವಳು ತಮಗೆ ನಡುವೆ ಚಂದ್ರನಿರುವಂತೆ ಇದ್ದು, ಆಂತರ್ಯದಲ್ಲಿ ಶಿವಾರ್ಚನೆ ಮಾಡುತ್ತಾಳೆ. ಜೈನನಿಂದ ಬಿಡುಗಡೆಗಾಗಿ ಒಳಗೊಳಗೆ ಶಿವನನ್ನು ಬೇಡುತ್ತಾಳೆ. ಈ ಸಂದರ್ಭದಲ್ಲಿ ಕವಿ, ಬರಲಿರುವ ಜೈನ ಋಷಿಗಳಿಗೆ ಬೋನ ತಯಾರಿಸುವ ಒಂದು ಸನ್ನಿವೇಶವನ್ನು ಸೃಷ್ಟಿಸುತ್ತಾನೆ. ಒಮ್ಮೆ ನೇಮಿಶೆಟ್ಟಿ ಹೆಂಡತಿಯಾದ ವೈಜಕವ್ವೆಗೆ ಋಷಿಗಳಿಗೆ

ಬೋನವನ್ನು ಸಿದ್ಧಪಡಿಸುವಂತೆ ತಿಳಿಸುತ್ತಾನೆ. ಅದರಂತೆ ಅವಳು ಹಾಲುಂಡೆ, ಹಾಲವುಗೆ, ಪಾಯಿಸ ಮುಂತಾದ ಬಗೆಬಗೆಯ ಆಹಾರವನ್ನು ತಯಾರಿಸುತ್ತಾಳೆ.

ಹಾಗೆ ತಯಾರಿಸಿದ ಮೇಲೆ ಶಿವನನ್ನು ನೆನೆಯುತ್ತಾಳೆ. ಆ ಸಮಯಕ್ಕೆ ಸರಿಯಾಗಿ ಶಿವ, ಭಿಕ್ಷುಕನ ವೇಷಧರಿಸಿ, ವೈಜಕವ್ವೆ ಬಳಿ ಬಂದು ಭಿಕ್ಷೆ ಕೇಳುತ್ತಾನೆ. ಭಿಕ್ಷುಕನ ಧ್ವನಿ ಕೇಳುತ್ತಿದ್ದಂತೆಯೇ ವೈಜಕವ್ವೆ ಬಳಿಗೆ ಬಂದವನು ಶಿವನೇ ಇರಬೇಕೆಂದು ತಿಳಿಯುತ್ತದೆ. ಭಿಕ್ಷೆ ತಂದು ಭಿಕ್ಷಾ ಪಾತ್ರೆಯಲ್ಲಿಡುತ್ತಾಳೆ. ಎಷ್ಟು ಭಿಕ್ಷೆ ಹಾಕಿದರೂ ಪಾತ್ರೆ ತುಂಬುವುದೇ ಇಲ್ಲ. ನೀಡಿ ನೀಡಿ ಕೊನೆಗೆ, ಜೈನರಿಗಾಗಿ ತಯಾರಿಸಿದ ಅಡುಗೆಯೆಲ್ಲವೂ ತೀರುತ್ತದೆ. ಆದರೂ ವೈಜಕವ್ವೆ ಹರ್ಷದಿಂದ ಬೀಗುತ್ತಾಳೆ. ಅದೇ ಹರ್ಷದಲ್ಲಿ ಶಿವನನ್ನು ಕೂಡಲೇ ಹೋಗಬೇಕೆಂದು ಭಿನ್ನವಿಸಿಕೊಳ್ಳುತ್ತಾಳೆ. ಆ ಹೊತ್ತಿಗೆ ನೇಮಿಶೆಟ್ಟಿ ಋಷಿಗಳೊಡನೆ ಬರುತ್ತಾನೆ. 'ಎಮ್ಮ ಪವಾಡದ' ಬೋನವನ್ನು ಋಷಿಗಳು ಆರೋಗಿಸದೆ ಹಿಂದಿರುಗುತ್ತಾರೆ. ಇದರಿಂದ ಮುನಿದ ನೇಮಿಶೆಟ್ಟಿ,

"ರಿಸಿಯರೊಗರಂಗಳಂ ತಪಸ್ವಿಗಿಕ್ಕಿ ಕೆಡಿಸಿ ಕಳೆದೆ

ಹೊಸೆದ ಹೂವಿನಂತೆ ರಿಸಿಯೆರೆಲ್ಲ ಪಸಿದು ಪೋದರುಱಿದೆ

ಗೊರವರೆಂಜಲಾಯ್ತು ಮುಟ್ಟುಪಡವನಿಂತು ಮಾಡಿನಿಂದೆ

ಅರುಹನ ವ್ರತಕ್ಕೆ ಹೊಲ್ಲಗೆಯ್ದು ಕುಂದನಿಂದು ತಂದೆ"[೩೦]

ಎಂದು ನುಡಿಯುತ್ತಾನೆ. ಆಗ ವೈಜಕವ್ವೆ–

"ಶಿವನ ನೊಸಲ ನಯನದೆಂಜಲೆಂಬುದಱಿಯ ಲೋಕವೆಲ್ಲ

ಭವನ ಕರುಣದಿಂದ ಪಿಪ್ಪುದೆಂಬುದಱಿಯ ಭುವನವೆಲ್ಲ

ನೇಮಿಶೆಟ್ಟಿ ನೀನದಕ್ಕೆ ಮರುಳಾಗಿ ಕೆಟ್ಟು ನುಡಿದೆ.

. . . . . . . . . . . . . . . . . . . . ..

ಅಯಶವಿಹದ ಪರದ ನರಕ ಬಱಿದೆ ಕೆಟ್ಟು ಪೋಗಲೇಕೆ"[೩೧]

ಎಂದು ನುಡಿಯುತ್ತಾಳೆ. ವೈಜಕವ್ವೆಯ ಮಾತನ್ನು ಕೇಳಿದ ನೇಮಿಶೆಟ್ಟಿ, ಪುಣ್ಯದ ಫಲವನ್ನು

ಘಾಸಿಗೊಳಿಸುವ ಹಾಗೆ ಅವಳನ್ನು ಚೆನ್ನಾಗಿ ಥಳಿಸುತ್ತಾನೆ. ದುಃಖದಲ್ಲಿ ವೈಜಕವ್ವೆ ಮುಳುಗಿರುವಾಗ ಶಿವ ಕನಸಿನಲ್ಲಿ ಬಂದು ಅಂಜಬೇಡ 'ಜಿನನ ಶಿರವನೊಡೆದು ಜಡಿದು ಮೂಡಿ ನಿಲುವೆ' ಎಂದು ಅಭಯವಿತ್ತು ಮಾಯವಾಗುತ್ತಾನೆ.

ಮರುದಿನ ಎಂದಿನಂತೆ ಜೈನರೆಲ್ಲಾ ಬಸದಿಗೆ ಬರುತ್ತಾರೆ. ಎಷ್ಟು ಪ್ರಯತ್ನಿಸಿದರೂ ಬಸದಿಯ ಕದ ತೆರೆಯದಿರುವುದನ್ನು ಕಂಡು ಕೌತುಕಗೊಳ್ಳುತ್ತಾರೆ. ಯಾರಾದರೂ ಜೀವತಲೆಗೆ ಹಾನಿ ಮಾಡಿದವರು ಇರುವಿರಾ ? ಎಂದು ಕೇಳಿದಾಗ, ನೇಮಿಶೆಟ್ಟಿ ವೈಜಕವ್ವೆಗೆ ಥಳಿಸಿದ ಸುದ್ದಿಯನ್ನು ತಿಳಿಸುತ್ತಾನೆ. ಆ ಜೈನರೆಲ್ಲರೂ ವೈಜಕವ್ವೆಯ ಬಳಿಗೆ ಹೋಗಿ ಅವಳ ಚರಣದಲ್ಲಿ ಬಿದ್ದು ದೇವಾಲಯದ ಕದ ತೆಗೆದು ಕರುಣಿಸಬೇಕೆಂದು ಕೇಳಿಕೊಳ್ಳುತ್ತಾರೆ. ಅವರ ಕೋರಿಕೆಗೆ ಮನ್ನಿಸಿದ ವೈಜಕವ್ವೆ ಜಿನಾಲಯದ ಬಾಗಿಲಲ್ಲಿ ನಿಂತು ದೇವಾ ಸತ್ಯ, ನಿತ್ಯ ಭರ್ಗ ಭೀಮರುದ್ರ ಕರುಣಿಸಯ್ಯಾ"[೨] .. .. .. .. . . . . . . . . . . ಎಂದು ಪ್ರಾರ್ಥನೆ ಸಲ್ಲಿಸುತ್ತಾಳೆ.

ವೈಜಕವ್ವೆ ಪ್ರಾರ್ಥನೆ ಸಲ್ಲಿಸುತ್ತಿದ್ದಂತೆಯೇ ಜಿನಾಲಯದ ಬಾಗಿಲು ತೆರೆಯುತ್ತದೆ. ಎಲ್ಲ ಕಡೆಯೂ ಬೆಳಕು ಪಸರಿಸಿ ಜಿನನ ಶಿರವೊಡೆದು ಶಿವಲಿಂಗ ಬೆಳೆದು ಶೋಭಿಸುತ್ತದೆ. ವೈಜಕವ್ವೆ ಪರಮಹರ್ಷಿತಳಾಗುತ್ತಾಳೆ. ನೆರೆದ ಜೈನರೆಲ್ಲರೂ ವೈಜಕವ್ವೆಯ ಮಹಾಭಕ್ತಿಗೆ ಮೂಕವಿಸ್ಮಿತರಾದರು. ನೇಮಿಶೆಟ್ಟಿ ವೈಜಕವ್ವೆಯ ಪಾದಗಳಿಗೆ ನಮಸ್ಕರಿಸುತ್ತಾನೆ. ನಂತರ ಆತ ಶಿವದೀಕ್ಷೆ ಪಡೆಯುತ್ತಾನೆ. ಜೈನ ಋಷಿಗಳಿಗೆ ಭಕ್ಷ್ಯ ಭೋಜ್ಯಗಳನ್ನು ಬಡಿಸುವ ವಿಷಯಕ್ಕೆ ಸಂಬಂಧಪಟ್ಟಂತೆ ಇಬ್ಬರ ನಡುವೆ ಘರ್ಷಣೆ ಸಂಭವಿಸುತ್ತದೆ. ವಿರಕ್ತಿಯು ಮನಸ್ಸಿಗೆ ಸಂಬಂಧಿಸಿದ್ದೇ ಹೊರತು ಇಂದ್ರಿಯಗಳನ್ನು ಆಶ್ರಯಿಸಿದ ಗುಣವಲ್ಲ, ವಿರಕ್ತಿಗೂ ಮದುವೆಗೂ ಯಾವ್ಯಾವ ಸಂಬಂಧವೂ ಇಲ್ಲ ಎಂಬುದನ್ನು ತೋರಿಸಿಕೊಟ್ಟವಳು ವೈಜಕವ್ವೆ. ಅವಳು ಉತ್ತಮ ಶಿವಭಕ್ತೆಯಾದಂತೆ ಉತ್ತಮ ಗೃಹಿಣಿಯೂ ಹೌದು. ಆಕೆಯ ಶಿವಭಕ್ತಿಯು ಸಾಧನೆ ಮಾಡುತ್ತಲೇ ಗಂಡನೊಡನೆ ಸಂಸಾರ ನಡೆಸುತ್ತಾಳೆ. ರುಚಿಯಾದ ಆಹಾರ ದ್ರವ್ಯಗಳು ಅವಳ ಪಾಕ ಪ್ರಾವಿಣ್ಯತೆಯ ನಿದರ್ಶನವಾಗಿದೆ. ಪ್ರತಿಭಟನೆ ಎಂಬುದು ಅವಳಿಗೆ ತಿಳಿಯದ ವಿಚಾರವಾಗಿದ್ದರೂ ಧೀರ ಹೆಂಗಸು ಎಂಬುದರಲ್ಲಿ ಎರಡು ಮಾತಿಲ್ಲ. ಇಲ್ಲಿ ಜೈನ ಧರ್ಮಕ್ಕಿಂತ ಶಿವಧರ್ಮವೇ ಶ್ರೇಷ್ಠವಾದದ್ದು, ಆ ಧರ್ಮದ ಶ್ರೇಷ್ಠತೆಯನ್ನು ಸಾರಲು ಹಿಂದಣ ಸ್ತ್ರೀಯರು ಮಾಡಿದ ಕಾರ್ಯ ಹೇಗೆ ಪ್ರಶಂಸನೀಯವಾಗಿತ್ತೆಂಬುದನ್ನು ತೋರಿಸುತ್ತದೆ. ಇದು  ಕಥೆಯ ಮುಖ್ಯ ಉದ್ದೇಶವಾಗಿದೆ.

## ಮಾರುಡಿಗೆ ನಾಚಿತಂದೆ, ಜೈನರ ನಡುವಿನ ಸಂಘರ್ಷ:

ಉತ್ತರ ದೇಶದ ಮಾರುಡಿಗೆ ಎಂಬ ಊರು. ಅಲ್ಲಿ ಮಾರುಡಿಗೆ ನಾಚಿತಂದೆ ಎಂಬ ಮಹಾನ್ ಶಿವಭಕ್ತ, ಈತ ಎಣ್ಣೆಕಾಯಕದ ಉದ್ಯಮಿ, ಮಲ್ಲಿಕಾರ್ಜುನ ದೇವರನ್ನು ಅರ್ಚಿಸುವ ವೀರ ನಾಚಿತಂದೆ ದೃಢಶೀಲ ವ್ಯಕ್ತಿತ್ವ, ಇಲ್ಲಿ ಮುಖ್ಯವಾಗಿ ಹೇಳಬೇಕಾದ ವಿಷಯವೆಂದರೆ ಶಿವಭಕ್ತನೊಬ್ಬ ಜೈನರಿಂದ ತುಂಬಿದ ಮಾರುಡಿಗೆ ಗ್ರಾಮಕ್ಕೆ ಹಿಂದುಮುಂದು ನೋಡದೆ ಬಂದಿದ್ದ ಅಪರಾಧಕ್ಕೆ ಕಾರಣವಾಗಿ ಜೈನರೆಲ್ಲ ಸೇರಿ ದನಕ್ಕೆ ಬಡಿದ ಹಾಗೆ ಬಡಿದು ಅವನ ಅಭಿಮಾನ ಭಂಗ ಮಾಡುತ್ತಾರೆ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಶಿವನು ಮಾರುಡಿಗೆ ನಾಚಿ ತಂದೆಯ ಕನಸ್ಸಿನಲ್ಲಿ ಬಂದು ಎನ್ನ ಶಿವಭಕ್ತರನ್ನು ಜೈನರೆಲ್ಲ ಹೊಡೆದು ತೀವ್ರ ಗಾಯಗೊಳಿಸಿದ್ದಾರೆ. ಬಲೆಮಗನೆ, ಆ ಭಕ್ತನು ಅದೆಷ್ಟು ನೊಂದುಕೊಂಡಿದ್ದಾನೆ. ನಿನಗೆ ಗೊತ್ತಾ ? ಅವನೊಡನೆ ನಾನು ನೊಂದಿದ್ದೇನೆ. ನೋಡಯ್ಯ ನಾಚಯ್ಯ, ಇಲ್ಲಿ ನೋಡು, ಅವನ ಮೈಯ ಬಾಸುಂಡೆಗಳು, ನನ್ನ ಮೈಮೇಲಿದ್ದಾವೆ. ಇಲ್ಲಿ ನೋಡು" ಎಂದು ಶಿವನು ನಾಚಿ ತಂದೆಗೆ ಬಾಸುಂಡೆ ತೋರಿಸಿದನು.

ಅಷ್ಟೇ ಅಲ್ಲದೆ ಮುಂದುವರಿದು "ಅವನ ಮೈ ನುಜ್ಜು ಗುಜ್ಜಾಗಿದೆ ನಾಚಯ್ಯ ಅವನಲ್ಲಿ ಶಕ್ತಿ ಉಳಿದಿಲ್ಲ. ಅವನ ಮನಸ್ಸು ನೊಂದುದೇ ನನ್ನ ಮನಸ್ಸು ನೋಯುತ್ತಿದೆ. ಅವನ ಅಪಮಾನದ ನೋವು ಅವನಿಗೆ ಮಾತ್ರ ಗೊತ್ತು. ಬೇಗ ಹೋಗಿ ರಕ್ಷಿಸು, ಇದನ್ನೆಲ್ಲ ಶಿವಭಕ್ತರು ಸೇರಿಸಬೇಕೆ ? ಶಿವಭಕ್ತರ ನೋವನ್ನು ನಿವಾರಿಸುವವರು ಯಾರು ? ಎದ್ದೇಳು ನಾಚಯ್ಯ, ಅವನ ಅಪಮಾನಕ್ಕೆ ಉತ್ತರ ನೀಡು ನನಗೆ ನನ್ನ ಭಕ್ತರೆ ಬಂಧು-ಬಳಗ, ಅಪ್ತವರ್ಗ, ಅವರೇ ನನಗೆ ಗತಿ-ಮತಿ ಅವರೇ ನನ್ನ ಕಣ್ಣು, ಆಯುಷ್ಯ, ಪುಣ್ಯಫಲ ಕೂಡಾ ಅವರ ನೋವೆ ನನ್ನ ನೋವು. ಬೇಗ ಆ ಶಿವಭಕ್ತನನ್ನು ರಕ್ಷಿಸಿಸು ಎಂದು ಹೇಳಿ ಶಿವ ಮಾಯವಾಗುತ್ತಾನೆ. ಶಿವನ ಮಾತಿನಿಂದ ವೀರಾವೇಷ ದಿಂದ ಬಂದ ಮಾರುಡಿಗೆ ನಾಚಿತಂದೆ ಜೈನರನ್ನು ಒಕ್ಕಲಿಕ್ಕಿ ಬತ್ತಲೆಯ ಬೊಂಬೆಗಳನ್ನು ಪುಡಿಮಾಡಿ, ಪರಧರ್ಮವನ್ನು ನಿರ್ಧೂಮ ಮಾಡಿ ಪರದೈವಗಳನ್ನು ಹೊಸೆದು ಬಿಸಾಡಿ, ಹುಡಿಗಟ್ಟಿ ಸಲ್ಲೀಲೆಯಿಂದ ಮಲ್ಲಿನಾಥನನ್ನು ಪ್ರತಿಷ್ಠೆ ಮಾಡುವೆನು ಎಂದು ಪಣತೊಟ್ಟು ಶಿವಭಕ್ತರೊಡನೆ ಸೇರಿಕೊಂಡು ಜೈನರ ಸಂಹಾರಕ್ಕೆ ನಿಲ್ಲುತ್ತಾನೆ. ಮಾರುಡಿಗೆ ಗ್ರಾಮದ ನಾರಿಯರೆನ್ನೆಲ್ಲ ಪರ ಊರಿಗೆ ಕಳಿಸಿ ಮಧ್ಯರಾತ್ರಿಯಲ್ಲಿ ತಮ್ಮ ಕಾರ್ಯಾಚರಣೆಗೆ ನಾಚಿತಂದೆಗಳು ಅಣಿಯಾದರು. ತುಂಬ ಶಕ್ತಿಶಾಲಿಗಳಾದ ಶಿವನ ಮೂರನೇಯ ಕಣ್ಣಿಗೆ ಸಮನಾದ ವೀರಮಾಹೇಶ್ವರರು ನಾಚಿತಂದೆಯೊಡನೆ ನಿಂತರು. ಆಗ ಎಲ್ಲರೂ ಸಂಘಟಿತರಾಗಿ ಜಿನ ಪ್ರತಿಮೆಗಳನ್ನು ಕಿತ್ತು ಬಿಸಾಡಿ ಮಲ್ಲಿಕಾರ್ಜುನನ್ನು ಪ್ರತಿಷ್ಠೆ ಮಾಡಿ ಮುಪ್ಪಗೈದರು.

ವೀರಭಕ್ತರು ಜಿನಪ್ರತಿಮೆಗಳನ್ನು ನಾಶಮಾಡುವುದಕ್ಕೆ ನೋಡಲು ಬರುವಂತೆ ಸೂರ್ಯೋದಯವಾಯಿತು. ಎಂದಿನಂತೆ ಜಿನಬಸದಿಯ ಜಿನ ಮೂರ್ತಿಗಳನ್ನು ಪೂಜಿಸಲೆಂದು ಪಂಡಿತನು ಬಂದು ಕದ ತೆಗೆದು ನೋಡಿದರೆ. ಸೈನಿಕರ ಹಿಂಡು ಕಂಡು ಹೆದರಿ ಓಡಿಹೋಗಿ ಜೈನರ ಜಂಗುಳಿ ಮುಂದೆ ನಿಂತನು. ಪಂಡಿತನ ಈ ವ್ಯವಸ್ಥೆಗೆ ಕೂಡಲೇ ಅಲ್ಲಿ ಜಿನಭಕ್ತರು ನೆರೆದರು. ಹಿರಿಯ ಬಸದಿಯ ಆ ಪಂಡಿತನು ಗಡಗಡನೆ ನಡುಗುತ್ತ ಕಣ್ಣೀರಿಕ್ಕುತ್ತ ಅಯ್ಯೋ ನಮ್ಮ ಧರ್ಮಕ್ಕಾದ ಭಂಗವನ್ನು ಏನೆಂದು ಹೇಳಲಿ ? ನಮ್ಮ ವಿಜಯ ಪಾರ್ಶ್ವನಾಥನ ಮೂಗನ್ನು ಕಿತ್ತಿ, ಕಿತ್ತಿ ಬಿಸಾಡಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ ವೀರಭಕ್ತರು ಬಸದಿಯಲ್ಲಿ ಹೊಸ ಪರಿಯಿಂದ ನೆಲೆಯೂರಿದ್ದಾರೆ. ಈ ಆಕಸ್ಮಿಕವನ್ನು ಏನೆಂದು ಹೇಳುವಿರಿ ? ಮಾತನಾಡಿರಿ, ಜನ ಸಮಯದ ಕತೆ ಮುಗಿದಂತಾಯಿತು. ಸವಣಕುಲ ಇನ್ನಿಲ್ಲದಂತಾಗುವುದು. ಅಯ್ಯೋ ಎಂದು ಒರಲುತ್ತ ನುಡಿಪಂಡಿತನ ಮಾತು ಕೇಳಿ ಹುಂಬ ಜೈನರು ಸಿಡಿಮಿಡಿಗೊಂಡು ಕೆರಳಿ ಕಿಡಿಕಿಡಿಯಾಗಿ 'ಅಹಿಂಸೆಯೇ ಪರಧರ್ಮ' ಎಂಬ ತಮ್ಮ ದರ್ಶನಕ್ಕೆ ತಾವೇ ಕೊಡಲಿ ಏಟು ಹಾಕಿದರೆಂಬಂತೆ ಅವರೆಲ್ಲ ಸಕಲ ವಿಧದ ಆಯುಧಗಳನ್ನು ಹೊತ್ತು ಕುದುರೆಗಳನ್ನೇರಿ ಸಾವಿರಾರು ಸಂಖ್ಯೆಯಲ್ಲಿ ಒಂದು ಬಸದಿಯನ್ನು ಮುತ್ತಿದರು. ಸೂರ್ಯನನ್ನು ಮುತ್ತುವ ಕತ್ತಲೆಯಂತೆ ದುರ್ಜನ ಜೈನಸಮೂಹ ಬಸದಿಯನ್ನು ಮುತ್ತಿರುವುದನ್ನು ಕಂಡು ವೀರಭಕ್ತರು ಬೊಬ್ಬಿಟ್ಟು ಅವರನ್ನು ಇರಿದು ಕೊಲ್ಲಲ್ಲು ಆರ್ಭಟಿಸತೊಡಗಿದರು.

ಹೀಗೆ ಕೋಪಾಟೋಪ ಪ್ರಕಟವಾಗುತ್ತಿರುವಂತೆ ಸ್ವಲ್ಪವೂ ಚಿಂತಿಸದೆ ಲೆಕ್ಕಿಸದೆ ನಾಚಿತಂದೆಯನ್ನು ಲಿಂಗಕ್ಕೆ ಕಾವಲಿರಿಸಿ ಆಚಾರದೊಡೆಯರಾದ ತೇರ ಅರಸರು ಬುಬುಯೆನ್ನುತ್ತ ಹೊರಬಿದ್ದು ಗರ್ಜಿಸಿದರು. ಘೋರ್ಣಿಸಿದರು. ಸಾಲುಗಟ್ಟಿ ಇರಿಯುತ್ತ ನಡೆದರು. ಹಾಗೆ ಹಿಮ್ಮೆಟ್ಟಿಸುವ ಈ ಆಚಾರದೊಡೆಯರಿಗೆ ಬೆಂಗಾವಲಾಗಿ ವೀರಭದ್ರನೂ ನಿಂತಿದ್ದನು. ಜೈನಪಡೆ ವಿಹ್ವಲರಾದರು. ದೊಡ್ಡ ಪ್ರಮಾಣದ ಕಾಳಗ ನಡೆಯಿತು. ಜೈನರ ಆಹುತಿ ನಿರಂತರ ಸಾಗಿತು. ಕೆಲವರಿಗೆ ಗಾಯಗಳಾದವು. ಕೆಲವರನ್ನು ಇರಿದು ಕೊಂದರು. ಕೆಲವರನ್ನು ಅಬ್ಬರಿಸಿ ಹೆದರಿಸಿ ಓಡಿಸಿದರು. ಕೆಲವರನ್ನು ಕಾಲುಮೆಟ್ಟಿ ತುಳಿದು ಹೊಸಕಿ ಹಾಕಿದರು.

ಹೀಗೆ ಸವಣ ಪಡೆ ನೆಲಕಚ್ಚಿತು. ಜೈನರ ಸರ್ವನಾಶದೊಂದಿಗೆ, ವೀರಭಕ್ತಿಯ ಗೆಲುವಿನೊಂದಿಗೆ ವೀರತೇರರಸರು ಕೈಲಾಸಪುರಕ್ಕೆ ನಡೆದರು. ವಿಜಯದ ಸಂಭ್ರಮದಲ್ಲಿದ್ದ ನಾಚಿತಂದೆಗಳು ತೇರರಸರು ತೀರಿದುದನ್ನು ಅರಿತು ನೊಂದುಕೊಂಡು ಮಲ್ಲಿನಾಥನಿಗೆ ಭಿನ್ನೈಸುತ್ತ 'ದೇವ, ನಾನು ಜೀವಂತವಿರುವಾಗ ತೇರರಸರನ್ನೊಯ್ಯುವುದೆ ? ದೇವಾ ನಾನು ಹಿಂದುಳಿಯಬೇಕೆ?

ನನ್ನನ್ನು ಕರೆಯಲಾರೆಯಾ ? ನನ್ನನ್ನು ಕಳುಹುವ ಮೊದಲು ತೇರರಸರನ್ನು ಕಳಿಸುವುದೇ ? ಛಲದಿಂದ ಹೋರಾಡಿ ಗೆಲುವು ತಂದವರು ಅವರು ಏನೊಂದು ಮಾಡದೆ ಮರುಳನಂತೆ ಅಜ್ಞಾನದಿಂದ ನಾನು ಇಲ್ಲಿ ಉಳಿಯಲಾರೆ. ಇರಲಾರೆ" ಎಂದು ಶಿವನನ್ನು ದೂರುತ್ತ ಕೈಗತ್ತಿಯನ್ನೆತ್ತಿ ತನ್ನ ಕೊರಳನ್ನು ಕೊಯ್ದುಕೊಳ್ಳಲು ತೊಡಗಿದರು ನಾಚಿತಂದೆ. ಆ ಕೂಡಲೇ 'ಹೋ ಹೋ ಮಗನೆ ನಾಚಿತಂದೆ ಇದುಬೇಡ. ಇದು ಬೇಡ ಆಹಾ ವಿಚಾರವಿಲ್ಲದ ವೀರವೇಕಯ್ಯ ? ನನ್ನೊಬ್ಬನನ್ನು ಇರಿಸಿ ನೀನು ಹೇಗೆ ? ವಿಚಾರಿಸಿ ನೋಡು, ಮಾಡುವ ಹಲವು ಕೆಲಸಗಳಂತಿಲ್ಲ. ನಿನ್ನ ವೀರತ್ವದ ಅಗತ್ಯವಿದೆ ಇಲ್ಲಿ. ನನ್ನನ್ನು ಅಲಕ್ಷಿಸಿ ಹೋಗಲಾಗದಯ್ಯ ನೀನು". ಎಂದು ನಾಚಿ ತಂದೆಗಳ ಕೈಗತ್ತಿಯನ್ನು ತೆಗೆದು ಬಿಸಾಡಿ ಶಂಕರನು ಕರುಣದಿಂದ ಅವನ ಮುಂದೆ ಅವತರಿಸಿ ನಿಂತನು. ಇದುಕಥೆ. ಇಲ್ಲಿ ಬಹುಸಂಖ್ಯಾತರು ಜೈನರಾಗಿರುವುದರಿಂದ ಶಿವಭಕ್ತರಿಗೆ, ಶಿವದೇವಾಲಯಗಳಿಗೆ ಇಲ್ಲಿ ಅವಕಾಶವಿಲ್ಲ. ಮಾರುಡಿಗೆ ಗ್ರಾಮದೊಳಗೆ ಪ್ರವೇಶ ಮಾಡಲು ಸಹ ಅನುಮತಿ ಪಡೆಯಬೇಕಿತ್ತು. ಆದರೆ ಶಿವಭಕ್ತನು ಕೇಳದೆ ಹೋದ ಪರಿಣಾಮ ಜೈನರು ಹಲ್ಲೆ ಮಾಡುತ್ತಾರೆ.

ಇದು ಸೇಡಿನ ಪ್ರತಿಕಾರವಾಗಿ ಶಿವಭಕ್ತರು ಅವರೊಡನೆ ಯುದ್ಧ ಮಾಡಿ ಗೆಲ್ಲುತ್ತಾರೆ. ಇಡೀ ರಗಳೆಯ ತುಂಬಾ ಸಂಘರ್ಷದ ಪ್ರಸಂಗವೇ ತುಂಬಿದೆ. ಹೀಗಾಗಿ ಹರಿಹರ ಕನ್ನಡದ ಮೊಟ್ಟಮೊದಲ ಸಂಘರ್ಷ ಕವಿ. ಈತ ಶರಣರ ಆಶಯಗಳಿಗೆ ವ್ಯಕ್ತಿತ್ವದ ಅಭಿವ್ಯಕ್ತಿಕೊಟ್ಟ ಮೇರು ಕವಿ. ಅಲ್ಲಿ ಬರುವಂತಹ ಸಂಘರ್ಷಗಳು ರಾಜಶಾಹಿ ಜತೆ ಸಂಘರ್ಷ ಕನ್ನಡದಲ್ಲಿ ಎಷ್ಟು ಧೈರ್ಯವಾಗಿ ಮಾತಾಡಿದ್ದು ಹರಿಹರನೇ, ಆದರೆ ಜೈನರ ಸಂಹಾರಕ್ಕೆ ಪಂಪ ವಿರೋಧ ವ್ಯಕ್ತಪಡಿಸಿದ ನಿದರ್ಶನಗಳಿವೆ. ಇದಕ್ಕೆ "ಹಿರಿಯ ಸಂಶೋಧಕ, ಡಾ.ಎಂ.ಎಂ. ಕಲ್ಬುರ್ಗಿ ಈ ರೀತಿ ಪ್ರತಿಕ್ರಿಯಿಸುತ್ತಾರೆ.

ಓಲೈಸಿ ಬಾಳ್ವುದೆ ಕಷ್ಟಮಿಳಾದಿನಾಥರಂ ಅಂತಿಳಿಕೊಂಡು ಬಂದ ರೀತೀಲಿ ಸೂಕ್ಷ್ಮವಾಗಿ ಪಂಪ ಹೇಳ್ತಾನೆ. ಆದರೆ ಹರಿಹರನ ಧೈರ್ಯ ಬಹಳ ದೊಡ್ಡದು. ಮತ್ತೆ ಕಾವ್ಯದಲ್ಲಿ ದೇಸೀ ಬಳಸುವಂತ ರೀತಿಯದೆಯಲ್ಲಾ, ರಳ,ಕುಳ, ಕ್ಷಳ ನಿರಾಕರಣೆ ಮಾಡಿದ್ದು, ಚಂಪೂ ಫಾರ್ಮ ಕೈಬಿಟ್ಟಿದ್ದು, ನೋಡಿ ಹೀಂಗದ ಈ ಶೈವರು ನೇಟಿವ್ ಜನ ಇದ್ರಲ್ಲಾ, ಅವರಿಗೂ ದೇಸಿಗೂ ಏನೋ ಒಂದು ಸಂಬಂಧ ಇದ್ದಂಗ ಕಾಣಿಸ್ತದ. ಕನ್ನಡದಲ್ಲಿ ದೇಸೀ ಶುರುಮಾಡಿದ್ದ ಹರಿಹರ ತೆಲುಗಿ ನೊಳಗೆ ಪಾಲ್ಕುರಿಕೆ ಸೋಮೇಶ್ವರ, ತಮಿಳಿನೊಳಗೆ ೬೩ ಪುರಾತನರ ಮೇಲೆ ಪೆರಿಯ ಪುರಾಣ ಬರದ್ನಲ್ಲ ಶೇಕ್ಕಿಳಾರ್ ಎಲ್ಲರೂ ಶೈವರೆ ಅಂತ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ."[೩೩]

ರಗಳೆ ಕಾವ್ಯಗಳನ್ನು ಗಮನಿಸಿದರೆ ಹರಿಹರ ಸಂಘರ್ಷದ ಕವಿ ಎಂಬ ಅಭಿಪ್ರಾಯವನ್ನು

ಒಪ್ಪಿಕೊಳ್ಳಬಹುದು. ಆದರೆ ಅವನ ಮತೀಯ ಸಂಘರ್ಷಗಳ ಚಿತ್ರಣ ಮಾತ್ರ ಘೋರವಾಗಿದೆ. ಸವದತ್ತಿಯಲ್ಲಿ ಪದ್ಮಾವತಿ ಯಕ್ಷಿಯ ಬಸದಿಯನ್ನು ಹ್ಯಾಗೆ ಎಲ್ಲಮ್ಮನ ಗುಡಿಯನ್ನಾಗಿ ಧರ್ಮಾಂತರ ಮಾಡಲಾಯಿತು. ಅಂತ ನೀವು ರಿಸರ್ಚ್ ಮಾಡಿದರೋ ಎಂದು ಡಾ. ರಹಮತ್ ಅವರು ಪ್ರಶ್ನೆ ಎತ್ತಿದರೆ. ಹರಿಹರನ ಆದಯ್ಯನ ರಗಳೆಯಲ್ಲಿ ಜೈನ ಸಂಹಾರ ಮಾಡೋದನ್ನು, ಬಸದಿ ನಾಶಮಾಡೋದನ್ನ ಸಂಭ್ರಮದಲ್ಲಿ ಬರೀತಾನೆ ಆದ್ರೆ ಇದು ಪ್ರಸ್ತುತ ಕಾಲಕ್ಕೆ ಸರಿಯಲ್ಲ ಎಂಬುದನ್ನು ಕಲ್ಬುರ್ಗಿಯವರು ಅಭಿಪ್ರಾಯ ವ್ಯಕ್ತಪಡಿಸಿದರು. ಹೀಗೆ ಒಟ್ಟಾರೆ ಕನ್ನಡ ಸಾಹಿತ್ಯದ ಸಂಘರ್ಷದ ಕವಿ ಎಂದರೆ ಹರಿಹರ ಎಂಬುದು ಜನಜನಿತವಾಗಿದೆ.

### ೩. ವೈಷ್ಣವರು, ಶಿವಭಕ್ತರ ನಡುವಿನ ಸಂಘರ್ಷ

ಹರಿಹರನ ಕಾಲಾವಧಿಯಲ್ಲಿ ವೈಷ್ಣವ ಮತವೂ ಪ್ರಭಾವಶಾಲಿಯಾಗಿತ್ತು. ಹೊಯ್ಸಳ ಅರಮನೆಯನ್ನು ಅಧಿಕೃತವಾಗಿ ಪ್ರವೇಶಿಸುವ ಮೂಲಕ ಕನ್ನಡ ನಾಡಿನಲ್ಲಿ ಈ ಧರ್ಮ ವ್ಯಾಪಕವಾಗಿ ಪ್ರಸರಿಸಿತ್ತು. ಸ್ವತಃ ಚಾಲುಕ್ಯ ಜಯಸಿಂಹ, ಪೆರ್ಮಾಡಿರಾಯರಂಥವರು ವೈಷ್ಣವ ಧರ್ಮಿಯರಾಗಿ ಆಶ್ರಯ ನೀಡಿದ್ದರು. ಕ್ರಾಂತಿಕಾರಿಗಳಾದ ಶಿವಭಕ್ತರನ್ನು ನಿಗ್ರಹಿಸಲು ವಿಷ್ಣುಭಕ್ತರು ಅರಸರ ಮೊರೆಹೋಗುತ್ತಿದ್ದರು. ಧಾರ್ಮಿಕ ಹಿನ್ನೆಲೆಯಲ್ಲಿ ಶಿವಭಕ್ತರನ್ನು ನಿಗ್ರಹಿಸುವ ಅರಸನಿಗೆ ಚಾಡಿ ಹೇಳುತ್ತ ಪೌರೋಹಿತ್ಯ ಬಲದಿಂದ ಭಕ್ತವರ್ಗವನ್ನು ಶೋಷಿಸುತ್ತ ಬ್ರಾಹ್ಮಣವರ್ಗ ಹಿರಿಮೆಯಿಂದಲೇ ಜೀವನ ಸಾಗಿಸುವಂತಹ ವಾತಾವರಣವಿತ್ತು.

ದುಡಿಯದೆ ಸುಖ ಪಡುವ ಈ ಬ್ರಾಹ್ಮಣರಿಗೆ ಕಾಯಕ ಮಹತ್ವ ತಿಳಿಸುವುದರೊಂದಿಗೆ ಅರಸು ಸಂಪತ್ತು ಶಿವಭಕ್ತರಿಗೆ ವಿನಿಯೋಗವಾಗಬೇಕೆಂಬ ಪರ್ಯಾಯ ಅರ್ಥ ವ್ಯವಸ್ಥೆ ರೂಪುಗೊಂಡಾಗ ವೈಷ್ಣವ ಮತೀಯರು ಸಿಡಿದೆದ್ದ ಪ್ರಕರಣಗಳು ಬಸವೇಶ್ವರ ದೇವರ ರಗಳೆಯಲ್ಲಿ ಕೇಳಿ ಬಂದಿವೆ. ಶಿವಭಕ್ತರ ಶಕ್ತಿಯನ್ನು ಒರೆಗೆ ಹಚ್ಚುವ ವೈಷ್ಣವರು ತಮ್ಮ ಪ್ರಮಾದಗಳಿಗೆ ತಾವೇ ಪಶ್ಚಾತಾಪ ಪಟ್ಟ ಘಟನೆ ರಗಳೆಯಲ್ಲುಂಟು ಸಾಧಕ ಶಂಕರದಾಸಿಮಯ್ಯನಿಂದ ವಿಷ್ಣು ಪ್ರತಿಮೆ ಮಾಡಿಸಲು ಉದ್ದೇಶ ಪೂರ್ವಕವಾಗಿ ದಾಸಿಮಯ್ಯನನ್ನು ಕರೆದಾಗ ಜಯಸಿಂಹ ದೊರೆಯ ಎದುರಿಗೆ ವಿಷ್ಣು ಪ್ರತಿಮೆ, ಬಾದುಮಯ್ಯ ಮೂರ್ತಿ ಸಿಡಿದು ಸುಟ್ಟು ಹೋಗುತ್ತವೆ. ಪೆರ್ಮಾಡಿರಾಯನ ಪುರಾಣಿಕ ಸುಳ್ಳು ವ್ಯಾಖ್ಯಾನ ಮಾಡಿದ್ದಕ್ಕೆ ತೆಲುಗು ಜೊಮ್ಮಯ್ಯ ಅವನನ್ನು ಇರಿದು ಕೊಲ್ಲುತ್ತಾನೆ. ಕೇಶಿರಾಜಾದಿಗಳು ವೈಷ್ಣವ ಮತವನ್ನು ಅಪಮಾನಿಸಿ ಮಾತಾಡಿದ್ದನ್ನು ಚಾಡಿಕೋರರು ಪೆರ್ಮಾಡಿರಾಯನಿಗೆ ತಿಳಿಸಿ ಕೇಶಿರಾಜನನ್ನು ಹೊರ ಹಾಕುವಂತೆ ಮಾಡುತ್ತಾರೆ. ರೇವಣಸಿದ್ದನಿಂದ ಚೋಳ ವಿಷ್ಣು ಪ್ರತಿಷ್ಠೆ

ಮಾಡಿಸಲು ಹೋದಾಗ ವಿಚಿತ್ರ ಘಟನಾವಳಿಗಳೇ ನಡೆಯುತ್ತವೆ. ವೈಷ್ಣವರು ಪರಂಪರೆಯನ್ನು ಬಿಡದೆ ಬದುಕಿದ್ದರು. ವೇದ ಶಾಸ್ತ್ರ, ಯಜ್ಞ, ಯಾಗ, ಗೋದಾನ, ಎಮ್ಮೆದಾನ, ದಾನ ಸ್ವೀಕರಿಸುವ ಪ್ರಾಚೀನ ಮೌಲ್ಯಗಳನ್ನು ವೈಷ್ಣರು ನಿರಂತರ ಇಟ್ಟುಕೊಂಡಿದ್ದರು. ಈ ಜಡತ್ವವನ್ನು ಶಿವಭಕ್ತರು ಬಲ್ಲಂತೆ ಟೀಕಿಸುವ ವಿವರ ಹರಿಹರನ ರಗಳೆಗಳಲ್ಲಿ ಜೊತೆ ಜೊತೆಯಲ್ಲಿ ಶಿವಾಲಯ ಸ್ಥಾಪನೆ ಶಿವಲಿಂಗ ಪ್ರತಿಷ್ಠಾಪನೆ ಮಾಡುವ ಮೂಲಕ ವೈಷ್ಣವ ಮತವು ಮೇಲೇಳದಂತೆ ಶಿವಭಕ್ತರು ಯತ್ನಿಸುತ್ತಿದ್ದರು. ಆದರೆ ವೈಷ್ಣವ ಮತವು ರಾಜಧರ್ಮವಾಗಿ ದರ್ಬಾರು ನಡೆಸಿತ್ತೆಂಬುದನ್ನು ಲಕ್ಷಿಸಬೇಕಿದೆ. ಅಲ್ಲದೆ ಶಿವಭಕ್ತರು ತಮ್ಮ ಕಾಯಕ ಮಾಡಿಕೊಂಡು ಸಮಾಜೋಧಾರ್ಮಿಕ ಅಭಿವೃದ್ಧಿಗೆ ದುಡಿಯುತ್ತಿದ್ದರು. ಇದನ್ನು ಸಹಿಸದ ವೈಷ್ಣವರು ಶಿವಶರಣರ ಮೇಲೆ ಸಣ್ಣಪುಟ್ಟ ಆರೋಪ ಮಾಡಿ ರಾಜರಿಗೆ ಪಿತೂರಿ ಹೇಳಿ ಕಲ್ಯಾಣ ಕಾರ್ಯಗಳಿಗೆ ಅಡ್ಡಿಮಾಡಿದ ಪ್ರಸಂಗಗಳಿವೆ.

**ಶಂಕರದಾಸಿಮಯ್ಯ . ವೈಷ್ಣವ ಅನುಯಾಯಿಗಳ ಸಂಘರ್ಷ**

ಈ ಪ್ರಸಂಗ ಶಂಕರದಾಸಿಮಯ್ಯನ ರಗಳೆಯಲ್ಲಿ ಬಂದಿದೆ. ರಗಳೆಯಲ್ಲಿ ಮೂರು ಸ್ಥಲಗಳಿವೆ. ಮೊದಲ ಸ್ಥಲದಲ್ಲಿ ದಾಸಿಮಯ್ಯನು ಶಿವಭಕ್ತಿ ಸ್ವೀಕರಿಸಿ, ಈಶ್ವರನಿಂದ ಹಣೆಗಣ್ಣನ್ನು ಪಡೆಯುವವರೆಗಿನ ಪೂರ್ವ ವೃತ್ತಾಂತವಿದೆ. ಎರಡು ಮತ್ತು ಮೂರನೇ ಸ್ಥಲದಲ್ಲಿ ವೈಷ್ಣವ ಭಕ್ತ, ದೇವರ ದಾಸಿಮಯ್ಯನ ಅಹಂಕಾರ ಶಮನ, ಕಲ್ಯಾಣದಲ್ಲಿ ನರಸಿಂಹ ವಿಗ್ರಹವನ್ನು ಶಂಕರದಾಸಿಮಯ್ಯನು ಹಣೆಗಣ್ಣಿನಿಂದ ಸುಟ್ಟು ಹಾಕಿದ ಮತ್ತು ಅರಸ ಜಯಸಿಂಹನ ಅಹಂಕಾರವನ್ನು ಶಮನ ಮಾಡಿದ ಪವಾಡಗಳಿವೆ. ಜೊತೆಗೆ ಮೈಲಾರ ದೇವನ ಮಹಿಮೆ ತಗ್ಗಿಸಿ, ಮರುಳ ತಂಡಗಳಿಂದ ಪೊಟ್ಟಣ ಕುಟ್ಟಿಸಿದ ಪವಾಡಗಳಿವೆ.

ಶಿವನ ಅನುಗ್ರಹ ಪಡೆಯಲು ತೀರ್ಥ ಯಾತ್ರೆ ಮಾಡಬೇಕಿಲ್ಲ ಎಂಬುದು ಹರಿಹರನ ನಂಬಿಕೆಗಳಲ್ಲಿ ಒಂದಾಗಿತ್ತು. ಆ ನಂಬಿಕೆಯನ್ನು ಪ್ರತಿಪಾದಿಸುವ ಕಥೆ ಶಂಕರದಾಸಿಮಯ್ಯನ ರಗಳೆಯಲ್ಲಿ ಬರುತ್ತದೆ. ಈ ಕಥೆಯಲ್ಲಿ ಬರುವ ನಾಯಕ ಶಂಕರದಾಸಿಮಯ್ಯನ ಆರಂಭದಲ್ಲಿ ಸಾಂಸಾರಿಕ ಸುಖಭೋಗಗಳ ನಡುವೆ ಬದುಕುತ್ತಿದ್ದ ಒಬ್ಬ ಸಾಮಾನ್ಯ ಮನುಷ್ಯ. ಅವನ ಮೊದಲ ಹೆಸರು ಗೋವಿಂದ ದೇವ, ನಿರಂತರ ಸಾಂಸಾರಿಕ ಸುಖಗಳಿಂದ ಬೇಸತ್ತ ಆತ. ವೈರಾಗ್ಯದ ಬಯಕೆಯಿಂದ ವಾರಣಾಸಿಗೆ ಹೋಗುವ ಬದಲು, ಊರಿಗೆ ಹತ್ತಿರದಲ್ಲಿರುವ ನವಿಲೆಯಲ್ಲಿರುವ ಶಿವನಿಲಯಕ್ಕೆ ಹೋಗುತ್ತಾನೆ. ಅಲ್ಲಿನ ರಂಗಮಂಟಪದಲ್ಲಿ ಗಂಗಾಧರನಿಗೆ ನಮಸ್ಕರಿಸಿ ಶಂಕರದಾಸಿಮಯ್ಯ ಕುಳಿತಿರುವಾಗ ಶರಣ ಸಂಕುಲವು ಶಿವಪೂಜಾ ವೈಭವದಲ್ಲಿ ತೊಡಗಿರುವುದನ್ನು ಕಾಣುತ್ತಾನೆ.

ಆಗ ಅತನಲ್ಲಿಯೂ ಶಿವಭಕ್ತಿ ಸಂಚಾರ ಆರಂಭವಾಗುತ್ತದೆ. ಆ ಸಂಭ್ರಮದಲ್ಲಿ ವಾರಣಾಸಿಯನ್ನೇ ಮರೆತು ಮತ್ತೆ ತಮ್ಮೂರಿಗೆ ಹೋಗಿ ಜಡೆಯ ಶಂಕರ ದೇವನ ದರ್ಶನ ಮಾಡುತ್ತಾನೆ. ಕುಣಿದು, ಕುಪ್ಪಳಿಸಿ, ಕಂಪಿಸಿ, ಪುಳಕಿಸುತ್ತ, ಆನಂದಪರವಶವಾಗಿ ಏನಗೆ ವಾರಣಾಸಿಯು ಮಮರ ನದಿಯುಂ ನೀನೆ ಎನಗೆ ದಿವ್ಯ ಕ್ಷೇತ್ರ ಮಂತ್ರ, ತಂತ್ರಂ ನೀನೆ"[೩೪] ಎನ್ನುತ್ತಾ, ಶಿವಸ್ತುತಿಗೈಯ್ಯುತ್ತಾನೆ. ಹಗಲು-ಇರುಳು, ಗಾಳಿ-ಮಳೆ ಬಿಸಿಲೆನ್ನದೆ ಇಂದುಧರನನ್ನು ಅನುದಿನವೂ ಮರೆಯದೆ ನೆನೆಯುತ್ತಾನೆ. ಅವನ ಆರ್ತ ಕೋರಿಕೆಗೆ ಶಿವ ಪ್ರತ್ಯಕ್ಷನಾಗಲು

"ದೇವ ಕರುಣಿಸಿತಕ್ಕೆ ನೊಸಲಕಣ್ಣಂಕೊಟ್ಟು

ದೇವ ಕರತಳವನೆನ್ನುತ್ತ ಮಾಂಗದೊಳಿಟ್ಟು

ಅಪ್ರತಿಮ ಗುರುವೆ ಸುರತರುವೆ ಕರುಣಿಪುರ್ದಗೆ"[೩೫]

ಎಂದು ಬೇಡುತ್ತಾನೆ. ಅಂತೆಯೇ ಶಿವನಿಂದ ನೊಸಲ ಕಣ್ಣನ್ನು ಪಡೆಯುತ್ತಾನೆ. ಜ್ಯೋತಿಯಿಂ, ಜ್ಯೋತಿಯಂ, ಹೊತ್ತಿಸಿದ ರೀತಿಯಲ್ಲಿ ನೊಸಲಕಣ್ಣನ್ನು ಪಡೆಯುವ ಮೂಲಕ ಶಂಕರದಾಸಿಮಯ್ಯನ ಅಜ್ಞಾನ ಮರೆಯಾಗಿ, ಜ್ಞಾನ ಆವರಿಸಿತು ಎಂಬುದನ್ನು ಕವಿ ಸಾಂಕೇತಿಕವಾಗಿ ತಿಳಿಸುತ್ತಾನೆ. ಮುಂದೆ ಶಂಕರದಾಸಿಮಯ್ಯನ ಜ್ಞಾನ ಮಹತ್ವವನ್ನು ಎತ್ತಿ ಹಿಡಿಯುವುದಕ್ಕಾಗಿಯೇ ಹಲವು ಸನ್ನಿವೇಶಗಳು ಸೃಷ್ಟಿಯಾಗಿವೆ. ಅಲ್ಲಿ ಮೊದಲೇ ದಾಸಿಮಯ್ಯನ ಕ್ಷುದ್ರ ದೈವಗಳ ಖಂಡನೆ, ನಿರಂಹಕಾರದಿಂದ ಕೂಡಿದ ಶುದ್ಧ ದಾಸೋಹದ ಮಹತ್ವ ಕುರಿತು ಪ್ರತಿಪಾದನೆಯನ್ನು ಕಾಣುತ್ತೇವೆ.

ಅಸಮಾಕ್ಷ ನೀಡಿದ ಸಿಡಿಲೆಜಕೆಯಂತಿರುವ ನೊಸಲಕಣ್ಣನ್ನು ಪರೀಕ್ಷಿಸುವ ಸಲುವಾಗಿ ಒಮ್ಮೆ ಶಂಕರದಾಸಿಮಯ್ಯನು ನೊಸಲಕಣ್ಣನ್ನು ತೆರೆಯುತ್ತಾನೆ. ಹಾಗೆ ತೆರೆಯುತ್ತಿದ್ದಂತೆಯೇ ಘಡುಘಡಿಸುವ ಜ್ವಾಲೆಗಳೇಳುತ್ತವೆ. ಆ ಜ್ವಾಲೆಗೆ ಸಿಕ್ಕ ವಿಷ್ಣು ಪ್ರತಿಮೆಗಳು ಸಿಕ್ಕನೆ ಸೀಳುತ್ತವೆ. ಸಪ್ತಮಾತೃಕೆಯರು ಉರಿದು ಮಣ್ಣಲ್ಲಿ ಬೀಳುತ್ತಾರೆ. ಸುತ್ತಲಿನ ಪ್ರತಿಮೆಗಳೆಲ್ಲ ಹೇಳಹೆಸರಿಲ್ಲದಂತಾಗುತ್ತವೆ. ಆಗ ಶಿವ ಪ್ರತ್ಯಕ್ಷನಾಗಿ ಪುರವರಿದು ಜಗವುರಿದು ಧರೆವುರಿವುದೆಲೆ ಎಂದು ಉರಿವಗ್ನಿಯನ್ನು ನಂದಿಸುತ್ತಾನೆ. ಅನಂತರ ಗೋವಿಂದ ದೇವನಿಗೆ ಶಂಕರದಾಸಿಮಯ್ಯ ಎಂಬ ಹೆಸರನ್ನಿಟ್ಟು ಲಿಂಗದಲ್ಲಿ ಐಕ್ಯನಾಗುತ್ತಾನೆ.

ಹೀಗೆ ನೊಸಲ ಕಣ್ಣನ್ನು ಪಡೆದ ಶಂಕರದಾಸಿಮಯ್ಯ ದೇಶ ಪರ್ಯಾಟನೆಯಲ್ಲಿ ತೊಡಗುತ್ತಾನೆ. ಗೌಳಿ, ಲಾಳ, ಮಗಧ, ಮಾಳವ ಮುಂತಾದ ಕಡೆ ಸುತ್ತಿ ಕೊನೆಗೆ ಮುದನೂರಿಗೆ ಬರುತ್ತಾನೆ. ಅಲ್ಲಿ ಗರ್ವದಿಂದ ಮೆರೆಯುತ್ತಿದ್ದ ವೈಷ್ಣವ ಭಕ್ತಿ ಜೇಡರದಾಸಿಮಯ್ಯನ ಅಹಂಕಾರವನ್ನು

ನಿರಸನಗೊಳಿಸುತ್ತಾನೆ. ತವನಿಧಿಯುಂಟೆಂಬ ಗರ್ವದಿಂದ ಮೆರೆಯುತ್ತಿದ್ದ ದಾಸಿಮಯ್ಯ (ಜೇಡರ) ಶೀತಕರನಿಗೆ ತಂಪನ್ನು ನೀಡುವ ಹಾಗೆ "ಎನ್ನ ಮನೆಯೊಳು ಸುಕುಮಾರ ಧಾನ್ಯಮುಂಟು ಇಲ್ಲಿ ನೀವಿರ್ಪನ್ನೆವರಂ ಧಾನ್ಯಕ್ಕೆ ಪೋಗಲಾಗದಾವ ನಿರೋಧಂ ಬೇಡ ಹತ್ತಿಪ್ಪತ್ತು ಸಾವಿರ ನೆಲ್ಲ ಹೇಱಂ ಕಳುಹುವೆಂ"[೩೬] ಎಂದು ತನ್ನ ಸಿರಿಯನ್ನು ಶಂಕರದಾಸಿಮಯ್ಯನಿಗೆ ತಿಳಿಸುತ್ತಾನೆ. ಆಗ ಶಂಕರದಾಸಿಮಯ್ಯನು ತಿರಿದಾಡಿದನ ಮಕ್ಕಳ್ಗೆ ಸಿರಿಯೆಲ್ಲಿಯದೆಲೆ ದಾಸ ? ನೀಲ ಕುಡುವವಂ ನಾಂ ಕೊಳುವವನುಂಟು"[೩೭] ಎಂದು ಕಟಕಿಯಾಡುತ್ತ ಬಿಡಾರದ ಮನೆಯ ಮುಂದಿನ ತಿಪ್ಪೆಯನ್ನು ಆತನಿಂದ ತೆಗೆಯಿಸಿ, ಕಡವರವನ್ನು ತೋರಿ ಬೇಕಾದಷ್ಟನ್ನು ತೆಗೆದುಕೊಳ್ಳುವಂತೆ ಸೂಚಿಸುತ್ತಾನೆ.

-------------

ಶಂಕರದಾಸಿಮಯ್ಯನ ಶಕ್ತಿ ಸಾಮರ್ಥ್ಯವನ್ನರಿತ ದುಗ್ಗಳೆ (ಜೇಡರ ದಾಸಿಮಯ್ಯನ ಹೆಂಡತಿ) ಶಿವಶಿವ ಕಾಲಾಗ್ನಿಯಂ ಕೆಣಕುವರೆ. . . . . . . . . ಶಿವಾರ್ಚನ ಸಂಪನ್ನ ಕರುಣಿಸು ಕರುಣಿಸೆಂದು[೩೮] ಪತಿಯ ಅಪರಾಧವನ್ನು ಮನ್ನಿಸುವಂತೆ ಕೇಳಿಕೊಳ್ಳುತ್ತಾಳೆ. ಹೀಗೆ ದೇವರ ದಾಸಿಮಯ್ಯನ ಗರ್ವವನ್ನು ಶಮನಗೊಳಿಸಿ ಶಂಕರ ದಾಸಿಮಯ್ಯ ಮುದನೂರಿನಲ್ಲಿರುತ್ತಾನೆ. ಇಲ್ಲಿ ದುಗ್ಗಳೆ ತನ್ನ ಪತಿಯ ಅಪರಾಧವನ್ನು ಮನ್ನಿಸುವಂತೆ, ಶಂಕರದಾಸಿಮಯ್ಯನನ್ನು ಪ್ರಾರ್ಥಿಸುವ ದೃಶ್ಯ ಚೆನ್ನಾಗಿ ಬಂದಿದೆ. ಅದು ದೇವರ ದಾಸಿಮಯ್ಯನಗಿಂತಲೂ ದುಗ್ಗಳೆಯೇ ಶ್ರೇಷ್ಠ ಎಂದು ಗುರುತಿಸುವುದರ ಜೊತೆಗೆ, ಸ್ತ್ರೀಯ ಅಂತರಂಗದ ಭಕ್ತಿಯನ್ನು ಎತ್ತಿ ಹಿಡಿಯುತ್ತದೆ.[೩೯]

ಮುಂದೆ ಇಂಥದ್ದೇ ಸಂದರ್ಭದಲ್ಲಿ ಅರಸ ಜಯಸಿಂಹರಾಯನ ಗರ್ವವನ್ನು ಮೆಟ್ಟುತ್ತಾನೆ. "ದೇವಾ ಕಳಾಸಾನ್ನಿಧ್ಯ ಮಾದ ನರಸಿಂಹ ಪ್ರತಿಮೆಯಂ ನಿಮ್ಮ ನೊಸಲಗಣ್ಣಿಂ ನೋಡಲು ಘನ ಪ್ರತಿಷ್ಠೆಯಾದಪುದು ನೋಡಿ ಕರುಣಿಸಬಹು[೪೦] ದೆಂದು ಕಟಕಿಯಾಡಿದ ಜಯಸಿಂಹ ರಾಯನಿಗೆ, ತನ್ನ ನೊಸಲಕಣ್ಣನ್ನು ತೆರೆಯುವ ಮೂಲಕ ನರಸಿಂಹ ಪ್ರತಿಮೆಯನ್ನೇ ಸುಟ್ಟುರುಹುತ್ತಾನೆ. ಶಂಕರ ದಾಸಿಮಯ್ಯನ ಈ ಸಾಮರ್ಥ್ಯಕ್ಕೆ ಬೆರಗಾದ ಜಯಸಿಂಹ ಮತ್ತು ಇತರ ವೈಷ್ಣವರೆಲ್ಲ ದಾಸಿಮಯ್ಯನ ಚರಣದಲ್ಲಿ ಬಿದ್ದು ಮನ್ನಿಸುವಂತೆ ಕೇಳಿಕೊಳ್ಳುತ್ತಾರೆ. ಕವಿ ಜಯಸಿಂಹನ ಕಥೆ ಹೇಳುವ ಮೂಲಕ ಶಂಕರದಾಸಿಮಯ್ಯನು ವೈಷ್ಣವ ಮತ ಖಂಡನೆಯಲ್ಲಿ ತೊಡಗಿದ್ದನೆಂಬುದನ್ನು, ವೈಷ್ಣವಮತ ವಿರೋಧಿ ಎಂಬುದನ್ನು ಇಲ್ಲಿ ಅರಿಯಬಹುದು.

ಶಂಕರದಾಸಿಮಯ್ಯ ಒಮ್ಮೆ ಶಿವದಾಸಿಯೊಡನೆ ಹೆಂಬೇಱ ಪಟ್ಟಣಕ್ಕೆ ಬರುತ್ತಾನೆ. ಆ ಪಟ್ಟಣದ ಪ್ರಮುಖ ದೇವರೆಂದರೆ ಮೈಲಾರದೇವ. ದೇವರ ಬಗ್ಗೆ ವಿಶೇಷ ಆಸಕ್ತಿ, ಭಕ್ತಿ ಗೌರವ ಜನರಲ್ಲಿ

ತುಂಬಿಕೊಂಡಿರುತ್ತದೆ. ಆದರೆ, ಶಂಕರದಾಸಿಮಯ್ಯ ಮೈಳುಗೆ ಎಂಬುವಳು ಮೈಲಾರ ದೇವನಿಗೆ ಅರ್ಪಿಸಲು ನೀಡಿದ ವೀಳಯವನ್ನು ತಾನೇ ಭೋಗಿಸಿದುದಲ್ಲದೆ, ತನ್ನ ಬಾಯಲ್ಲಿರುವ ತಾಂಬೂಲವನ್ನೇ ಮೈಲಾರನಿಗೂ ಇಕ್ಕಿ ದೇವರ ಪಾವಿತ್ರ್ಯವನ್ನು ನಾಶಮಾಡುತ್ತನೆ. ವಿಷಯ ತಿಳಿದ ಜನ ಬೆರಗಾಗಿ ಈ ಚೋದ್ಯವನ್ನು ನೋಡಲು ನೆರೆಯವರು ಆ ಸಂದರ್ಭದಲ್ಲಿ ಮೈಲಾರದೇವನು ಶಂಕರದಾಸಿಮಯ್ಯನ ಹಿಂದೆ ನಡೆಯುತ್ತಾನೆ. ಲೋಕವೇ ಪೂಜಿಸುತ್ತಿದ್ದ ದೈವವೊಂದು, ಸಾಮಾನ್ಯ ಮನುಷ್ಯನಂತೆ ಕಾಣುವ ಶಿವಾನುಗ್ರಹಿಯಾದ ಶಂಕರದಾಸಿಯ್ಯನ ಹಿಂದೆ ನಡೆಯುವ ದೃಶ್ಯ, ಹಾಗೆಯೇ ಇನ್ನೊಂದು ಪ್ರಸಂಗದಲ್ಲಿ ಬೆನ್ನ ಹತ್ತಿದ ಬೈರವನನ್ನು ಉದ್ಧರಿಸಿ ಊರ್ಜಿತಗೊಳಿಸಿದ ಸನ್ನಿವೇಶವೂ ಇದೆ. ಹೀಗೆ ರಗಳೆಗಳಲ್ಲಿ ಶಿವಭಕ್ತನೊಬ್ಬ ವೈಷ್ಣವರನ್ನು ವಿರೋಧಿಸಿದ ಸಂಘರ್ಷಕ್ಕಿಳಿದ ಪ್ರಸಂಗವಿದೆ.

**ಕೇಶಿರಾಜ, ಪೆರ್ಮಾಡಿರಾಯರ ನಡುವೆ ಸಂಘರ್ಷ**

ಈ ಪ್ರಸಂಗವು ಕೇಶಿರಾಜ ದಣ್ಣಾಯಕರ ರಗಳೆಯಲ್ಲಿ ಬರುತ್ತದೆ. ಉತ್ತರ ದೇಶದ ದಿಕ್ಕಿನಲ್ಲಿ ಒಂದು ಶಿವಪುರ, ಅಲ್ಲಿ ಶಿವನ ಸದ್ಭಕ್ತಿಗೆ ಪಾತ್ರನಾದ ಒಬ್ಬ ಸದ್ಭಕ್ತನಿದ್ದನು. ಹೆಸರು ಕೇಶಿರಾಜ. ಆ ಪುರದ ಸೋಮನಾಥನ ಭಕ್ತನಾಗಿದ್ದನು. ಹೀಗಿರುವಾಗ ಕಲ್ಯಾಣಪುರದಲ್ಲಿ ಚಾಲುಕ್ಯ ಚಕ್ರವರ್ತಿ ಪೆರ್ಮಾಡಿರಾಯನು ರಾಜ್ಯಭಾರ ಮಾಡುತ್ತಿದ್ದ, ಈತನಿಗೆ ಸರಿಯಾದ ಆಡಳಿತ ನಡೆಸಲು ಪ್ರತಿಭಾವಂತ ಪ್ರಧಾನಮಂತ್ರಿಯೊಬ್ಬರ ಅಗತ್ಯವಿತ್ತು. ಇದಕ್ಕಾಗಿಯೇ ಒಡ್ಡೊಲಗ ನಡೆಸಿ ಪುರಜನರನ್ನು ಕೇಳಿದಾಗ, ಕೇಶಿರಾಜ ದಣ್ಣಾಯಕರ ಹೆಸರನ್ನು ಸೂಚಿಸುತ್ತಾರೆ. ಅದರಂತೆ ಪೆರ್ಮಾಡಿರಾಯನು ಆಳುಗಳನ್ನು ಕಳಿಸಿ ಕರೆಯಿಸುತ್ತಾನೆ. ಅವನ ಬುದ್ಧಿವಂತಿಕೆ ದಕ್ಷತೆ ಕಂಡು ಹಿರಿಯ ಪ್ರಧಾನಿಕೆಯೆಂಬ ಮಂತ್ರಿ ಸ್ಥಾನ ಕೊಟ್ಟು ಗೌರವಿಸುತ್ತಾನೆ. ಹೀಗೆ ರಾಜ್ಯದ ಆಡಳಿತ ಸುಭೀಕ್ಷೆಯಲ್ಲಿ ನಡೆಯುತ್ತಿತ್ತು. ಇದರಿಂದ ಸಂತಸಗೊಂಡ ಅರಸ ಧರಣೀತಳದ ಸಂಪತ್ತು ತನ್ನ ಕೈಸೆರೆಯಲ್ಲಿ ಎಂದುಕೊಂಡನು. ಕಾರಣವೆಂದರೆ ಕೇಶಿರಾಜನಂಥ ಪ್ರತಿಭಾವಂತ ದೊರೆತ ಭಾಗ್ಯ ಎಂದು ಹರ್ಷ ವ್ಯಕ್ತಪಡಿಸುತ್ತಾನೆ. ಇದು ಕಥೆ.

ಒಂದೊಂದು ದಿವಸಕ್ಕೂ ಈ ಸಂಬಂಧಗಳು ಕುಡಿಯೊಡೆದು ಚಿಗುರ ತೊಡಗಿದವು. ಅರಸು ನೀಡಿದ ಸಿರಿಯನ್ನು ತನಗಿಂತಲೂ ಶರಣರಿಗೆ ವಿನಿಯೋಗಿಸಿ ಆನಂದಿಸುತ್ತಿದ್ದ ಕೇಶಿರಾಜ, ಹತ್ತಾರು ಕಾರ್ಯಕ್ರಮಗಳನ್ನು ಹಾಕಿಕೊಂಡು ಶರಣರೊಡನೆ ಶಿವಗೋಷ್ಠಿ ನಡೆಸುತ್ತಿದ್ದ. ಅಲ್ಲಿ ಶಿವಗೋಷ್ಠಿ, ಸಂಗೀತ, ಪುರಾತನರ ಗೀತಗೋಷ್ಠಿಗಳು ಚಂದದಿಂದ ನಡೆಯುತ್ತಿದ್ದವು. ಅಂತಹ ಗೋಷ್ಠಿ ? ಹಾಡುಗಳಲ್ಲಿಯೇ ಕೇಶಿರಾಜರು. ಹಲವುದಿನ, ಅರಸ, ಅರಸನ ಓಲಗ, ರಾಜಕಾರ್ಯಗಳನ್ನು ಮರೆತು

ಶರಣರ ಗೋಷ್ಠಿಯಲ್ಲಿ ಲೀನನಾದನೋ ಎಂಬಂತೆ ಕೇಶಿರಾಜನ ಬಾಳು ಸಾಗಿತು. ಶರಣರ ಸಂಗದಲ್ಲಿ ಅನ್ಯವೆಲ್ಲ ಮರೆಯಿತು.

ಆ ಸಮಯದಲ್ಲಿ ಅರಸ ಕೇಶಿರಾಜನನ್ನು ಆಳುಗಳಿಂದ ಕರೆಯ ಕಳುಹಿಸಿದನು, ಅರಸನ ಆಳುಗಳು ಬಂದು "ದಣ್ಣಾಯಕರೇ, ಅಗತ್ಯವಾದ ರಾಜಾಕಾರ್ಯವುಂಟು, ಮಹಾರಾಜರು ಕರೆಯುತ್ತಿದ್ದಾರೆ. ಬನ್ನಿ" ಎಂದು ವಿನಂತಿಸಿಕೊಂಡರು. ಕೇಶಿರಾಜ ಆಳುಗಳ ಕರೆಯನ್ನು ಅಲಕ್ಷಿಸಿ ಗೋಷ್ಠಿಯಲ್ಲಿ ಮುಳುಗಿದನು. ಮತ್ತೆ ಮತ್ತೆ ಅರಸನ ಅಳುಗಳು ಉರವಣಿಸುತ್ತ ಬಂದು ಅಗ್ರಪೂರ್ವಕವಾಗಿ ಕರೆಯತೊಡಗಿದರು. ತಾನು ಹೊರಟರೆ ಶರಣರ ಗೋಷ್ಠಿ ಕೆಡುವುದು, ಶಿವನಿಷ್ಠೆ ಕೆಡುವುದೆಂದು ಅಸಮಾಧಾನದಿಂದ ಕೇಶಿರಾಜ ತಲೆಕೊಡುವುತ್ತ, ಸಿಡಿಮಿಡಿಗೊಂಡು ಶರಣರ ವಿಯೋಗಕ್ಕೆ ಬೇಸರಗೊಂಡು ಅಂತರಂಗದ ನೋವಿನೊಡನೆ ಶರಣರ ಸಭೆಯನ್ನು ಉದ್ದೇಶಿಸಿ ಸಿರಿಯ ಸಂಗವು ಶರಣರ ಸಂಗಕ್ಕೆ ಶತೃವಾಯಿತು. ನರನ ಓಲಗದ ಪರಾಧೀನತೆ ಇರಿದಂತಾಯಿತು. ಅಯ್ಯಯ್ಯ ಸೋಮನಾಥ ಕರುಣೆದೋರು ನನಗೆ ಎಂದು ಪರಿಪರಿಯಾಗಿ ಬೇಡಿಕೊಂಡನು. ಅಲ್ಲದೆ ಶರಣಗೋಷ್ಠಿಯನ್ನು ಬಿಟ್ಟು ಕುದಿಯುತ್ತ ಸೇವಕರೊಡನೆ ಕೇಶಿರಾಜ ಅರಸನ ಆಸ್ಥಾನಕ್ಕೆ ಬಂದರು.

ಅರಮನೆಗೆ ದಣ್ಣಾಯಕರು ನಡೆದು ಬರುತ್ತಿದ್ದದನ್ನು ಕೇಳಿ ಅರಸ ಪೆರ್ಮಾಡಿರಾಯ ಕೋಪದಿಂದಲೇ ಅಕ್ಕಪಕ್ಕದ ಬ್ರಾಹ್ಮಣರ ಮುಖವನ್ನು ಅವಲೋಕಿಸಿದನು. ಅವರು ಇದೇ ಸಂದರ್ಭವೆಂದು ಕೇಶಿರಾಜನನ್ನು ನಿಂದಿಸತೊಡಗಿದರು. "ಹೇ ದೇವಾ, ಚಿತ್ತೈಸು. ನಿಮ್ಮ ದಣ್ಣಾಯಕರು ಅಂತಿಂಥವರಲ್ಲ. ಅವರು ಶಿವಭಕ್ತರಾಗಿರುವುದರಿಂದ ಸದಾಕಾಲ ವಿಷ್ಣು ನಿಂದಕರಾಗಿದ್ದಾರೆ. ಶರಭರೂಪಿನಿಂದ ವೀರಭದ್ರದೇವರು ವಿಷ್ಣುವನ್ನು ಕೊಂದು ನರಸಿಂಹ ಕೇಶರುಗಳನ್ನು ಉಮೇಯ ಮುಡಿಗೆ ತಂದು ಕೊಟ್ಟರೆಂಬ ಕಥನವನ್ನು ನೀವು ಆಡಬಾರದೆಂದು ನಾವು ನುಡಿದರೆ, ಅದೆಂತಹ ಕಟಕಿಯ ಮಾತನಾಡಿದರು ಸ್ವಾಮಿ ಗೊತ್ತೆ ? ಹೌದೌದು. ಆ ರೀತಿ ಆಡಲಾಗದು, ಇದು ನಿಮ್ಮ ಮುಂದೆ ಆಗಿರುವಂತಹ ಘಟನೆ ನೆನೆಪುಮಾಡಿಕೊಳ್ಳಿ, ನಿಮ್ಮ ಬಗ್ಗೆ ಅಂಜಿಕೆ ಇಲ್ಲ, ಗೌರವವಿಲ್ಲ ದೇವಾ ! ಕೇಶಿರಾಜರ ಕೈಯಲ್ಲಿ ಗುರುಪಾದ ಮುದ್ರಿಕೆಯುಂಟು. ಆತ ನಿಮಗೆಂದೂ ನಮಸ್ಕರಿಸಿದವನಲ್ಲ. ಆ ಉಂಗುರಕ್ಕೆ ನಮಸ್ಕರಿಸುವನು. ನೀವು ಅದನ್ನು ತಿಳಿದುಕೊಂಡಿಲ್ಲ.

ನಿಮ್ಮ ಬಗ್ಗೆ ಆತನಿಗೆ ಗೌರವವಿಲ್ಲ. ನಿಮ್ಮನ್ನು ಒಲೈಸಲು ಇದ್ದ ಮೇಲೆ ನಿಮ್ಮ ಮೇಲೆ ಗರ್ವಪಡುವುದೇಕೆ ? ನಮ್ಮನ್ನಾರು ಏನು ಮಾಡಬಲ್ಲರು ಎಂಬ ಉತ್ಕಟದ ದರ್ಪ ದಣ್ಣಾಯಕರದು" ಎಂದು ಕಿವಿಯೂದಿ ಸುಮ್ಮನಾದರು. ಅವರು ನಿಂದಿಸುತ್ತಿರುವಂತೆಯೇ ಮೇಲೆ ಕೇಶಿರಾಜರು ಆಸ್ಥಾನಕ್ಕೆ

ಬಂದರು. ಆಗ ಅರಸ ಮತ್ತು ಅವರ ಮಧ್ಯೆ ಮಾತಿನ ಚಕಮಕಿ ನಡೆಯುತ್ತದೆ. ಕೇಶಿರಾಜನಿಂದ ಗುರುಪಾತ ಮುದ್ರಿಕೆಯುಳ್ಳ ಉಂಗುರ ಇಸಿದುಕೊಂಡು ತನ್ನ ಬೆರಳಿಗೆ ಹಾಕಿಕೊಂಡನು. ಇನ್ನುಮುಂದೆ ಉಂಗುರವಿಲ್ಲದೆ ನಮಸ್ಕರಿಸಬೇಕು, ಇಲ್ಲದಿದ್ದರೆ ಈತನಿಗೆ ದಂಡಿಸಬೇಕು ಎಂಬ ನಿರ್ಣಯದಲ್ಲಿ ಅರಸನಿದ್ದನು.

"ಏನು ದಣ್ಣಾಯಕರ ಅಪರೂಪವಾಗಿ ಬಿಟ್ಟಿದ್ದೀರಿ, ಅರಮನೆಯ ಕಡೆಗೆ ಬನ್ನಿ, ಇತ್ತ ಬರಲೇ ಇಲ್ಲವಲ್ಲ. ಬನ್ನಿದಂಡನಾಯಕರೆ" ಎಂದು ಆಮಂತ್ರಣ ಕೊಟ್ಟು ಅರಸನ ಮಾತು ಮುಗಿದಾದ ಮೇಲೆ ಕೇಶಿರಾಜ ನಮಸ್ಕಾರ ಸಲ್ಲಿಸದೆ ಗಳಗಳನೆ ಹೊರಟರು. ಆಗ ಅರಸ ಮುನಿದು ಕರೆಕರೆ ಅವರನ್ನು ಎಂದು ಚಾರರಿಗೆ ಸೂಚಿಸಿದನು. ಅರಸನಿಗೆ ಕೋಪ ಹೆಚ್ಚಿ "ಅಹಾ ಇದೆಂತಹದು ನೋಡಿರಿ ? ನನ್ನಿಂದಲೇ ಸಂಪತ್ತನ್ನು ಪಡೆದವರು, ನನ್ನಿಂದಲೇ ತಮ್ಮ ದಾರಿದ್ರ್ಯವನ್ನು ತೊಡೆದುಕೊಂಡವರು. ನನಗೆ ನಮಸ್ಕಾರ ಸಲ್ಲಿಸದಷ್ಟು ಉದಾಸೀನ ಮಾಡುವುದು ಸರಿಯೇ ? ನನ್ನನ್ನೇ ಲಘುವಾಗಿ ನೋಡುತ್ತೀದ್ದೀರಲ್ಲ. ಈ ಸಿರಿ ಹಾರಿ ಹೋದರೆ ಸಾಕು ಎಂಬ ಮಾತು ನಿಮ್ಮಿಂದ ಬಂದಿದೆ. ಸಿರಿ ಹಾರುವ ಬೇಸರ ನಮ್ಮಿಂದ ಏನಾಗಿ ಬಂತು ? ಸಿರಿವಂತಿಕೆ ನಿಮಗೆ ಭಾರವಾಗಿದ್ದರೆ ನಮಗೆ ಇರಲಿ ಬಿಡಿ. ದಿಟವಾಗಿಯೂ ನಿಮಗೆ ಈ ಸಂಪತ್ತು ಬೇಡವಾಗಿದೆಯೇ ? ನೀವು ಬಲ್ಲಿರೆ ?" ಎಂದು ಕೇಳಿದನು. "ನೋಡಿ ನಮ್ಮಿಂದ ಯಾವ ತಪ್ಪಿಲ್ಲ ವಿಚಾರ ಮಾಡಿ ಎಂದರು ಕೇಶಿರಾಜರು.



ಹರಿ ಬೊಮ್ಮ ಪದವಿ ತೃಣವೆಂದು ಭಾವಿಸಿದ ಕೇಶಿರಾಜರು "ಕೇಳರಸ, ನಿನ್ನ ಸಿರಿ ನಿನಗೇ ಇರಲಿ; ನೀನೇ ಇಟ್ಟುಕೋ. ಶಿವಭಕ್ತರ ಸಂಗವೆಂಬ ಸಂಪತ್ತು ನನಗಿರಲಿ, ನಿನ್ನ ಸಿರಿಯನ್ನು ಒಲ್ಲೆ ಒಲ್ಲೆ, ಭಕ್ತಿ ಸಿರಿಗೆ ಅದು ಸರಿಯಲ್ಲ. ನಿನ್ನ ಭೌತಿಕ ಸಂಪತ್ತನ್ನು ನೀನೆ ತೆಗೆದುಕೋ" ಎನ್ನುತ್ತ ಕೇಶಿರಾಜ ತುಂಬಿದ ರಾಜ ಸಭೆಯಲ್ಲಿ, ಗಣ್ಯ, ಅತಿಗಣರು ನೆರೆದ ಸಭೆಯಲ್ಲಿ ರಾಜನಿತ್ತ ಕಂಕಣ, ಮುದ್ರಿಕೆ ಬಿಚ್ಚಿಟ್ಟು "ಹೊನ್ನಿನ ಕರಡಿಗೆ, ಈ ಸಜ್ಜೆ ನಿನ್ನವಿವು ಅರಸ ಎಂದು, ಲಿಂಗ ಸುತ್ತಿದ್ದ ರೇಷ್ಮೆ ವಸ್ತ್ರಗಳನ್ನೂ ಸಹ ಅರಸನ ಮುಂದಿಟ್ಟು ಕರಡಿಗೆಯ ಲಿಂಗವನ್ನು ಹಾಕಿಕೊಂಡು ಸೇವಕಾ ವೃತ್ತಿಯನ್ನು ಕಾಲಿನಿಂದ ಒದ್ದು ಹೊರಟನು. ಇತ್ತ ಪತಿ ಆಸ್ಥಾನ ತೊರೆದ ಸುದ್ದಿ ಕೇಳಿದ ಪತ್ನಿ ಗಂಗಾದೇವಿ ಗಂಡನೊಲ್ಲದ್ದು ತನಗೇಕೆ ಎಂದು ಪೆರ್ಮಾಡಿರಾಯನ ಸೊಮ್ಮು ಎನಿಸಿರುವ ಕಟಕ್ಕೆ ಮುಕುಟ, ಕೇಯೂರಾದಿ ಎಲ್ಲ ಅಭರಣಗಳನ್ನು ಕಾವಲಿನವರೆಗೆ ಒಪ್ಪಿಸಿಕೊಟ್ಟು ಆಸ್ಥಾನ ತ್ಯೇಜಿಸಿದಳು. ವೈಷ್ಣವರು ಅರಸನಿಗೆ ಚಾಡಿ ಹೇಳಿದ್ದರಿಂದಲೇ ಸಂಘರ್ಷ ಸಂಭವಿಸಿ, ವಾದ, ಪ್ರತಿವಾದಗಳು ನಡೆದಿವೆ. ಕೊನೆಗೆ ಅರಸನೇ ಅವರ ಶಿವಭಕ್ತಿ ಮೆಚ್ಚಿ ಆಶೀರ್ವಾದ ಪಡೆಯುವ ಪ್ರಸಂಗವೂ ರಗಳೆಯಲ್ಲಿ ಬಂದಿದೆ.

## ತೆಲುಗು ಜೊಮ್ಮಯ್ಯ ಪೆರ್ಮಾಡಿರಾಯನ ನಡುವೆ ಸಂಘರ್ಷ

ಪೆರ್ಮಾಡಿರಾಯನಾಳುತ್ತಿರುವ ಕಲ್ಯಾಣ ಪಟ್ಟಣದಲ್ಲಿ ಜೊಮ್ಮಯ್ಯ ಎಂಬ ಶಿವಭಕ್ತ, ಭೀಮನಾಥನ ಆರಾಧಕ, ಆತ ತೌಕಿಕವನ್ನು ಬಲ್ಲವ ಅಭಿಮಾನಿ; ಏಕನಿಷ್ಠ. ಶಿವನನ್ನಲ್ಲದೆ ಅನ್ಯವನ್ನು ಭಜಿಸದ ಸತ್ಯವಂತ. ಯಾವ ಕ್ಷಣದಲ್ಲೂ ಶಿವನಿಂದೆಯನ್ನು ಕೇಳದ ಗುರುಮೂರ್ತಿಯಾಗಿದ್ದ. ಉರಿಯಂತೆ ಸಿಡಿಲಂತೆ ಶಿವದೂಷಕರಿಗಾಗಿದ್ದರೆ ಸಿರಿಯಂತೆ, ಸುಖದಂತೆ ಹರನ ಭಕ್ತರಿಗಾಗಿದ್ದ. ಭವಿಗಳನ್ನು ಹುಳುಗಳಿಗಿಂತ ಕೀಳಾಗಿ ಕಂಡರೆ ಶಿವಭಕ್ತರನ್ನು ತನ್ನ ಬಂಧು ಬಳಗವೆಂದೇ ಭಾವಿಸಿದ್ದನು.

ಒಮ್ಮೆ ಅರಸ ಪೆರ್ಮಾಡಿರಾಯ ಹಿರಿಯ ಮಾಳಿಗೆಯ ಮಹಲಿನಲ್ಲಿ ವಿಷ್ಣು ಪೂಜೆಯಲ್ಲಿ ತೊಡಗಿದ್ದನು. ಆ ಸಮಯದಲ್ಲಿ ಅರಮನೆಗೆ ಬಂದ ಜೊಮ್ಮಯ್ಯ ಹೊರಗಡೆ ನಿಂತನು ಅರಸನ ಪೂಜೆ ಸಾಗುತ್ತಿದ್ದಂತೆ ಜೊಮ್ಮಯ್ಯನ ಅಕ್ಕಪಕ್ಕದಲ್ಲಿದ್ದ ಪುರಾಣಿಕರಲ್ಲಿ ಓರ್ವ ವಿಷ್ಣು ಪುರಾಣವನ್ನು ಓದುತ್ತಿದ್ದ. ಜೊಮ್ಮಯ್ಯ ಆಲಿಸುತ್ತಿದ್ದ. ಇದೊಂದು ಕಟ್ಟುಕ ಪುರಾಣ, ಕೆಟ್ಟ ಮಂಡೆಯ ಭಂಡ ಈ ಪರ್ವ ! ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಂತೆಯೇ ಆ ಪುರಾಣಿಕ ಲೋಕಾಯುಕ್ತನಂತೆ ಸುಳ್ಳು ಸಂಗತಿಯನ್ನು ಉಸುರಿದನು. ಆಕಾಶಗಂಗೆ ಆದಿಯಲ್ಲಿದ್ದುದನ್ನು ತಿರುಚಿ ಈ ಲೋಕಾಯುತನು' ಗಂಗೆ ವಿಷ್ಣು ಪದಿಯಾದಳು' ಎಂದು ಅರ್ಥ ಹುಟ್ಟುವ ಹಾಗೆ ಉಸುರಿದನು. ಈ ಮಾತು ಕೇಳಿದ್ದೇ ತಡ ಜೊಮ್ಮಣ್ಣನು ಕೋಪಗೊಂಡು ನಿಂತನು. ಪುರಾಣಿಕನು ಶಿವದ್ರೋಹಿಯಾಗಿ ಪಂಚಮುಖನ ನಿಂದೆಯನ್ನು ಮಾಡಿದನು. ಇದನ್ನು ಕೇಳಿದ ಜೊಮ್ಮಯ್ಯ ನಂತರ ಜೊಮ್ಮಣ್ಣ ಅಯ್ಯೋ ಶಿವನೇ, ಎಂತಹ ಹೀನ ಮಾತುಗಳು ! ಎಂದು ಕೊಂಡು "ಎಲೆಲೆಲೆ ಶಿವದ್ರೋಹಿ, ಹೀಗೆ ಸುಳ್ಳು ನುಡಿಯುವುದೇಕೆ ! ಎಲೆ ಪಾಪಿ, ಪಾತಕ ನಿನ್ನ ಬೊಗಳಿದ ನಾಲಗೆ ಜೀವಂತವಿರಬಾರದು" ? ಎಂದು ಕೋಪೋದ್ರಿಕ್ತನಾಗಿ ಖಡ್ಗದಿಂದ ಪುರಾಣಿಕನ ಮೈ ಸೀಳುವಂತೆ ಇರಿದನು. ಆಕಸ್ಮಿಕವಾಗಿ ನಡೆದ ಈ ಅನಾಹುತದಿಂದ ಬಲುಗರ ಹೊಡೆದಂತಾಗಿ ಆ ಪುರಾಣಿಕನು ನೆಲಕ್ಕೊರಗಿದನು ಮತ್ತು ಹಲುಗಚ್ಚಿ ಕೊನೆಗೆ ಹೆಣವಾದನು. ಹೀಗೆ ಆ ಶಿವದ್ರೋಹಿಯನ್ನು ತೀರಿಸಿ ಹೊರಬಿದ್ದ ಜೊಮ್ಮಯ್ಯನಿಗೆ ಸಮಾಧಾನವಿರಲಿಲ್ಲ. "ತಾನು ಶಿವನಿಂದೆಯನ್ನು ಕೇಳಿದನೇಕೆ ? ಶಿವನೇ, ನಿನ್ನ ನಿಂದನೆಯನ್ನು ನಾನಿಂದು ಕೇಳಿದನೇ ? ಇದಕ್ಕೆ ಪರಿಹಾರವೇನು" ? ಎಂದು ವಿಚಾರಿಸುತ್ತ ತನ್ನ ನಿಜವಾಸಕ್ಕೆ ಬಂದು ಶಿವಶರಣರನ್ನು ಕರೆಯಿಸಿಕೊಂಡನು. ನೆರೆದ ಗಣ ಸಮೂಹಕ್ಕೆ ತಲೆಬಾಗಿ ಮೈಯಿಕ್ಕಿ ದುಃಖದಿಂದ ಅಷ್ಟೇ ಕೋಪದಿಂದ ಅವರಿಗೆ ಭಿನ್ನಯಿಸಿದನು. "ಇಂದು ನಾನೊಂದು ಅಪರಾಧ ಮಾಡಿದೆನು. ಆದೇನೆಂದರೆ ಕಿವಿಯಿಂದಾದ ಅಪರಾಧ ! ಶಿವನಿಂದೆಯನ್ನು ಕೇಳಿದ ಪಾಪಿ ನಾನಾದೆನು. ಭವಿ

ಅರಸನನ್ನು ಓಲೈಸಿದ ಅಪರಾಧಕ್ಕೆ ಈ ಅಪರಾಧ ಮಾಡಿದೆನು. ಈ ಕಾರಣದಿಂದ ಶಿವನಿಂದೆಗೈದ ವಿಪ್ರನನ್ನು ಕೊಂದೇಬಿಟ್ಟೆನು. ಇಂದವನ ವಂಶವನ್ನು ನಟ್ಟು ಹರಗುವೆನು ಹೇಳಿರಿ ಶಿವನಿಂದೆ ಕೇಳಿಸಿಕೊಂಡ ಈ ಪಾಪಕ್ಕೆ ಮತ್ತೇನು ಪರಿಹಾರವಿದೆ ಬೇಗ ಹೇಳಿರಿ" ಎಂದು ಕೇಳಿಕೊಂಡನು.

ಪೆರ್ಮಾಡಿರಾಯ ವಿಷ್ಣು ಭಕ್ತ. ಆತ ವಿಷ್ಣು ಪೂಜೆಯಲ್ಲಿದ್ದಾಗ ವೈಷ್ಣವ ಪುರಾಣ ಓದುವ ಪುರಾಣಿಕ 'ವಿಷ್ಣು ಪದ'ದ ಬದಲು 'ವಿಷ್ಣು ಪದಿಯಾದಳು ಗಂಗೆ' ಎಂದು ಓದುತ್ತಾನೆ. ಅಕ್ಕಪಕ್ಕದಲ್ಲಿಯೇ ಇದ್ದ ತೆಲುಗು ಜೊಮ್ಮಯ್ಯ 'ವಿಷ್ಣುಪದವೆಂಬ ಗಗನ ನಾಮವನ್ನು ಅಪಾರ್ಥ ಮಾಡುವಿ'ಯೆಂದು ಪುರಾಣಿಕನನ್ನು ಇರಿದು ಕೊಲ್ಲುತ್ತಾನೆ. ಇಷ್ಟಾದರೂ' ಜೊಮ್ಮಯ್ಯನ ಸಿಟ್ಟು ಇಳಿಯದೆ ಆ ಶಿವನಿಂದೆ ಮರೆಯಲು ಗಣಪರ್ವ ಮಾಡಿ ತನ್ನ ನಿಲಯದಲ್ಲಿರುತ್ತಾನೆ. ಅರಸನಿಗೆ ಪ್ರಕರಣ ತಿಳಿದ ಕೂಡಲೇ ಒಡ್ಡೋಲಗದಲ್ಲಿ ವಿಚಾರಣೆಗೆ ಆದೇಶಿಸುತ್ತಾನೆ. 'ವಿಪ್ರವಧೆ' ಬಹುದೊಡ್ಡ ಪಾಪವೆನಿಸಿತ್ತು ಸನಾತನ ಪರಂಪರೆಯಲ್ಲಿ ಅದಕ್ಕಾಗಿ ಕಠೋರ ಶಿಕ್ಷೆಗಳಿರುತ್ತಿದ್ದವು. ಜೊಮ್ಮಣ್ಣನ ಪ್ರಸಂಗ ಅಂತಹದೊಂದು. ಆದರೆ, ಅರಸು ಪೆರ್ಮಾಡಿರಾಯನು ಎರಡು ವಿಷಯಗಳಿಂದಾಗಿ ಕೋಪ ಕಳೆದುಕೊಂಡು ಸಮಾಧಾನಿಯಾಗುತ್ತಾನೆ.

೧. ಪೆರ್ಮಾಡಿರಾಯನ ಅರಸಿ ಲಕುಮಾದೇವಿಯು ಜೊಮ್ಮಣ್ಣ ತನಗೆ ನಮಿಸಿನೆಂದು ಅರಸ ಭಾವಿಸುವಂತೆ ಅವನ ಹಿಂದೆ ಲಿಂಗವಿಡಿದು ನಿಲ್ಲುತ್ತಾಳೆ. ಆದರೆ, ಓಲಗ ಪ್ರವೇಶಿಸಿದ ಜೊಮ್ಮಣ್ಣ ಭವಿಯ ಹಿಂದೇಕೆ ? ಲಿಂಗವೇ ಇಲ್ಲಿಗೆ ಬಾ ಎಂದು ತನ್ನ ಹಸ್ತಕ್ಕೆ ಬರಮಾಡಿಕೊಳ್ಳುತ್ತಾನೆ.

೨. ವಿಪ್ರವಧೆ ಮಾಡಿದ ಸಂದರ್ಭದಲ್ಲಿ ಅರಸು ಪೂಜಿಸುವ ವಿಷ್ಣು ಪ್ರತಿಮೆ ಕಣ್ಣೀರುಗರೆಯುತ್ತದೆ. ಈ ಎರಡು ತಾತ್ಪರ್ಯ ಮತ್ತು ಸಾಮರ್ಥ್ಯಗಳನ್ನು ಕಂಡ ಅರಸು ವಿಚಾರಣೆಗೆ ಮೊದಲೇ ಕರಗುತ್ತಾನೆ. ಈಗ ಪುರಾಣ ಭಟ್ಟನನ್ನು ಕೊಂಡುದಕ್ಕೆ ಕಾರಣ ಕೇಳುತ್ತಾನೆ. ಆಗ ಜೊಮ್ಮಣ್ಣ 'ನಾನು ಪುರಾಣ ಭಟ್ಟನನ್ನು ಕೊಲ್ಲಲಿಲ್ಲ. ಶಿವನಿಂದೆ ಮಾಡಿದ ದೂಷಿಯನ್ನು ಕೊಂದೆ' ಎನ್ನುತ್ತಾನೆ. ಅದನ್ನು ಸಮರ್ಥಿಸಿದ ಪುರಾಣದಲ್ಲಿದ್ದುದನ್ನು ಓದಿದರೆ ಅದರಲ್ಲಿ ಅಸತ್ಯವಿದೆ ಎಂಬುದಕ್ಕೆ ಪ್ರತ್ಯಕ್ಷವೇನೂ ? ಎಂದು ಕೇಳುತ್ತಾನೆ"[೨]

'ಹೆಣದ ಮುಸುಕು ಹಾಕಿ ಮುಸುಕು ತೆಗೆದಾಗ ಹುಳುವಾಗಿರುವುದೇ ಪ್ರತ್ಯಕ್ಷವೆನ್ನುತ್ತಾನೆ." ಜೊಮ್ಮಣ್ಣ, ಹಾಗೆ ಪವಾಡವು ಜರುಗುತ್ತದೆ. ಇದನ್ನು ಕಂಡ ಅರಸು ಜೊಮ್ಮಣ್ಣನ ಪಾದಕ್ಕೆರಗುತ್ತಾನೆ. ಪರೀಕ್ಷಿಸಿದ ಕರ್ಮಿಗೆ ಕರುಣಿಸುದೆನುತ ಜೊಮ್ಮಣ್ಣನ ಪಾದಗಳಿಗೆ ಆರುಸಾಲಿನ ಹೊನ್ನನ್ನು ತಪ್ಪುದಂಡ ಕಾಣಿಕೆ ನೀಡುತ್ತಾನೆ. ಹೀಗೆ ಅನೇಕ ರಗಳೆಗಳಲ್ಲಿ ವೈಷ್ಣವರು ಮತ್ತು ಶಿವಭಕ್ತರ ನಡುವೆ ನಡೆದ

ಸಂಘರ್ಷದ ಬಗ್ಗೆ ನೋಡಬಹುದು. ಇದೇ ರೀತಿ ಬಸವರಾಜ ದೇವರ ರಗಳೆ, ರೇಣಸಿದ್ಧನ ರಗಳೆಯಲ್ಲಿಯೂ ನೋಡಬಹುದು. ಸಂಘರ್ಷಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರ ನೀಡಲಾಗಿದೆ. ವಿಶ್ಲೇಷಣೆಗೆ ಆದ್ಯತೆ ನೀಡಿ ಇಲ್ಲಿ ಚರ್ಚಿಸಲಾಗಿದೆ.

### ೪. ಅರ್ಥ ಸಂಘರ್ಷ

ಬಸವಣ್ಣನವರು ಐಕ್ಯವಾದ ಅರ್ಧ ಶತಮಾನದ ಅಂತರದಲ್ಲಿ ಬಾಳಿದವ ಹರಿಹರ. ಒಂದರ್ಥದಲ್ಲಿ ಬಸವಣ್ಣನವರ ವಿಚಾರಗಳಿಗೆ ಉತ್ತರಾಧಿಕಾರಿಯಾಗಿ ನಿಂತವ, ಹೀಗಾಗಿ "ಬಸವರಾಜ ದೇವರ ರಗಳೆ" ಬಸವಣ್ಣನವರ ಆಂದೋಲನಕ್ಕೆ ಬರೆದ ಸಾಹಿತ್ಯಿಕ ವ್ಯಾಖ್ಯಾನದಂತಿದ್ದು, ಇಲ್ಲಿ ಎರಡು ಯುಗಧರ್ಮಗಳ ಹೋರಾಟವೆಂಬಂತೆ ಹಳೆಯ ಮೌಲ್ಯ ಮತ್ತು ಹೊಸ ಮೌಲ್ಯಗಳ ಸಂಘರ್ಷ ಉದ್ದಕ್ಕೂ ಸಾಗಿದುದು, ಹೊಸ ಮೌಲ್ಯ ಕಾಲೂರುತ್ತಿದ್ದುದು ಕಂಡು ಬರುತ್ತದೆ. ಬಸವರಾಜ ದೇವರ ರಗಳೆಯಲ್ಲಿ ವ್ಯಕ್ತಿಗತ ಸಿದ್ಧಿಯ ಪ್ರತಿಪಾದನೆಗಿಂತ ಸಮಾಜಗತ ಪ್ರಸಾದ ಸಿದ್ಧಿಯ ಪ್ರತಿಪಾದನೆಗೆ ಅವಕಾಶ ಕಲ್ಪಿಸಿಕೊಟ್ಟಿರುವುದರಿಂದ ಆತ್ಮೋದ್ಧಾರ ಕ್ರಿಯೆಯಲ್ಲಿ ತೊಡಗಿದ ಸಾಧಕನ ಹೋರಾಟಕ್ಕಿಂತ ಸಮಾಜೋದ್ಧಾರ ಕ್ರಿಯೆಯಲ್ಲಿ ತೊಡಗಿದ ಸಾಧಕನ ಹೋರಾಟ ಅಲ್ಲಿ ಎದ್ದು ಕಾಣುತ್ತದೆ.

ಬಸವಣ್ಣ ಶಿವಭಕ್ತರ ಶ್ರಯೋಭಿವೃದ್ಧಿಗಾಗಿ ರಾಜ್ಯದ ಭಂಡಾರವನ್ನೆಲ್ಲ ವ್ಯಯ ಮಾಡುತ್ತಿದ್ದಾನೆ. ಹೀಗಾಗಿ ರಾಜ್ಯ ಆರ್ಥಿಕ ಸ್ಥಿತಿ ಹದಗೆಡುತ್ತದೆ ಎಂದು ಬ್ರಾಹ್ಮಣರು ಅರಸ ಬಿಜ್ಜಳನಿಗೆ ದೂರು ನೀಡುತ್ತಾರೆ. ಅಲ್ಲದೆ ದಲಿತರ ಕೇರಿಗಳಿಗೆ ಪ್ರವೇಶ ಮಾಡಿದಲ್ಲದೆ ಊಟ ಮಾಡಿ ರಾಜ್ಯದ ಘನತೆಯನ್ನು, ಸಾಮಾಜಿಕ ವ್ಯವಸ್ಥೆಯನ್ನು ದುಃಸ್ಥಿತಿಗೆ ಹೊಯ್ಯುತ್ತಿದ್ದಾರೆ ಎಂದು ದೂರುಗಳ ಸುರಿಮಳೆ ಗೈಯುತ್ತಾರೆ. ಆದರೂ ಬಸವಣ್ಣ ಅರಸನಿಗೆ ಅಂಜದೆ, ಅಳುಕದೆ ದಿಟ್ಟ ಉತ್ತರ ನೀಡುವಂತಹ ಪ್ರಸಂಗ ರಗಳೆಯಲ್ಲಿ ಬಂದಿದೆ.

ಜಂಗಮ ಸಮಾಜವನ್ನು ರೂಪಿಸಲು ಬಸವಣ್ಣನವರು ರಚಿಸಿದುದು ಜಂಗಮ ಸಂವಿಧಾನ" ಅಥವಾ ವೀರಶೈವ ತತ್ವ ವ್ಯವಸ್ಥೆ" ಈ ವ್ಯವಸ್ಥೆಗೆ ಬಾಹಿರರೆಲ್ಲ ಭವಿಗಳು,"[೪೩] ರಾಜ್ಯ ಸಂಪತ್ತು, ರಾಜನೂ ಸೇರಿದಂತೆ ಈ ಭವಿಗಳ (ದುಷ್ಟ ಪ್ರಜೆಗಳ) ಭೋಗವಸ್ತುವಲ್ಲ. ಭಕ್ತರ (ಸತ್ಪ್ರಜೆಗಳ) ಭೋಗವಸ್ತುವೆಂಬುದು ಸಚಿವ ಬಸವನ ರಾಜ್ಯ ನೀತಿ; ಪ್ರಥಮಸಲ ಗಣಕ ಶಾಲೆಗೆ ಬಂದ ಬಾಲಕ ಬಸವ, ಅಲ್ಲಿಯ ತಪ್ಪು ಲೆಕ್ಕನೋಡಿ "ಭಕ್ತನೊಡನೆ ಕೆಡಲಾಗದು ಕಂಡುದಂ ಪೇಳ್ವನಯ್ಯ" ಎನ್ನುವಲ್ಲಿ ರಾಜ್ಯ ಭಂಡಾರ "ಭಕ್ತ (ಸತ್ಪ್ರಜೆ)ನ ಒಡವೆ" ಭವಿಯಾದ ಬಿಜ್ಜಳನದೂ ಅಲ್ಲ, ಭವಿಗಳಾದ ಪ್ರಜೆಗಳದೂ ಅಲ್ಲವೆಂಬ ಧ್ವನಿಯಿದೆ. ಮುಂದೆ ಗಣಕ ವೃತ್ತಿ ಸ್ವೀಕರಿಸಿದ ಬಸವಣ್ಣ ಮಡುಗಟ್ಟಿದ್ದ ರಾಜ್ಯ ಭಂಡಾರದ ಉಸ್ತುವಾರಿ ನಡೆಸುತ್ತ.

ಚಿಂತಿಸಿದನಾ ವಸ್ತುಗಳ ನಡುವೆ ಕುಳ್ಳಿರ್ದ

ಅಯ್ಯಲಾ ಇಂತನಪ್ಪನರ್ಘ್ಯಮಂ ಭಕ್ತರ್ಗೆ

ಕೈಯ್ಯರೆ ಕೊಡಲಿಲ್ಲ ಪರಶಿವನ ಭಕ್ತರ್ಗೆ

ಎಂದೋ ಮಹೇಶರ್ಗೆ ಸೇರಿಸುವೆನಿಂತಿದಂ

ಎಂದೋ ಸುಚಿತ್ತವಾರಾಧಿಸುವೆ ನಿಂತಿದಂ

ಕಾಕ ಬಾಜನವಾಗಿ ಪೋಗುತಿರ್ದ ಪುರಕಟ.

.......................................................

ದೇವ ಭಕ್ತರ್ಗೀವ ಪುಣ್ಯಮಯ ಭಕ್ತಿಯಂ"[೪೪]

ಎಂದು ಯೋಚಿಸುವಲ್ಲಿ ಈ ರಾಜ್ಯ ಭಂಡಾರ ಪ್ರಭುವರ್ಗದ್ದಲ್ಲ, ಪುರೋಹಿತ ವರ್ಗದ್ದಲ್ಲ, ಪ್ರಜಾವರ್ಗದ್ದು– ಜಂಗಮವರ್ಗದ್ದೆಂಬ ಧೋರಣೆ ಕಂಡು ಬರುತ್ತದೆ. ಹೀಗಾಗಿ ಪರಮಾಧಿಕಾರತ್ವದ ಹೆಸರಿನಲ್ಲಿ ರಾಜ ಭೋಗಕ್ಕೆ, ದಾನಧರ್ಮದ ಹೆಸರಿನಲ್ಲಿ ಪುರೋಹಿತರ ಭೋಗಕ್ಕೆ ಕಾರಭಾಜನವಾಗುತ್ತಲಿದ್ದ ರಾಜ್ಯ ಭಂಡಾರವನ್ನು ಸತ್ಪ್ರಜೆಗಳ ಭೋಗಕ್ಕೆ ವಿನಿಯೋಗಿಸ ತೊಡಗಿದುದು ಪ್ರಭುಸತ್ತೆ (Mararchy) ಮೌಲ್ಯಕ್ಕೆ ಬದಲು ಪ್ರಜಾಸತ್ತೆ (DEMOCRACY) ಮೌಲ್ಯವನ್ನು ಪ್ರತಿಷ್ಠಾಪಿಸುವುದೇ ಆಗಿದೆ.

ಜಂಗಮರಿಗೆ ವಿತರಣೆ ಮಾಡುವಾಗಲೆಲ್ಲ "ನಿಮ್ಮರ್ಥಮಂ ನಿಮಗೆ ತೊತ್ತುಗೆಲಸಂ ಮಾಡಿ ಬೇಡಿತಂ ನೀಡುವ ಕಿಂಕರಂ ಎಂದು ನುಡಿಯುವಲ್ಲಿ, ಪುರೋಹಿತರ ಪಿಸುಣಕ್ಕೆ ಕವಿಗೊಟ್ಟ ಬಿಜ್ಜಳನನ್ನು ಕುರಿತು "ಶಿವಭಕ್ತರ್ ನಿನ್ನೊಡವಿಗೆ ಆಶೇ ಮಾಳ್ವರೆ, ತಮ್ಮೊಡವೆಯಂ ತಾವೆ ಕೊಂಡರ್" ಎಂದು ಉತ್ತರ ನೀಡುವಲ್ಲಿ ರಾಜ್ಯ ಭಂಡಾರ ಕೆಲವೇ ಪ್ರತಿಷ್ಠಿತ ಪ್ರಜೆಗಳ ಆಸ್ತಿಯಲ್ಲಿ, ಸರ್ವಸತ್ಪ್ರಜೆಗಳ ಆಸ್ತಿ, ಅದರ ಮೇಲೆ ಎಲ್ಲರ ಹಕ್ಕು ಇದೆ ಎಂದು ಬ್ರಾಹ್ಮಣ ವರ್ಗದವರಿಗೆ ಮತ್ತು ಅರಸನ ಮುಂದೆಯೂ ಪ್ರತಿರೋಧವೊಡ್ಡುವಂತೆ ಮಾತನಾಡುತ್ತಾನೆ.

ರಾಜ್ಯ ಭಂಡಾರ ಕೆಲವೇ ಪ್ರತಿಷ್ಠಿತ ಪ್ರಜೆಗಳ ಆಸ್ತಿಯಲ್ಲ. ಸರ್ವಸ್ವಪ್ರಜೆಗಳ ಆಸ್ತಿ. ಅದರ

ಮೇಲೆ ಎಲ್ಲರ ಹಕ್ಕು ಇದೆ. ಇದು ವೀರಶೈವ ಮಾರ್ಗದಲ್ಲಿ ಒಂದು ಹಂತ ಅಷ್ಟೇ ಕಳ್ಳರು ತನ್ನ ಮನೆಯ ಆಕಳುಗಳನ್ನು ಅಪಹರಿಸಿದ ಸುದ್ದಿಯನ್ನು ಕೇಳಿ ಮರುಳ ಗೋವಳಾ ಭಕ್ತರೇಂ ಕಳ್ಳರೇ ? ನಿನಗೇನೋ ತಮ್ಮೊಡವೆಯಂ ತಾವೆಕೊಳ್ಳದೆ.. .. .. .. .. . ಸಂಗನೇ ಕೊಡುವವಂ ಸಂಗನೇ ಕೊಂಬವಂ" ಎಂದು ಕಳಿಂಗ ದೇಶದ ಮಹದೇವಿ ಶೆಟ್ಟಿಗೆ ೩೦ ಎತ್ತುಗಳ ಭಾರದ ಮುತ್ತು, ರತ್ನ, ಹೊನ್ನು ಕೊಡುತ್ತ ಕುಡುವವಂ ಸಂಗಂ ಬೇಡುವವಂ ಸಂಗಮದೇವಂ" ಎಂದು ಹೇಳುವಲ್ಲಿ, ಲೋಕದ ಯಾವುದೇ ವಸ್ತುವಿನ ಮೇಲೆ ಯಾರ ಹಕ್ಕೂ ಇಲ್ಲ. ಎಲ್ಲ ಶಿವನ ವಿಶ್ವಸ್ತನಿಧಿ ನಾವು ಅದರ ಸದಸ್ಯರು ಮಾತ್ರ ಎಂಬ ನಿಲುಮೆಯೇ ವೀರಶೈವ ಸಮ್ಮತ ದ್ವಿತೀಯ ಹಂತ. ಅಂದರೆ ಸಂಪತ್ತು ರಾಜನದಲ್ಲ, ಪ್ರಜೆಗಳದು ಎಂಬುದು ಪ್ರಥಮ ಹಂತ.೪೪

ಪ್ರಭುವರ್ಗ ಪುರೋಹಿತ ವರ್ಗದ ಹಿಡಿತದಿಂದ ರಾಜ್ಯ ಸಂಪತ್ತನ್ನೂ ಪ್ರಜಾ ಸಮುದಾಯ ವನ್ನು ಬಿಡುಗಡೆ ಮಾಡಿ, ಸ್ವತಂತ್ರವಾಗಿ ನಿಲ್ಲಿಸುವ ಧೋರಣೆಗಳಿವು. ಆದುದರಿಂದ ಕಲ್ಯಾಣ ಕ್ರಾಂತಿಗೆ ಅನುಲೋಮ ವಿವಾಹ ಒಂದು ನೆವ; ಈ ಹೊಸ ಆರ್ಥಿಕ ರಾಜಕೀಯ ವ್ಯವಸ್ಥೆಯೇ ಒಳಗಿನ ಹೊಟ್ಟೆಯುರಿ ಎಂದು ಹೇಳಬಹುದು. ಈ ಮೊದಲು ಅಕ್ಕಿಯನ್ನು ಕೊಟ್ಟು ಎಂಜಲ ಕೂಳನ್ನು ತಿನ್ನುವವರಂತೆ ರಾಜನೊಂದಿಗೆ ಬಾಳುತ್ತಲಿದ್ದ ಪ್ರಜೆಗಳು ಈಗ ಬಸವಣ್ಣನ ಹೊಸ ರಾಜ್ಯ ನೀತಿಯಿಂದಾಗಿ "ಹೋದ್ದದೇವಾಂಗದಿಂದುಟ್ಟ, ಪಟ್ಟಾವಳಿಯಿಂ ತೊಟ್ಟ ದಿವ್ಯಾಭರಣದಿಂ ರುದ್ರಲೋಕದ ರಾಜಪುತ್ರರಂತೆ, ಕೈಲಾಸದ ಕಮನೀಯರಂತೆ, ರಜತಗಿರಿಯ ವಿಜಯರಂತೆ, ಮೇರುವನ ಧೀರರಂತೆ.. .. .. .. .. .. . .. ಬಿಜ್ಜಳನ ಪುರದ ರಾಜವಿಧಿಗಳೊಳು" ಸುಳಿಯ ತೊಡಗಿದ ಚಿತ್ರವನ್ನು ಊಹಿಸಿಕೊಳ್ಳಬೇಕು. ಈವರೆಗೆ ಪ್ರಭುವರ್ಗವನ್ನು ಬಿಟ್ಟರೆ ತಮ್ಮ ಭೋಗಕ್ಕೆ ಮಾತ್ರ ವಸ್ತುವಾಗಿದ್ದ ರಾಜ್ಯ ಭಂಡಾರ ಹೀಗೆ ಶ್ರೀ ಸಾಮಾನ್ಯರ ಭೋಗಕ್ಕೆ ವಸ್ತುವಾಗುತ್ತಿರುವುದನ್ನು ಪುರೋಹಿತರು 'ನೋಡಲಾರದೆ ಬಿಸುಸುಯ್ದು, ಸೈರಿಸಲಾರದೆ ಕುದಿದು ಕೋಟಲೆಗೊಂಡು, ಅನುತಾಪದೊಳುರಿದು, ಮನಂ ಕರಿಮುರಿವೋಗಿ.. .. . . . . ಗಳಗಳನೆ ಪರಿತಂದು ಎಲೆಎಲೆ ಮದುವರಸಾ, ಪುರದೊಳು ಸುಳಿದ ಶಿವಭಕ್ತರ ಸಿರಿಯನೇನಂ ಬಿನ್ನವಿಪೆವು. ನಿನ್ನ ಭಂಡಾರದೊಳು ನೀನಿಕ್ಕಲಮ್ಮದ ಪದಕಂ ಶರಣರ ಪೇರುರದೊಳು, ನೀಂ ಮುಟ್ಟಲಂಜುವ ತೋರಹಾರಂ ಭಕ್ತರ ಕೊರಳುಗಳೊಳು, ನೀಂ ಕೈಕೊಳಿಸಲಮ್ಮದ ವಜ್ರದ ಕಂಕಣಂ ಶರಣರ ಕರದೊಳು. ನೀಂ ನೋಡಲಮ್ಮನ ರತ್ನ ಮುದ್ರಿಕೆಗಳು ಶರಣರ ಕೋಮಲಾಂಗುಲಿಯೊಳು. ನೀಂ ತೊಡಲಮ್ಮದಾರಾಧಿಪ ದಿವ್ಯಾ ಭರಣಂ ಶರಣ ಮೈಯ್ಯೊಳು ನೀಂ ಉಡಲಮ್ಮದೆ ಪೊಡಮಡುವ ನವವಸ್ತ್ರಂ ಶರಣರಂಗದೊಳು .. .. . . . . . ಕಾಣಬಂದವು. . . . . . . ಭಂಡಾರಂ ಸೂರೆವೋದುದು ಇದಂ ದಿಟಂ ವಿಚಾರಿಸದೆ ಕ್ಷತ್ರಿಯ ಧರ್ಮಮಂ ಕೆಡಿಸುವರೇ ? ಈ ರಾಜ್ಯವನುದಾನೆಂನಂ ಮಾಳ್ಪರೆ" ಎಂದು

ಹೇಳುವಲ್ಲಿ ಈ ಹೊಟ್ಟೆಯುರಿಯ ಕಾರಣವನ್ನು ಅರ್ಥಮಾಡಿಕೊಳ್ಳಬಹುದು. ಈಗ ಬಸವನಿಂದಾಗಿ ಭಂಡಾರ ಸೋರಿ ಹೋಗುತ್ತಲಿದೆಯೆಂಬ ಆರೋಪದ ನ್ಯಾಯವಿಚಾರಣೆ ನಡೆಯುತ್ತದೆ. ಲೆಕ್ಕದಲ್ಲಿ ಹದಿನೆಂಟು ಕೋಟಿ ಕೊರತೆಯು ಆರೋಪ ಬಸವನ ಮೇಲೆ ಬರುತ್ತದೆ. ಆದರೆ, ಭಂಡಾರದ ಮನೆಗೆ ಬಂದು ಮುದ್ರಿಸಿದ ಪೆಟ್ಟಿಗೆಯಂ.. .. .. . . . . . . . ತೆಗೆದು ಲೆಕ್ಕಿಸಿ ನೋಳ್ಪಾಗಳು ನಿಲುವಿನ ಪದಿನೆಂಟು ಕೋಟಿಗೆ ಛತ್ತೀಸಕೋಟ ಬಾಹತ್ತರ ಕೋಟಿಗಳಿಂ ಮಿಗಿಲೆನಿಸಿ.. . . . . . . . . ಸಂಪತ್ತು ವರ್ಧಿಸಿತ್ತು. ಪ್ರಜೆಗಳ ಮುಂದೆ ಬಸವ ಮಂಡಿಸಿದ ಕಾಯಕ ಮೊದಲಾದ ಹೊಸ ಆರ್ಥಿಕ ಧೋರಣೆಗಳಿಂದ ಸಾಧ್ಯವಾಗಿರಬಹುದಾದ ಈ ಸಂಪತ್ತಿನ ವರ್ಧನೆಗೆ ಹರಿಹರ ಪವಾಡ ವೇಷ ತೊಡಿಸಿದಂತೆ ತೋರುತ್ತದೆ. ಒಟ್ಟಿನಲ್ಲಿ ಪ್ರಜೆಗಳಿಂದ ಬೆಳೆದ ರಾಜ್ಯ ಭಂಡಾರ ಪ್ರಜೆಗಳಿಗಾಗಿ ವಿನಿಯೋಗವಾಗಬೇಕೆಂಬುದು ಬಸವ ಮಂತ್ರಿಯ ನಿಲುವಾಗಿದೆ. ಕೊನೆಗೆ ಅರಸ ಹಣ ನೀರಿನಂತೆ ವ್ಯಯವಾಗುತ್ತಿರುವುದನ್ನು ಕಂಡು; ಆಕ್ರೋಶ ವ್ಯಕ್ತಪಡಿಸುತ್ತಾನೆ. ಬ್ರಾಹ್ಮಣರು ರಾಜರಿಗೆ ಬಸವಣ್ಣನವರ ವಿರುದ್ಧ ದೂರು ಹೇಳುವುದು ಹೆಚ್ಚಾದ್ದರಿಂದ ಕಲ್ಯಾಣ ರಾಜ್ಯದಲ್ಲಿ ಅರಾಜಕತೆ ಉಂಟಾಗುತ್ತದೆ. ನಂತರ ಬಸವಣ್ಣ ವಾಸ್ತವ ಸ್ಥಿತಿ ಅರಿತು ಮಂತ್ರಿ ಪದವಿ ತ್ಯಜಿಸಿ ಕಪ್ಪಡಿಯ ಸಂಗಮದಲ್ಲಿ ಐಕ್ಯನಾಗುತ್ತನೆ. ಇದು ಕಥೆ ಇಬ್ಬರ ಮಧ್ಯೆ ವಾದ ಪ್ರತಿವಾದಗಳು ನಡೆದರೂ ಪರಿಸ್ಥಿತಿ ತಹಬದಿಗೆ ಬಂದಿರಲಿಲ್ಲ.

'ಭಂಡಾರ ಸೂರೆವೋಯ್ತು' ಎಂದು ವೈಷ್ಣವರು ಅರಸನಿಗೆ ಹೇಳಿ ಬಸವಣ್ಣನ ಮೇಲೆ ಸಿಟ್ಟಾಗುವಂತೆ ಮಾಡಿ ಒಡ್ಡೋಲಗದಲ್ಲಿ ವಿಚಾರಣೆ ಇಡಿಸುತ್ತಾರೆ. ಕರಣಿಕರ ಸಮೇತ ಬಸವಣ್ಣನನ್ನು ಕರೆತರಬೇಕೆಂದು ಕಳಿಸುತ್ತಾನೆ. ಬಸವಣ್ಣ ಭಂಡಾರ ಸಚಿವನಾಗಿದ್ದರೂ ನ್ಯಾಯ ವಿಚಾರಣೆ ನಡೆಯುತ್ತದೆ. ಲೆಕ್ಕದ ಮಾತು ಬಂದು "ನಿಂದ ಹೊನ್ನಿಗೆ ನಿರ್ಣಯ ಕೊಡುವುದು" ಎಂದು ಅರಸನು ಕೇಳುತ್ತಾನೆ. ಪರಸಮಯಿಗಳ ಮಾತು ಅರಸನನ್ನು ಮರಳು ಮಾಡಿದೆ" ಎಂದು ಬಸವಣ್ಣ ಅಂದುಕೊಳ್ಳುತ್ತ" ಶಿವಭಕ್ತರು ತಮ್ಮೊಡವೆಯನ್ನು ತಾವೇಕೊಂಡರು. ನಿನ್ನೊಡವೆಗೆ ಆಶಿಸುವರೆ ? ಎಂದು ಸಮರ್ಥಿಸುತ್ತ ಅರಸನನ್ನು ಜೊತೆಗೆ ಕರೆದುಕೊಂಡು 'ಭಂಡಾರದ ಮನೆ' ಹೊಕ್ಕು ಅಲ್ಲಿ ಸಂಗ್ರಹಿಸಿದ್ದ ಕೋಟಿ ಕೋಟಿ ಸಂಪತ್ತಿನ ದರ್ಶನ ಮಾಡಿಸುತ್ತಾನೆ. ಅರಸನದು ಇದ್ದೂ ಸತ್ತಂತಹ ಪರಿಸ್ಥಿತಿ: ಮುಂದುವರಿಯದ ಮೂರ್ಖ, ಶರಣರನರಿಯದ ಸರ್ವಾಪರಾಧಿಗೆ ಕರುಣಿಸುವುದೆ'ನ್ನುತ ಬಿಜ್ಜಳನು ತನ್ನ ತಪ್ಪಿಗಾಗಿ ತಪ್ಪುದಂಡವನ್ನಿತ್ತು. ಬಸವಣ್ಣನನ್ನು ಸಮಾಧಾನಿಸುತ್ತಾನೆ.೪೪ ಪವಾಡವಿಲ್ಲದ ಒಂದು ಅದ್ಭುತ ಪ್ರಸಂಗವಿದಾಗಿದೆ.

ಬಸವಣ್ಣನ ಕಾಯಕವೇ ಕೈಲಾಸ ತತ್ವದ ಪ್ರಯೋಗ ಭೂಮಿಯಾಗಿ, ದುಡಿಮೆಗೆ ಸಂದ

ಪ್ರತಿಫಲವಾಗಿ ನಾಡಿನಿಂದ ಕೂಡಲ್ಪಟ್ಟ ಸರ್ವ ತೆರಿಗೆ, ಆದಾಯ ಶಿಸ್ತು ಬದ್ಧ ಸಂಗ್ರಹಣೆಗೆ, ಭಂಡಾರದ ಅನವಶ್ಯ ಖರ್ಚು ನಿಂತಿದ್ದು, ಅಷ್ಟು ದೊಡ್ಡ ಪ್ರಮಾಣದ ಸಂಪತ್ತು ಭಂಡಾರಕ್ಕೆ ಸೇರಲು ಕಾರಣವಾಗಿದೆ. ಇದರ ಇಂದು ಮುಂದಿನ ಆಲೋಚನೆ, ಇಲ್ಲದೆ ಅರಸು ಇನ್ನೊಬ್ಬರ ಮಾತು ಕೇಳಿ ಅಪರಾಧಿಯಂತೆ ಬಸವಣ್ಣನನ್ನು ನಡೆಸಿಕೊಂಡದ್ದು, ದಿಢೀರನೆ ಓಲಗದಲ್ಲಿ ವಿಚಾರಿಸಿದ್ದು, ಅರಸನ ಪಕ್ಷಪಾತ ನಿಲುವನ್ನು ಸೂಚಿಸುತ್ತದೆ. ತಪ್ಪಿನ ಮನವರಿಕೆಯಾದಾಗ ಪ್ರಚಲಿತ ಪದ್ಧತಿಯಂತೆ ತಪ್ಪೊಪ್ಪುವುದು ಮತ್ತು ತಪ್ಪುದಂಡ ನೀಡುವುದು ರಾಜನಂತಹವರಿಗೂ ಅನ್ವಯವಾಗುತ್ತಿತ್ತು ಎಂಬುದು ರಗಳೆಯಿಂದ ವಿಧಿತವಾಗುತ್ತದೆ. ಹೊಲಗೇರಿಗೆ ಹೋಗಿ ಬಸವಣ್ಣ ನಾಗಿದೇವನ ಮನೆಯಲ್ಲುಂಡ ಪ್ರಕರಣವನ್ನು ದೊಡ್ಡದನ್ನಾಗಿ ಮಾಡಿ ಬಿಜ್ಜಳನು ಬಯಲು ಓಲಗ ನಡೆಸಿದ ವಿಪರೀತ ಪ್ರಸಂಗ ರಗಳೆಯಲ್ಲಿದೆ.[೪೫] ನಾಗಿದೇವ ಹೊಲೆಯನಲ್ಲ; ವಿತ್ರರು ಹೊಲೆಯರು" ಎಂಬ ಬಸವನ ಮಾತನ್ನು ಸಮರ್ಥಿಸಲು ಅವನಿಗೆ ಕೇಳಿದಾಗ ಪವಾಡವೊಂದು ನಡೆಯುತ್ತದೆ. ಸಂಭೋಳಿ ನಾಗಿದೇವನ ಮೈಯಲ್ಲಿ ಹಾಲು ಸುರಿದುದು; ವಿಪ್ರನೊಬ್ಬನ ಮೈಯಿಂದ ರಕ್ತ, ಬಾಲಹುಳುಗಳು ಸುರಿದುದನ್ನು ಕಂಡ ಬಿಜ್ಜಳ ತನ್ನ ನಡೆಗೆ ಪಶ್ಚಾತ್ತಾಪ ಪಡುವಂತಾಗುತ್ತದೆ.

ಮೇಲೆ ಹೇಳಿದ ವಿಪ್ರನಿಂದನೆ, ಶೈವವಾಗಲು ವಿರೋಧ, ಅರ್ಥ ವಿನಿಯೋಗ, ಸ್ಪೃಶ್ಯಾಸ್ಪೃಶ್ಯತೆ ಸಂದರ್ಭಗಳಲ್ಲಿಯಂತೆ ವೈಷ್ಣವ ಧರ್ಮ ನಿಂದನೆಯ ಪ್ರಸಂಗವೊಂದು ಕೇಶಿರಾಜನ ರಗಳೆಯಲ್ಲಿ ಕಾಣುತ್ತೇವೆ. ಈ ಪ್ರಸಂಗದಲ್ಲಿ ಅರಸನ ಪ್ರತಿಷ್ಠೆ, ಸ್ವಾಭಿಮಾನ ಕೆರಳಿಸುವುದನ್ನು ನೋಡುತ್ತೇವೆ. ತಾನಿತ್ತ ಸಂಪತ್ತಿನಿಂದ ಕೇಶಿರಾಜ ಅಹಂಕಾರಿಯಾಗಿರುವನೆಂದು ಭಾವಿಸಿ ಪೆರ್ಮಾಡಿರಾಯ ತುಂಬಿದ ಸಭೆಯಲ್ಲಿ ವಿಚಾರಣೆ ನಡೆಸುತ್ತಾನೆ. ಅರಸನಿಗಿಂತ ಪ್ರಜೆ, ಭವಿಗಳಿಗಿಂತ ಭಕ್ತ, ಅರಸನೊಡನಾಟಕ್ಕಿಂತ ಶಿವಗೋಷ್ಠಿ ಮೇಲೆಂದು ಭಾವಿಸುವ ಕೇಶಿರಾಜನ 'ಸಿರಿ ಹಾರಿ ಹೋಗೆ' ಎಂಬ ಮಾತು, ಅರಸನಿಗೆ ನಮಿಸದೆ ತನ್ನ ಕೈಯ ಗುರುಪಾದ ಮುದ್ರಿಕೆಗೆ ನಮಿಸುವ ಸಂಗತಿ ಅರಸನಿಗೆ ಅಪಥ್ಯವೆನಿಸಿ ವಿಚಾರಣೆಗೇರ್ಪಡಿಸುನೆ. ಇದು ನೇರವಾಗಿ ಅರಸನ ಧರ್ಮ ಹಾಗೂ ಪ್ರಭುತ್ವವನ್ನು ಕಡೆಗಣಿಸಿದ್ದರ ಉದಾಹರಣೆಯಾಗಿದೆ.[೪೬] ಪೆರ್ಮಾಡಿರಾಯನು ಮಾತನಾಡುತ್ತ ಸರದಲ್ಲಿ ಕೇಶಿರಾಜನ ಉಂಗುರವನ್ನು ಇಸಿದು ಕೊಳ್ಳುತ್ತಾನೆ. ಲೋಕಾಭಿರಾಮವಾಗಿ ಮಾತನಾಡಿ ಎದ್ದು ಹೋಗುವ ಕಾಲಕ್ಕೆ ಕೈಯಂಗುರದ ಗುರುಪಾದಕ್ಕೆ ನಮಿಸುವ ಕೇಶಿರಾಜ ಉಂಗುರವಿಲ್ಲದಾಗ ನಮಿಸದೇ ಹೊರಡುತ್ತಾನೆ. ಸಿರಿಹಾರಿ ಹೋಗೆ ಎನ್ನುತ್ತೀರಿ, ಸಿರಿಭಾರವಾಗಿದ್ದರೆ ಬಿಟ್ಟುಬಿಡಿ; ನಮಗೇ ಇರಲಿ" ಎಂದು ಅರಸು ಹೇಳುತ್ತಾನೆ. "ತಕ್ಷಣ ತನ್ನ ತಪ್ಪಂತೂ ಇಲ್ಲ, ಕೇಳರಸ, ನಿನ್ನಸಿರಿ ನಿನಗಿಕ್ಕೆ ನಿನಗಿಕ್ಕೆ; ಭುಕುತಿ ಸಿರಿ ಸಾಕೆನಗೆ" ಎಂದು ಕೇಶಿರಾಜ ಉತ್ತರಿಸಿ ಸರ್ವಾಭರಣ, ಸರ್ವ ಸಂಪದ, ನವ್ಯವಾಹನ, ಅರಮನೆ ಎಲ್ಲವನ್ನು ಅರಸನಿಗೆ ಒಪ್ಪಿಸಿ ಸಭೆಯಿಂದ ಹೊರ ನಡೆಯುತ್ತಾನೆ.

ರಾಜ ಸಭೆಯಲ್ಲಿ ವೈರಾಗ್ಯ ಸಂಪದನಾಗಿ ಹೊರಟ ಕೇಶಿರಾಜನ ಪರವಾಗಿ ಯಾರೂ ಉಸಿರೆತ್ತದೆ ಇರುವ ಗಂಭೀರತೆಯನ್ನು ಪರಿಭಾವಿಸಬೇಕು. ಸಂಪತ್ತಿನಾಸೆಯ ಪ್ರಭುವು ಪದಾರ್ಥವಾದಿಯಾಗಿ ಕೇಶಿರಾಜನೆಂಬ ಪ್ರಸಾದ ವಾದಿಯನ್ನು ತುಂಬಿ ದೋಲಗದಲ್ಲಿ ಅವಮಾನಿಸಿದಂತಿದೆ. ಇಲ್ಲಿ ಅರಸನ ನಿರಂಕುಶ ನಡವಳಿಕೆಯನ್ನು ಗಮನಿಸಬೇಕು. ನ್ಯಾಯ ತೀರ್ಮಾನವು ಸರ್ವರಿಗೂ ಸಮನಿರಬೇಕಾದರೂ ಪ್ರತಿಷ್ಠೆಗೆ ಧಕ್ಕೆ ಬಂದಾಗ ಅರಸನು ಸಿಡಿದೇಳುತ್ತಿದ್ದ. ಹೀಗಾಗಿ ಕೆಲವೊಮ್ಮೆ ನ್ಯಾಯವೆನ್ನುವುದು ಬಲವಿದ್ದವನೇ ಬಲಶಾಲಿ ಎಂಬಂತಾಗುತ್ತಿತ್ತು. ಹೀಗೆ ಹಲವಾರು ಉದಾಹರಣೆಗಳನ್ನು ರಗಳೆಗಳಲ್ಲಿ ನೋಡಬಹುದು. ಈವರೆಗೆ ರಗಳೆಗಳಲ್ಲಿ ಅರಸರು ಮತ್ತು ಶರಣರ ಮಧ್ಯೆ ನಡೆದ ವಾದ-ಪ್ರತಿವಾದಗಳ ಬಗ್ಗೆ ಚರ್ಚಿಸಿ ವಿಶ್ಲೇಷಣೆ ಮಾಡಲಾಗಿದೆ.

## ಶಿವಶರಣರ ಕಾಯಕ ತತ್ವ ಮತ್ತು ನಿಷ್ಪಕ್ಷಪಾತ ಭಕ್ತಿ

ಶಿವಶರಣರು ಸಾಮಾಜಿಕ ವ್ಯವಸ್ಥೆ ವಿರುದ್ಧ ಮಾತ್ರ ಹೋರಾಟ ನಡೆಸಲಿಲ್ಲ, ನುಡಿದಂತೆ, ನಡೆದರು, ಕಾಯಕ ತತ್ವ ಸಿದ್ಧಾಂತದಡಿ ಕೆಲಸ ಮಾಡಿ ಸಮಾಜೋದ್ಧಾರ, ಆತ್ಮೋದ್ಧಾರದ ಕೈಂಕರ್ಯಗಳನ್ನು ಮಾಡಿದ್ದಾರೆ ಎಂಬುದು ರಗಳೆ ಕರ್ತೃಗಳಿಂದ ತಿಳಿದು ಬರುತ್ತದೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿ ತನ್ನ ಜೀವನ ನಿರ್ವಹಣೆಗಾಗಿ ಒಂದಿಲ್ಲೊಂದು ವೃತ್ತಿಯನ್ನು ಕೈಗೊಳ್ಳುತ್ತಾನೆ. ಹೀಗೆ ಕೇವಲ ಜೀವನೋಪಾಯಕ್ಕಾಗಿ, ಕಾಯಪೋಷಣೆಗಾಗಿ ಕೈಕೊಂಡ ವೃತ್ತಿ ಕಾಯಕವೆನಿಸುವುದಿಲ್ಲ. ಸಮಾಜದ ಒಳಿತಿಗಾಗಿ ಕೆಲಸ ಮಾಡಬೇಕು ಎಂಬ ಧೋರಣೆಗಳು ಶಿವಶರಣರಲ್ಲಿದ್ದವು. ಜೀವನವನ್ನು ದೇವನ ಮಟ್ಟಕ್ಕೆ ಉತ್ತರಿಸುವ, ಜೀವಾತ್ಮ ಪರಮಾತ್ಮರಲ್ಲಿ ಸಮರವನ್ನು ಉಂಟುಮಾಡುವ ಕ್ರಿಯಾರೂಪ ಶಕ್ತಿಯನ್ನು ಹೊಂದಿದ ಮಹಾಯೋಗವೇ ಕಾಯಕ, ಇಲ್ಲಿ ಅಂತರಾತ್ಮನಲ್ಲಿ ಹುದುಗಿದ ಕ್ರಿಯಾಶಕ್ತಿಯ ಅಭಿವ್ಯಕ್ತಿ ರೂಪವೇ ಕಾಯಕವೆನಿಸಿಕೊಳ್ಳುತ್ತದೆ. ಕ್ಷಣಿಕವಾದ ವಿಷಯ ಸುಖದಲ್ಲಿ ಮುಳುಗಿದ ವ್ಯಕ್ತಿಗಳನ್ನು ನಿತ್ಯ- ಶಿವಸುಖಿಗಳನ್ನಾಗಿ ಮಾಡುವುದು ಇದರ ಉದ್ದೇಶ. ಆತ್ಮವಿಕಾಸಕ್ಕಾಗಿ, ಸಮಾಜ ಕಲ್ಯಾಣಕ್ಕಾಗಿ ಹಂಬಲಿಸುವವರಿಗೆ ಕಾಯಕ ಅನಿವಾರ್ಯ, ಇಲ್ಲಿ ಕಾಯಕ ಸಾಧನ ರೂಪವಾದಂತೆ, ಸಾಧ್ಯರೂಪವೂ ಆಗಿ ನಿಲ್ಲುತ್ತದೆ. ಆಧ್ಯಾತ್ಮಿಕ ಲೌಕಿಕ, ವ್ಯಷ್ಟಿ, ಸಮಷ್ಟಿ, ಇಹ-ಪರ, ಆಚಾರ-ವಿಚಾರ, ಭಕ್ತಿ-ಜ್ಞಾನ, ಕ್ರಿಯೆಗಳ ಸಮನ್ವಯವಿದರಲ್ಲಿದೆ. ಶರಣರು ಹೇಳಿದ ಈ ಕಾಯಕದಲ್ಲಿ ಸರ್ವಸಮನ್ವಯತೆ, ವ್ಯಕ್ತಿ, ಶರಣರ ಸಮಗ್ರ ದೃಷ್ಟಿ ಕಾಯಕದ ಮೂಲಕ ಅಭಿವ್ಯಕ್ತಗೊಂಡಿದೆ.

ಶಿವಶರಣರು 'ಕಾಯಕವನ್ನು ಕೇವಲ ಆಧ್ಯಾತ್ಮಿಕ ಮಟ್ಟದಲ್ಲಿ ನಿಲ್ಲಿಸಿದ್ದರೆ, ಇಷ್ಟೊಂದು ಅರ್ಥ ವ್ಯಾಪ್ತಿ, ಅರ್ಥಪುಷ್ಟಿ ಪ್ರಾಪ್ತವಾಗುತ್ತಿರಲಿಲ್ಲ. ಅದು ವ್ಯವಹಾರಿಕ (ಲೌಕಿಕ) ಸತ್ಯವಾಗಿ ಪ್ರವಹಿಸಿದುದರ

ಕಾರಣ ವಿಶಿಷ್ಟಾರ್ಥವನ್ನು ಹೊಂದಲು ಸಾಧ್ಯವಾಯಿತು. ಶರಣರು ತಮ್ಮ ಆಚಾರ-ವಿಚಾರಗಳ ಮೂಲಕ ಇದಕ್ಕೆ ವಿಶಾಲಾರ್ಥ ಕಲ್ಪಿಸಿಕೊಟ್ಟರು. ಶರಣಧರ್ಮದ ಸಾರವನ್ನು ತಿಳಿಯಲು 'ಕಾಯಕ'ವೆಂಬ ಮೂರಕ್ಷರಗಳೇ ಸಾಕೆನಿಸುತ್ತದೆ. "ವ್ಯಕ್ತಿ-ಸಮಾಜ ಮತ್ತು ಅವುಗಳ ಪರಸ್ಪರ ಸಂಬಂಧದಿಂದ ಸಾಧಿಸುವ ವಿಕಾಸ-ಇವುಗಳನ್ನುಳಿಯುವ, ಬೆಳೆಯುವ ತ್ರಿವಿಕ್ರಮ ಪದ ಕಾಯಕ"[೪೮] ಎಂಬ ಮಾತು ಅರ್ಥಪೂರ್ಣವಾಗಿದೆ. ಹನ್ನೆರಡನೇ ಶತಮಾನದ ಶಿವಶರಣರು ನೀಡಿದ ವೈಚಾರಿಕ ಕೊಡುಗೆಗಳಲ್ಲಿ ಈ ಕಾಯಕ ತತ್ವವೂ ಒಂದು. ಮುಂದೆ ಬಂದ ಶಿವಕವಿಗಳು ಈ ತತ್ವವನ್ನು ತಮ್ಮ ಕೃತಿಗಳ ಮೂಲಕ, ಕಥೆಗಳ ಮೂಲಕ ಬಿತ್ತರಿಸಿದುದನ್ನು ಕಾಣುತ್ತೇವೆ. ಅಂಥ ಶಿವಕವಿಗಳಲ್ಲಿ ಹರಿಹರ ಪ್ರಮುಖ, ಹರಿಹರನ ರಗಳೆಗಳಲ್ಲಿ ಕಂಡು ಬರುವ ಕಾಯಕ ತತ್ವವನ್ನು ಹೀಗೆ ವಿವೇಚಿಸಬಹುದು:

ಹರಿಹರನ ಭಕ್ತಿ ಭಾವನೆ ತುಂಬಿ ಹರಿದುದು ರಗಳೆಗಳಲ್ಲಿ, ಭಕ್ತಕವಿಯಾದ ಈತನು ಶಿವಶರಣರ ಚರಿತ್ರೆಗಳನ್ನು ಬರೆಯುವ ನೆವದಲ್ಲಿ ತನ್ನ ಭಕ್ತಿಯ ಪರಾಕಾಷ್ಠೆಯನ್ನು ಮೆರೆದಿದ್ದಾನೆ. ಅಲ್ಲಿ ತನ್ನ ಮನೋಧರ್ಮದ ಶಿವಶರಣರು ತಮ್ಮ ವೃತ್ತಿಯನ್ನು ಭಕ್ತಿಯ ಸಾಧನ ಮಾಡಿಕೊಂಡಿದ್ದಾರೆ; ಕಾಯಕದ ರೂಪದಲ್ಲಿ ಪರ್ಯವಸಾನಗೊಳಿಸಿ ಕೊಂಡಿದ್ದಾರೆ. ಹರಿಹರನು ಶಿವಶರಣರ ಚರಿತ್ರೆಗಳನ್ನು ವಿವರಿಸುವಾಗ ಅವರ ಕುಲ, ಕೈಕೊಂಡ ಕಾಯಕ, ಕಾಯಕ ನಿಷ್ಠೆ, ಕಾಯಕನಿಷ್ಠೆಯ ಸತ್ವಪರೀಕ್ಷೆ, ಶಿವಸಾಕ್ಷಾತ್ಕಾರ-ಈ ಕ್ರಮ ಅನುಸರಿಸಿದುದು ಕಂಡು ಬರುತ್ತದೆ. ಆದರೆ ಕೆಲವು ಕಡೆಗೆ ಅವುಗಳ ವಿವರಣೆ ಬರಬೇಕಾದಷ್ಟು ಬಂದಿಲ್ಲವೆನಿಸುತ್ತದೆ. ಬಸವೇಶ್ವರ ದೇವರ ರಗಳೆ, ಮಾರುಡಿಗೆ ನಾಚಿ ತಂದೆ ರಗಳೆಯಲ್ಲಿ ಗಣಕಾಯಕ, ತಿಲಕಾಯಕ ಎಂದು ಸಂಕ್ಷಿಪ್ತವಾಗಿ ಕಾಯಕ ನಿರ್ದೇಶಕ ಮಾಡಿ ಮುಂದುವರಿಯುವ ತಿರುಕುರುಂಪೆ ತೊಂಡ, ಅತಿಭಕ್ತ ಮೊದಲಾದವರ ರಗಳೆಗಳಲ್ಲಿ ಕಾಯಕವನ್ನು ಧೀರ್ಘವಾಗಿ ವಿವರಿಸುವುದೂ ಕಂಡು ಬರುತ್ತದೆ. ಆತನು ಅನೇಕ ಬಗೆಯ ವೃತ್ತಿಯನ್ನು ವಿವರಿಸುವಾಗ ಇದು ಮನದಟ್ಟಾಗುತ್ತದೆ. ವಿವಿಧ ವೃತ್ತಿಗಳ ಪರಿಚಯ ಜ್ಞಾನವನ್ನು ಹೊಂದಿದ ಹರಿಹರ ಆಯಾ ಶರಣರ ವೃತ್ತಿಗಳಲ್ಲಿ ಸಮರಸನಾಗಿ ಬಿಡುತ್ತಾನೆ. ಈ ಭಾವವೇ ಅವನು ವಿವರಿಸುವ ವಿಚಾರ, ತತ್ವಗಳಿಗೆ ಬಲವನ್ನು, ಬೆಲೆಯನ್ನು ತಂದುಕೊಟ್ಟಿದೆ.

ಹರಿಹರನ ರಗಳೆಗಳಲ್ಲಿಯ ಶರಣರು ತಮ್ಮ ತಮ್ಮ ಪ್ರವೃತ್ತಿಗನುಗುಣವಾದ, ಸಾಮರ್ಥ್ಯಕ್ಕೆ ಅಳವಡುವಂತಹ ವೃತ್ತಿಯನ್ನು ಹೊಂದಿದವರು. ತಮ್ಮ ತಮ್ಮ ವೃತ್ತಿಯನ್ನೇ ಕಾಯಕದ ಮಟ್ಟಕ್ಕೆ ಏರಿಸಿದವರು. ತನು-ಮನ ಬಳಸದಿದ್ದರೆ ಯಾವ ಕೆಲಸವೂ ಕಾಯಕವೆನಿಸುವುದಿಲ್ಲ. ಕಾರಣ ದ್ರವ್ಯ ಸಂಪಾದನೆ ಮಾಡುವಲ್ಲಿ ಸ್ವಂತ ದುಡಿಮೆ, ಶ್ರಮ ಅಗತ್ಯ ಶ್ರೀಮಂತನಿರಲಿ, ಬಡವನಿರಲಿ; ಹಿರಿಯ ಕುಲದವನಾಗಿರಲಿ, ಕಿರಿಯ ಕುಲದವನಾಗಿರಲಿ ಕಾಯಕ ಮಾಡಬೇಕು. (ಕುಲಜ) ಕಂಬುಲ್ಲ, (ಬ್ರಾಹ್ಮಣ)

ಕಡವೂರಕಾರಿ, (ಬೇಡ) ಕಣ್ಣಪ್ಪ, (ಒಕ್ಕಲಿಗ) ಇಳೆಯಾಂಡ ಗುಡಿಮಾರ, (ಅಗಸ) ತಿರುಕುರುಂಪೆ ತೊಂಡ, ಅರಿವಾಳ್ತಂಡ, (ಜಾಲಗಾರ) ಅತಿಭಕ್ತ, (ಶೂದ್ರ) ಮೊನೆಯಿಡುವವರು (ಮಾದರ) ಚೆನ್ನಯ್ಯ, (ಕುಂಬಾರ) ಗುಂಡಯ್ಯ, (ದಂಡನಾಯಕ) ಕೇಶಿರಾಜ, ಬಸವಣ್ಣ ಮೊದಲಾದವರನ್ನು ಕುರಿತು ಬರೆದ ರಗಳೆಗಳಲ್ಲಿ ಮೇಲಿನ ಅಂಶಗಳನ್ನು ಎಳೆಎಳೆಯಾಗಿ ಬಿಡಿಸಿ ಹೇಳಿದ್ದಾನೆ.[೪೯]

ಕೈಕೊಂಡ ವೃತ್ತಿಯ ಬಗೆಗೆ ಪೂಜ್ಯ ಭಾವನೆ ಹೊಂದಿರಬೇಕು. ಹಿರಿದು, ಕಿರಿದು, ಮೇಲು–ಕೀಳು ಎಂಬ ಭಾವನೆಗೆ ಅವಕಾಶವಿರಬಾರದು. ತಮ್ಮ ತಮ್ಮ ಕಾಯಕದಲ್ಲಿ ನಿರತರಾದ ತಿರುಕುರುಂಪೆ ತೊಂಡ, ಅತಿಭಕ್ತ, ಕುಂಬಾರ ಗುಂಡಯ್ಯರ ದೃಢತೆ, ಚಂಚಲತೆ, ಶ್ರದ್ಧೆ, ನಿಷ್ಠೆ ಪ್ರಾಮಾಣಿಕತೆಗಳು ಬೆರಗುಗೊಳಿಸುತ್ತವೆ.

ತಿರುಕುರುಪೆ ತೊಂಡರು ಕೆಲಸದಲ್ಲಿ ತಲ್ಲೀನರಾದ ರೀತಿಯನ್ನು ಹರಿಹರ ಹೀಗೆ ತಿಳಿಸುತ್ತಾನೆ.

ಬಗೆದನೊಗೆದನುದಯದಿಂದೆಯಸ್ತ ಮಾನವಾಗಲೊಗೆದು

ಕರತಳಿಂಗಳೊಳಗೆ ಕೆಂಪು ಕಚ್ಚುಗಟ್ಟಿ ಸುಲಿಯಲೊಗೆದು

ಬೆರಲ ತುದಿಗಳೊಳಗೆಯರುಣ ಜಲಧಾರೆಯೊಗೆಯಲೊಗೆದು

ಬಗೆಯೆ ಬಿಳಿದು ಹಾರೆ ಕರಿದು ತೋರೆ ಮಸಿಯ ಬಣ್ಣವೇರಿ"[೫೦]

ಕಾಯಕನಿಷ್ಠೆಯ ಚರಮ ಸೀಮೆಯನ್ನು ಅತಿಭಕ್ತ ಹಾಗೂ ತಿರುಕುರಂಪೆ ತೊಂಡರ ರಗಳೆಗಳಲ್ಲಿ ಕಾಣುತ್ತೇವೆ. ಈ ಇಬ್ಬರಿಗೂ ಶರಣರು ತಮ್ಮ ಕಾಯಕದಲ್ಲಿ ತೋರಿದ ನಿಷ್ಠೆ ಅನುಪಮ ಹಾಗೂ ಅಚಲವಾದುದು, ಕಾಯಕನಿಷ್ಠೆಯಿಂದಲೇ ಶಿವನನ್ನು ಒಲಿಸಿಕೊಳ್ಳಲು ಸಾಧ್ಯವೆಂಬುದನ್ನು ಹರಿಹರ ತಿಳಿಸುತ್ತಾನೆ. ಸತ್ಯ, ಶುದ್ಧ ಕಾಯಕದಿಂದ ಬಂದ ದ್ರವ್ಯ, ಸತ್ಪಾತ್ರಕ್ಕೆ, ಶಿವಕಾರ್ಯಕ್ಕೆ ಸಲ್ಲುತ್ತದೆ. ದೇಹಮನ ಬಳಲಿಸದೆ, ಅಪಮಾರ್ಗದಿಂದ ಗಳಿಸಿದ ಹಣ ಶಿವಕಾರ್ಯಕ್ಕೆ ಹೋರಗು, ಕಾಯಕದಿಂದ ದ್ರವ್ಯ ಸಂಪಾದನೆ ಮಾಡಿದ ನಂತರ ಆಚರಣೆ ಕೊನೆಗೊಂಡಿತೆಂದು ಭಾವಿಸಬಾರದು. ಅದನ್ನು ಸಮರ್ಪಣ ಭಾವದಿಂದ ಶಿವಭಕ್ತರ ದಾಸೋಹಕ್ಕಾಗಿ, ಶಿವಕಾರ್ಯಗಳಿಗಾಗಿ ವಿನಿಯೋಗಿಸಬೇಕು. ಸಂಪಾದನೆ, ವಿನಿಯೋಗ ಎಂಬಿವು ಕಾಯಕ ತತ್ವ ಪ್ರಧಾನ ಅಂಶಗಳು, ಹರಿಹರ ಈ ಅಂಶಗಳನ್ನು ಇಳೆಯಾಂಡ ಗುಡಿಮಾರನಿಂದ ಅರಿವಾಳ್ತಾಂಡ, ಅತಿಭಕ್ತ, ಮೂಶಲಾರ,

ಮೊನೆಯಿಡುವರು, ಕಡವೂರಕಾರಿ, ಕಲಿಯನಾಯನಾರ ರಗಳೆಗಳಲ್ಲಿ ಅತ್ಯಂತ ಸೂಕ್ಷ್ಮವಾಗಿ ವಿವರಿಸಿದ್ದಾನೆ.

ಇಳೆಯಾಂಡ ಗುಡಿಮಾರನನ್ನು ಕುರಿತು:

ಧರೆಯೆನಿತು ಭೂಮಿ ತನಗುಂಟನಿಂತ ನೆಱೆಬೆಳಿಸಿ

ಉರವಣಿಸಿ ಶರಣತಪಿಗೀವನೆನಿತಕ್ಕೊಳಿಸಿ

ಬಳ್ಳಿತಂ ಸೊಗಸಿತಂ ಶಿವನ ಭಕ್ತರ್ಗೀವ

ನಳ್ಳುದಂ ನವ್ಯಮಂ ಶಿವನ ಭಕ್ತರ್ಗೀವ

ಎಲ್ಲಾ ತೇಜಂಗಳಂ ಶರಣತತೀಗೀವ್ರತಂ

ಎಲ್ಲಾ ಮಾನ್ಯಂಗಳಂ ಭಕ್ತರ್ಗೆ ಸಾರ್ಚುತಂ

ಬಿಟ್ಟಿ ಬೆಸನಂ ಶಿವನ ಭಕ್ತರ್ಗೆ ಮಾಡದಂ"[೫೧]

ಎಂದು ಹೇಳುವಲ್ಲಿ ಕಂಡು ಬರುವ ಸರ್ವಾರ್ಪಣ ಭಾವದ ತೀವ್ರತೆಯನ್ನು ಗಮನಿಸಬೇಕು. ಕೊಂಗುಲಿಯ ಕಲಿಯಾರನಿಗೆ\

ನೇಮಂ . . . . . . . . . ಧೂಪವಿಕ್ಕುವುದು

ಮಾನದ ನೇಮಂ ಶಿವನ ಭಕ್ತರ್ಗೆ ಮಾಡುವುದು"[೫೨]

ನಿಯಮವಾಗಿದ್ದಿತು.

ಒಲಘಾಂಡ ಮೂರ್ತಿಗಳಿಗೆ "ಭಕ್ತರ್ಗೆ ಕೊಡುವುದೇ ವ್ಯವಹಾರ"[೫೩]

ಚೇರ ಚೋಳಂ ಪಾಂಡ್ಯರೆಂಬ ನೃಪರಂ ನಲಿದು

ಚಾರು ಕವಿತಾಮಾರ್ಗದಿಂ ತಣಿಪ ತಾನೊಂದು

ಬಹುಧನವನದರಿಂದ ಅರ್ಜಿಸುವಂತೆ ತೆರಾಗದಿಂ

. . . . . . . . . . . . . . . . . . . .

ಶಿವಭಕ್ತರಂ ಬಹುದಿನಗಳಿಂದ ತಣಿವುತ್ತೆ"[೫೪]

ಕಾಯಕ ನಡೆಸಿದವ ಕಡವೂರಕಾರಿ–ಜಾಲಗಾರ ಅತಿಭಕ್ತನು.

ಆ ಮೀನಂ ಮಾರಿದ ಬಹುಧನದಿಂ

ಸೋಮಧರನ ಭಕ್ತರನತಿ ಮುದದಿಂ

ತೃಪ್ತಿಬಡಿಸುತಂ ಸುಖದಿಂದಿರುತಂ"[೫೫]

ಮೀನು ಹಿಡಿಯುವ ಕಾಯಕವನ್ನು ಮುಂದುವರಿಸಿದನು.

ಅಂದಂದಿನ ಕಾಯಕ ಅಂದೇ ಮಾಡಬೇಕು. ಆ ಕಾಯಕದಿಂದ ಬಂದ ಹಣವನ್ನು ಅಂದೇ ಶಿವಭಕ್ತರಗೆ ಸಲ್ಲಿಸಬೇಕು. ಅಂದಾಗ ಹಣ ಸಂಗ್ರಹ ಬದ್ಧವಾಗಿ ಕಡಿಮೆಯಾಗುವುದು, ಕೂಡಿಟ್ಟರೆ ಹಣದ ಅಮಲು ವ್ಯಕ್ತಿಯನ್ನು ಕೆಡಿಸಬಹುದು. ಕಾಯಕದಿಂದ ಬಂದ ಹಣ ಸಮಾಜದ ಸತ್ಕಾರ್ಯಗಳಿಗೆ ವಿನಿಯೋಗವಾಗಬೇಕು. ಇಲ್ಲಿ ಶಿವಭಕ್ತರು ಸಮಾಜದ ಒಂದು ಅಂಗ, ಕಾರಣ ಶಿವಭಕ್ತರಿಗೆ, ಶಿವಕಾರ್ಯಗಳಿಗೆ ಹಣ ವಿನಿಯೋಗಿಸುವುದೆಂದರೆ ಸಮಾಜ ಕಾರ್ಯಕ್ಕೆ ಬಳಸಿದಂತೆಯೇ ಎಂದು ಹರಿಹರ ಭಾವಿಸಿದಂತೆ ಕಾಣುತ್ತದೆ. ಹೀಗೆ ಕಾಯಕ, ಸಮಾಜದ ಕ್ರಿಯಾ ಶೀಲತೆಗೆ ತಳಹದಿಯಾಗಿ ನಿಲ್ಲಬಲ್ಲದು; ಹಣ ಸಂಗ್ರಹದಿಂದ ಉಂಟಾಗುವ ಆರ್ಥಿಕ ಅಸಮಾನತೆಯನ್ನು ದೂರೀಕರಿಸಬಲ್ಲದು. ಇದರಿಂದ ಆರ್ಥಿಕ ಸಮಾನತೆಯುಳ್ಳ ಸಮಾಜ ರಚನೆಯನ್ನು ಪಡೆಯಲು ಸಾಧ್ಯವಾಗುವುದು ಎಂಬ ಅಂಶಗಳು ವ್ಯಕ್ತವಾಗುತ್ತವೆ.

ವೃತ್ತಿಯಲ್ಲಿ ನಿರತನಾದ ವ್ಯಕ್ತಿಯು ತನು–ಮನ ಶುದ್ಧವಾಗಿರಬೇಕು. ಇವು ಶುದ್ಧವಿಲ್ಲದ ವ್ಯಕ್ತಿಯು ಕೈಕೊಂಡ ವೃತ್ತಿ ಕಾಯಕವೆನಿಸದು. ಹೀಗೆ ಕಾಯಕದಿಂದ ತನು–ಮನ (ಬಹಿರಂಗ–ಅಂತರಂಗ_ ಶುದ್ಧಿಯನ್ನು ಗಳಿಸಿಕೊಳ್ಳಲು ಸಾಧ್ಯ. ಈ ಉಭಯ ಶುದ್ಧಿ ಹೊಂದಿದವ ಮಾತ್ರ

ಶಿವನ ವೃತ್ತಿಯನ್ನು ಹೊಂದಿದ ಮೊನೆಯಿಡುವರು ತನು-ಮನ ಕೈಕೊಂಡ ನೇಶನ್ಯೈನಾರ, ಅಂಕಕಾರ ವೃತ್ತಿಯನ್ನು ಹೊಂದಿದ ಮೊನೆಯಿಡುವರು ತನು-ಮನ ಶುದ್ಧಿಯುಳ್ಳವರು, ಶಿವನನ್ನು ಒರಿಸಿಕೊಂಡವರು. ಒಟ್ಟಿನಲ್ಲಿ ಕಾಯಕ, ದೇಹ-ಮನ-ಬುದ್ಧಿ-ಭಾವಗಳನ್ನು ಪರಿಶುದ್ಧಗೊಳಿಸಿ, ದೇವಮಾರ್ಗಕ್ಕೆ ಸಾಧನವಾಗುತ್ತದೆ ಎಂಬುದು ಹರಿಹರನ ನಿಲುವು.

ಮಾಡುವ ವೃತ್ತಿ ಶಿವಪೂಜೆಗೆ ಸಮಾನ, ಶಿವ, ಕಾಯಕ ಸ್ವರೂಪನು, ಕಾರಣ ಕಾಯಕದಲ್ಲಿಯೇ ಶಿವದರ್ಶನ ಪಡೆಯಲು ಸಾಧ್ಯ. ಆಕಳು ಕಾಯುವ ಅನಾಯನಾರ, ಗಡಿಗೆ ಮಾಡುವ ಗುಂಡಯ್ಯ, ಮೀನು ಹಿಡಿಯುವ ಅತಿಭಕ್ತ ಮೊದಲಾದವರು ತಾವು ಕೈಕೊಂಡ ವೃತ್ತಿ ಶಿವಪೂಜೆಯೆಂದೇ ತಿಳಿದವರು. ಆ ವೃತ್ತಿಯ ಮೂಲಕಲೇ ಶಿವ ಸಾಕ್ಷತ್ಕಾರವನ್ನು ಸಾಧ್ಯವಾಗಿಸಿಕೊಂಡವರು. ಹರಿಹರನು ವೃತ್ತಿ ಹಾಗೂ ಶಿವಪೂಜೆಯಲ್ಲಿ ದೈವವನ್ನು ವೃತ್ತಿ ಶಿವಸಾಕ್ಷತ್ಕಾರಕ್ಕೆ ಹೇಗೆ ಸಾಧನವಾಗಬಲ್ಲದೆಂಬುದನ್ನು ತಿಳಿಸುತ್ತಾನೆ. ಹೀಗೆ "ಮಾಡುವ ಮಾಟದಿಂದ ಮತ್ತೊಂದನರಿಯಲು" ಸಾಧ್ಯವೆಂಬುದನ್ನು ಅನೇಕ ರಗಳೆಗಳ ಮೂಲಕ ತಿಳಿಯ ಪಡಿಸುತ್ತಾನೆ.

ಆಧಾರಮೆಯಾಧಾರಮವಾಗಿದೆ.

ಮಗೆ ಘಟ್ಟ ಕ್ರಮೆ ಚಕ್ರಮದಾಗಿರೆ

ಸೊಗಯಿಪ ನಾಭಿಯೇ ನಾಭಿಯದಾಗಿರೆ

ಕನಸಿನ ಕಾಯಂ ಮೃತ್ತಿಕೆಯಾಗಿದೆ.

. . . . . . . . . . . . . . . ..

. . . . . . .  . . . . . . .

ಸಂತತ ಹೊರಗಣ ಮಾಟಮದೊಪ್ಪಲು[೫೬]

ಎಂಬುದು ಕುಂಬಾರ ಗುಂಡಯ್ಯನು ಗಡಿಗೆ ಮಾಡುವ ವೃತ್ತಿಯಲ್ಲಿ ಸಾಧಿಸಿದ ಆಧ್ಯಾತ್ಮಿಕ ಸಾಧನೆಯನ್ನು ತಿಳಿಸಿಕೊಡುತ್ತದೆ. ಇದು ಕುಂಬಾರ ಗುಂಡಯ್ಯನ ಮನಸ್ಸು ಯೋಗಿಗಳ ಸಾಧನೆಯಲ್ಲಿ ನಿರತವಾದ ಜೀವಂತ ಚಿತ್ರಣ ಇಲ್ಲಿ ಕಾಯಕದ ವಿವರಗಳನ್ನೇ ಆಧ್ಯಾತ್ಮಿಕ ಅನುಭವವನ್ನು ವಿವರಿಸುವಂತೆ ಮೇಳವಿಸಿಕೊಂಡ ರೀತಿ ಚನ್ನಾಗಿ ಮೂಡಿಬಂದಿದೆ. ಹೀಗೆ ಬಹಿರಂಗದಲ್ಲಿ ವೃತ್ತಿ ಕೈಗೊಂಡಿದ್ದರೂ

ಅದನ್ನು ಅಂತರಂಗದ ವಿಕಾಸಕ್ಕಾಗಿ ಹೊಂದಿಕೊಂಡಿರುವ ರೀತಿಯನ್ನು ಹರಿಹರ ಸ್ಫುಟವಾಗಿ ಬಿಡಿಸಿ ತೋರಿಸಿದ್ದಾನೆ. ದಂಡನಾಯಕ ಕೇಶಿರಾಜ ಹಾಗೂ ಬಸವಣ್ಣನವರು ಕಾಯಕ ಶಕ್ತಿಯ ಬಲದಿಂದ ರಾಜಶಕ್ತಿ (ಪೆರ್ಮಾಡಿ, ಬಿಜ್ಜಳ) ಮಣಿಯವಂತೆ ಮಾಡಿದುದನ್ನು ಕೋಪಾಂಧಂಗೆ ಕಾಮಾನಳಿದಗ್ಧಂಗೆ, ಲೋಭ ಚಿತ್ತಂಗೆ ದುರ್ಮೋಹಿಗೆ ದುರ್ಗುಣಿಗೆ ದುರಾಚಾರಿ ಗೈಶ್ಯೈರ್ಯ ತಮಃ ಪಟಲಂ ಕವಿದ ದುರ್ದರ ದುಶ್ರೀಲಂಗೆ ದೋಷಿಗೆ ಪಿರಿಯನಜೆಯದ ನರಕಜೀವಿಗೆ ಪೂಜ್ಯರ ನಜೆಯದ ಪುಣ್ಯಹೀನಮಗೆ ಕರುಣಿ ನಿಮ್ಮಡಿಗಳ"[೫೭] ಎಂದು ಪೆರ್ಮಾಡಿರಾಯನು ಕೇಶಿರಾಜನಿಗೆ ಶರಣಾಗತನಾಗುವಲ್ಲಿಯೂ ಬಿಜ್ಜಳಂ ಧರೆಗಿಳಿದು ಜೀವನ್ಮೃತನಾಗಿ ಬಸವನ ಚರಣದೊಳ್ ದೊಪ್ಪನೆ ಬಿದ್ದ[೫೮] ಎನ್ನುವಲ್ಲಿಯೂ ಕಾಣುತ್ತೇವೆ.

ಕೈಕೊಳ್ಳುವ ವೃತ್ತಿ ದೈವೀಸಾಧನೆಗೆ ಆತಂಕವಾಗಬಾರದೆಂಬುದನ್ನು ಆನಾಯನರ ರಗಳೆಯಲ್ಲಿ ವ್ಯಕ್ತಿ ಮಾಡುವ ಹೀನವೃತ್ತಿ ದೇವನನ್ನು ಒಲಿಸಿಕೊಳ್ಳುವ ಸಾಧನವಾಗಬಲ್ಲದೆಂಬುದನ್ನು ಕಣ್ಣಪ್ಪನ ರಗಳೆಯಲ್ಲಿ ಹರಿಹರ ವಿವರಿಸಿದ್ದಾನೆ. ಆಕಳು ಕಾಯುವ ನಾಯನಾರ, ಒಕ್ಕಲುಮಗ ಇಳೆಯಾಂಡ ಗುಡಿಮಾರ, ಬೇಡರ ಕಣ್ಣಪ್ಪ, ಮೀನುಗಾರ ಅತಿಭಕ್ತ, ಭತ್ತಕೊಯ್ಯುವ ಅರಿವಾಳ್ತಾಂಡ, ಬಟ್ಟೆ ಒಗೆಯುವ ತಿರುಕುರುಂಪೆ ತೊಂಡ, ಕುಂಬಾರ ಗುಂಡಯ್ಯ, ಗಾಣಿಗ ಕಲಿಯ ನಾಯನಾರ, ಅಂಕಕಾರ ಮೊನೆಯಿಡುವರು, ಸೇನಾಧಿಪತಿ ಕೊಲ್ಲುಲಿಯಾಂಡ, ನೇಕಾರ ನೇಶನ್ನೈನಾರ, ಮಾದರ ಚೆನ್ನಯ್ಯ, ದಂಡನಾಯಕ ಕೇಶಿರಾಜ, ಬಸವಣ್ಣ ಮೊದಲಾದವರ ಕಾಯಕ ಜೀವನವನ್ನು ತನ್ನ ಜೀವನದರ್ಶನದ ಹಿನ್ನೆಲೆಯಲ್ಲಿ ವಿವರಿಸಿದ್ದಾನೆ. ಈತ ಕೇವಲ ಕವಿಯಲ್ಲ, ಭಕ್ತಕವಿ, ಹೋರಾಟಪ್ರವೃತ್ತಿಯ ಕಲಿ, ಕಾರಣ ಭಕ್ತನಾದವನು ಅನುಸರಿಸುವ ಕಾಯಕ ಜೀವನದ ಅನುಭವ, ತಿಳಿವಳಿಕೆ ಅವನಿಗಿದೆ. ಹೀಗಾಗಿ ಅವನು ಹೇಳುವ ಕಾಯಕ ತತ್ವದಲ್ಲಿ ಜೀವಂತಿಕೆ ಅರ್ಥವಂತಿಕೆ ಕಂಡುಬರುತ್ತದೆ. ವಿಚಾರ, ಅನುಭವ ತತ್ವಗಳ ಅಭಿವ್ಯಕ್ತಿಗಾಗಿ ಅವನು ಆರಿಸಿಕೊಂಡ ವಸ್ತುವಿನ ಆಯ್ಕೆಯೂ ತುಂಬಾ ಔಚಿತ್ಯ ಪೂರ್ಣವಾಗಿದೆ. ರಗಳೆಗಳಲ್ಲಿ ಶಿವಶರಣರ ಚರಿತ್ರೆಗಳನ್ನು ರಚಿಸಿ ಅವರ ಕಾಯಕ ತತ್ವವನ್ನು ವಿವರಿಸಿದ್ದಾನೆ. ಆದರೆ, ಅವನು ಹೇಳಿದ ಕಾಯಕ ತತ್ವವು ಅಂದಿನ ರಾಜಕೀಯ, ಸಾಮಾಜಿಕ ಜೀವನದ ಮೇಲೆ ಎಂಥ ಪರಿಣಾಮ ಬೀರಿದ್ದಿತು ? ಸಮರ್ಪಕವಾಗಿ ಈ ತತ್ವ ಅರ್ಥವಂತಿಕೆಯನ್ನು ಪಡೆದಿದ್ದಿತೆ ? ಎಂಬ ವಿವರಗಳು ದೊರೆಯುವುದಿಲ್ಲ, ಹೀಗಾಗಿ ಶಿವಶರಣರ ಕಾಯಕ ಧರ್ಮ, ನಿಷ್ಪಕ್ಷಪಾತ ಶಿವಭಕ್ತಿ ಸೇವೆ, ಆ ಮೂಲಕ ಹೋರಾಟದ ಮನೋಧರ್ಮ ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಶಿಸುವ ಪ್ರಯತ್ನ ಮಾಡಲಾಗಿದೆ.

**ಅಡಿಟಿಪ್ಪಣಿ**

೧. ಶಂಕರರಾವ್ ಚ.ನ, ಸಮಾಜಶಾಸ್ತ್ರ ಪರಿಚಯ ಪುಟ–೭೫

೨. ಶಂಕರರಾವ್ ಚ.ನ., ಪೂರ್ವೋಕ್ತ ಪುಟ–೭೬

೩. ಶಂಕರರಾವ್ ಚ.ನ., ಭಾರತೀಯ ಸಮಾಜ ಸಂರಚನೆ, ಪರಿವರ್ತನೆ ಪುಟ–೮೦

೪. ಕಲಬುರ್ಗಿ ಎಂ.ಎಂ., (ಸಂ) ಕೆಂಭಾವಿ ಬೋಗಣ್ಣನ ರಗಳೆ ಪುಟ–೨೩೩

೫. ಕಲಬುರ್ಗಿ ಎಂ.ಎಂ., ಪೂರ್ವೋಕ್ತ ಬಸವೇಶ್ವರ ದೇವರ ರಗಳೆ ಪುಟ–೬೫

೬. ಕಲಬುರ್ಗಿ ಎಂ.ಎಂ., ಮಾರ್ಗ ಸಂ.೧ ಪುಟ–೨೭೫

೭. ಕಲಬುರ್ಗಿ ಎಂ.ಎಂ., ಪೂರ್ವೋಕ್ತ ಪುಟ–೧೭೧–೧೭೨

೮. ಬಸವೇಶ್ವರ ದೇವರ ರಗಳೆ ಪುಟ–೫೧

೯. ಶಂಕರದಾಸಿಮಯ್ಯನ ರಗಳೆ ಪುಟ–೨೫೪

೧೦. ವೈಜಕವ್ವೆ ರಗಳೆ, ಮಾರುಡಿಗೆ ನಾಚಿತಂದೆ ರಗಳೆ; ಕೋವೂರ
ಬೊಮ್ಮಯ್ಯನ ರಗಳೆ (ಮೂರು ರಗಳೆಗಳ ವಿವರವಿದೆ).

೧೧. ಆದಯ್ಯನ ರಗಳೆ ಪುಟ–೩೩೪

೧೨. ಕೋವೂರ ಬೊಮ್ಮಯ್ಯನ ರಗಳೆ, ಪುಟ–೩೬೭,
ಆದಯ್ಯನ ರಗಳೆ, ಪುಟ–೩೨೩
ಏಕಾಂತ ರಾಮಯ್ಯನ ರಗಳೆ, ಪುಟ–೩೫೧

೧೩. ಏಕಾಂತ ರಾಮಯ್ಯನ ರಗಳೆ, ಪುಟ–೩೫೨–೩೪೩

೧೪. ಸುಂಕಾಪುರ ಎಂ.ಎಸ್.; ಮಹಾಕವಿ ಹಂಪೆಯ ಹರಿಹರ
ದೇವ ಕೃತ ನೂತನ ಪುರಾತನರ ರಗಳೆ ಪುಟ–೪೯೫

೧೫. ಸುಂಕಾಪುರ ಎಂ.ಎಸ್.; ಪೂರ್ವೋಕ್ತ ಪುಟ–೪೪

೧೬. ಸುಂಕಾಪುರ ಎಂ.ಎಸ್.; ಮಹಾಕವಿ ಹಂಪೆಯ ಹರಿಹರ
ದೇವಕೃತ ಶಿವಭಕ್ತಿ ಮಹಿಮಾ ರಗಳೆ, ಪುಟ–೯೦

೧೭. ಸುಂಕಾಪುರ ಎಂ.ಎಸ್., ಹಂಪೆಯ ಹರಿಹರದೇವ ಕೃತ
ಶಿವಭಕ್ತಿ ಮಹಿಮಾ ರಗಳೆ, ಪುಟ-೮೭

೧೮. ಸುಂಕಾಪುರ ಎಂ.ಎಸ್., ಹಂಪೆಯ ಹರಿಹರ ದೇವಕೃತ
ಶಿವಭಕ್ತಿ ಮಹಿಮಾ ರಗಳೆಗಳು, ಪುಟ-೮೮

೧೯. ಸುಂಕಾಪುರ ಎಂ.ಎಸ್., ಹಂಪೆಯ ಮಹಾಕವಿ ಹಂಪೆಯ ಹರಿಹರದೇವ
ಕೃತ ಶಿವಭಕ್ತಿ ಮಾಹಿಮಾ ರಗಳೆಗಳು, ಪುಟ, ೮೭

೨೦. ದೇವಿರಪ್ಪ ಎಚ್., ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ,
ಪುಟ-೧೩೭

೨೧. ಹೆಗ್ಗಡೆ ಎಲ್.ಆರ್., ಕಾವ್ಯ ವ್ಯಾಸಂಗ, ಪಟು-೧೦೩

೨೨. ಹೆಗ್ಗಡೆ ಎಲ್.ಆರ್., ಪೂರ್ವೋಕ್ತ, ಪುಟ-೧೦೪

೨೩. ಹೆಗ್ಗಡೆ ಎಲ್.ಆರ್., ಕಾವ್ಯವ್ಯಾಸಂಗ, ಪುಟ-೧೦೪

೨೪. ಸುಂಕಾಪುರ ಎಂ.ಎಸ್., ಮಹಾಕವಿ ಹಂಪೆಯ ಹರಿಹರ
ದೇವ ಕೃತ ನೂತನ ಪುರಾತನರ ರಗಳೆಗಳು, ಪುಟ-೩೨೨.

೨೫. ಸುಂಕಾಪುರ ಎಂ.ಎಸ್., ಮಹಾಕವಿ ಹಂಪೆಯ ಹರಿಹರ ದೇವ
ಕೃತ ನೂತನ ಪುರಾತನರ ರಗಳೆಗಳು, ಪುಟ-೩೨೨.

೨೬. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೩೪೩

೨೭. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೩೪೪

೨೮. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೩೪೭

೨೯. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೩೫೩

೩೦. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೩೪

೩೧. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೩೪

೩೨. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೩೪೩

೩೩. ಪುಸ್ತಕ ಲೋಕ, ಪ್ರಕಟಣೆ , ಕನ್ನಡ ಪುಸ್ತಕ ಪ್ರಾಧಿಕಾರ, ಸಂಪುಟ-೨, ಸಂಚಿಕೆ ೩, ೨೦೦೭, ಪುಟ-೧೦, (ಕಲಬುರ್ಗಿ .ಎಂ.ಎಂ.ಅವರಿಗೆ ಮಾರ್ಗ ಸಂಪುಟ - ೪ ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದಾಗ ರಹಮತ್ ತರಿ ಕೇರಿಯವರು ನಡೆಸಿದ ಸಂದರ್ಶನದಲ್ಲಿ ಹರಿಹರ ಸಂಘರ್ಷ ಕವಿ ಎಂದು ಒಪ್ಪಿಕೊಂಡಿದ್ದಾರೆ.)

೩೪. ಸುಂಕಾಪುರ ಎಂ.ಎಸ್., ಮಹಾಕವಿ ಹಂಪೆಯ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು, ಪುಟ-೨೪೩

೩೫. ಸುಂಕಾಪುರ ಎಂ.ಎಸ್., ಮಹಾಕವಿ ಹಂಪೆ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು, ಪುಟ-೨೪೫

೩೬. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೪೮

೩೭. ಸುಂಕಾಪುರ ಎಂ.ಎಸ್., ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನರ ರಗಳೆಗಳು, ಪುಟ-೨೫೩

೩೮. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೫೪

೩೯. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೫೫

೪೦. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೫೭

೪೧. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೬

೪೨. ತೆಲುಗು ಜೊಮ್ಮಯ್ಯನ ರಗಳೆ, ಪಟು-೩೮೭-೩೬೩

೪೩. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೨೪

೪೪. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೭೦

೪೫. ಬಸವೇಶ್ವರ ದೇವರ ರಗಳೆ, ಪಟು-೬೫

೪೬. ಅದೇ ರಗಳೆ ಪುಟ-೭೫

೪೭. ಕೇಶಿರಾಜ ದಣ್ಣಾಯಕರ ರಗಳೆ, ಪುಟ-೧೮೮-೧೮೯

೪೮. ತಿಪ್ಪೇರುದ್ರಸ್ವಾಮಿ ಎಚ್.,-ವಚನಗಳಲ್ಲಿ ವೀರಶೈವ ಧರ್ಮ, ಪುಟ-೩೧೦

೪೯. ಹಿರೇಮಠ ಆರ್.ಸಿ., ಪುರಾತನರ ರಗಳೆಗಳು, ಪುಟ-೩೩೭, ೫೪೩, ೨೫೩.

೫೦. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ-೩೭೬

೫೧. ಹಿರೇಮಠ ಆರ್.ಸಿ., ನೂತನ ಪುರಾತನರ ರಗಳೆಗಳು, ಪುಟ-೫೪-೫೬

೫೨. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ-೨೮೫

೫೩. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ-೫೪೬

೫೪. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ-೩೨೬

೫೫. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ-೫೧೪

೫೬. ಹಳಕಟ್ಟಿ ಫ.ಗು., ಹರಿಹರನ ರಗಳೆಗಳು, ಪುಟ-೨೫೨

೫೭. ಸುಂಕಾಪುರ ಎಂ.ಎಸ್., ನೂತನ ಪುರಾತನರ ರಗಳೆಗಳು, ಪುಟ-೧೯೩

೫೮. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ-೬೫

## ಅಧ್ಯಾಯ – ೩

# ಶೈವ ಚಳವಳಿ ಮತ್ತು ಹರಿಹರ

ಧರ್ಮದಲ್ಲಿ ಕರ್ಮಕಾಂಡ ಬೆಳೆದು ಆಚಾರ, ಸಂಪ್ರದಾಯಗಳು ಅತಿಯಾದಾಗ ದೇವರು ಮಾರುಕಟ್ಟೆ ವಸ್ತುವಾಗುತ್ತಾನೆ. ಧರ್ಮ ಬಂಡವಾಳವಾಗುತ್ತದೆ. ಬಾಹ್ಯ ಆಚಾರಕ್ಕೆ, ಸಂಪ್ರದಾಯಗಳಿಗೆ ಬೆಲೆ ಬಂದಾಗ ಧರ್ಮ ಯಾಂತ್ರಿಕವಾಗುತ್ತದೆ. ಹೀಗೆ ಧರ್ಮ ಅವನತಿಯ ಹಾದಿ ಹಿಡಿದಾಗ ಐತಿಹ್ಯ, ಕಟ್ಟುಕತೆ, ಪುರಾಣ, ಮತಭ್ರಾಂತಿ, ಅನ್ಯಮತ ದ್ವೇಷ ಭಾವನೆಗಳು ಬೆಳೆಯುತ್ತ ಹೋಗುತ್ತವೆ. ಆಗ ಅದರ ಪರಿಷ್ಕಾರಕ್ಕಾಗಿ ಭಕ್ತಿ ಚಳವಳಿಗಳು ಉದಯವಾಗುತ್ತವೆ.

"ಭಕ್ತಿ ಎಂದರೆ ದೇವರಲ್ಲಿ ಪ್ರೇಮ, 'ಭಜ್ ಸೇವಾಯಾಂ' ಧಾತುವಿನಿಂದ ಈ ಶಬ್ದ ಉತ್ಪತ್ತಿಯಾಗಿದೆ. ಇನ್ನು ಚಳವಳಿ ಎಂಬ ಮಾತು 'ಚಲನ, ವಲನ' ಎಂಬ ಸಂಸ್ಕೃತ ಶಬ್ದದ ತದ್ಭವವಾಗಿದೆ. ಇಂಗ್ಲಿಷ್‌ನಲ್ಲಿ Movementes ಎಂಬುದಕ್ಕೆ ಸಮಾನ ಪದವೂ ಆಗಿದೆ. ಭಕ್ತಿ ಚಳವಳಿ ಒಂದು ನೆಲೆಯಿಂದ ವಿಕಾಸದ ಕಡೆಗೆ ಮುಂದುವರಿಯುವುದು, ಧರ್ಮದಲ್ಲಿ ಕ್ರಿಯಾಶೀಲತೆ, ಹೊಸ ವಿಚಾರಧಾರೆ, ಹೊಸ ಹೊಸ ಪ್ರಯೋಗಗಳು ನಡೆಯುವುದಕ್ಕೆ ಭಕ್ತಿ ಚಳವಳಿ ಎಂದು ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ."[೧] ಭಕ್ತಿ ಚಳವಳಿಗಳು ಜನಜೀವನದ ರೂಢಮೂಲ ಪದ್ಧತಿಗಳನ್ನು ಪರಿಷ್ಕರಿಸುವ, ಸಮಾಜವನ್ನು ಚಲನಶೀಲವಾಗಿಸುವ ಸಂಕೇತಗಳಾಗಲಿವೆ. ಅಲ್ಲದೆ ಸಾಮಾಜಿಕ ಪರಿವರ್ತನೆಯ ವಿವಿಧ ಕಾಳಜಿಗಳನ್ನು ಪ್ರತಿಬಿಂಬಿಸುತ್ತವೆ. ಒಂದು ಅರ್ಥದಲ್ಲಿ ಇವು ಪ್ರತಿಭಟನಾ ಚಳವಳಿಗಳು, ಜಡ ಧಾರ್ಮಿಕ ಅಂಶಗಳನ್ನು ಪ್ರಶ್ನಿಸುವ, ತಿರಸ್ಕರಿಸುವ ಗುಣವನ್ನು ಭಕ್ತಿ ಚಳವಳಿಯಲ್ಲಿ ಇದುವರೆಗೂ ಕಾಣುತ್ತ ಬಂದಿದ್ದೇವೆ.

ಭಕ್ತಿ ಚಳವಳಿಗಳಿಂದ ಪರೋಕ್ಷವಾಗಿ ಸಮಾಜ ಸುಧಾರಣೆಯಾಗಿದೆ ಎನ್ನುವುದಕ್ಕೆ ಇತಿಹಾಸ ಸಾಕ್ಷಿಯಾಗಿದೆ. ಮೊದಲು ಭಕ್ತಿ ಚಳವಳಿಗಳು ಮನುಷ್ಯ ದೈವದಲ್ಲಿ ನಿಷ್ಠೆಯಿರಿಸಿ ಸಂಸಾರದಿಂದ ಮುಕ್ತಿಪಡೆಯದೇ, ನೀತಿ, ನಿಯಮಗಳ ಶುದ್ಧ ಜೀವನ ನಡೆಸಬೇಕು, ಶುದ್ಧ ಜೀವನ ನಡೆಸಿದವನು ದೈವಾನುಗ್ರಹಕ್ಕೆ, ಮುಕ್ತಿಗೆ ಅರ್ಹನಲ್ಲ ಎನ್ನುವ ಭಾವನೆ ಶ್ರದ್ಧೆಯಿಂದಲೇ ಆರಂಭವಾದ ನಿದರ್ಶನಗಳಿವೆ.

**ಚಳವಳಿ ಇತಿಹಾಸ**

ದಕ್ಷಿಣ ಭಾರತದಲ್ಲಿ ಭಕ್ತಿ ಚಳವಳಿ ಆರಂಭ ತಮಿಳುನಾಡಿನಲ್ಲಿ ಅದಂತೆ ಕಾಣುತ್ತದೆ. ಕ್ರಿ.ಶ. ೨ನೇ ಶತಮಾನದಲ್ಲಿ ಹುಟ್ಟಿಕೊಂಡ ಆಳ್ವಾರ್ ಮತ್ತು ನಾಯನಾರ್ ಚಳವಳಿಗಳೇ ಸಾಕ್ಷಿ. ಅನಂತರ ಕರ್ನಾಟಕದಲ್ಲಿ ಶರಣರ, ಹರಿದಾಸರ ಚಳವಳಿ, ಮಹಾರಾಷ್ಟ್ರದಲ್ಲಿ ಭಾಗವತ ಚಳವಳಿ, ಪೂರ್ವ ಭಾರತದಲ್ಲಿ ಚೈತನ್ಯ ಪಂಥೀಯರ ಚಳವಳಿ, ಉತ್ತರ ಹಿಂದೂಸ್ತಾನದಲ್ಲಿ ತುಳವೇ- ಕಬೀರರ ಚಳವಳಿ, ಅಸ್ಸಾಮಿನಲ್ಲಿ ಶಂಕರದೇವನ ಚಳವಳಿ, ಪಂಜಾಬ್‌ನಲ್ಲಿ ಸಿಖ್‌ಪಂಥದ ಚಳವಳಿ, ಗುಜರಾತ್, ರಾಜಸ್ತಾನದಲ್ಲಿ ವೈಷ್ಣವ ಪಂಥದ ಚಳವಳಿ, ಮೀರಾಬಾಯಿ ಮತ್ತು ನರಸಿಂಹ ಮೆಹ್ತಾರ ಚಳವಳಿ ಹೀಗೆ ಭಾರತದಾದ್ಯಂತ ಭಕ್ತಿ ಚಳವಳಿಗಳು ನಡೆದಿರುವುದು ಚರಿತ್ರೆಯಿಂದ ತಿಳಿದು ಬರುತ್ತದೆ.

**ಧಾರ್ಮಿಕ, ಸಾಮಾಜಿಕ, ರಾಜಕೀಯ ಸಂದರ್ಭ**

ದಕ್ಷಿಣ ಭಾರತದಲ್ಲಿ ಬೇರೆ ಬೇರೆ ಮತ, ಪಂಥಗಳಲ್ಲಿ ಚರ್ಚೆ, ಘರ್ಷಣೆಗಳು ಆರಂಭವಾದವು. ಶೈವ ಭಕ್ತಿಗೆ ಒಲಿದ ದ್ರಾವಿಡ ಪ್ರದೇಶಗಳು ವಿಷ್ಣು ಭಕ್ತಿಗೆ ಹೆಚ್ಚು ಪ್ರೋತ್ಸಾಹ ಕೊಡಲಿಲ್ಲ. ಒಂದು ಕಾಲದಲ್ಲಿ ವೈಷ್ಣವ-ಆಳ್ವಾರರ ಬೀಡಾಗಿದ್ದ ತಮಿಳು ದೇಶದ ಪರಂಪರೆಯಲ್ಲಿ ಶ್ರೀರಾಮಾನುಜರು ೧೨ನೇ ಶತಮಾನದಲ್ಲಿ ವೈಷ್ಣವ ಧರ್ಮ ಪ್ರಚಾರ ಮಾಡಿದರು. ಅಲ್ಲಿ ಪ್ರೋತ್ಸಾಹ ಸಿಗದೆ ಅವರು ತಮಿಳು ನಾಡಿನಿಂದ ಕರ್ನಾಟಕಕ್ಕೆ ಬಂದು ನೆಲೆಸಿದರು. ಕ್ರಮೇಣ ವೈಷ್ಣವ ಆಚಾರ್ಯರು ವಿಜಯನಗರ ಅರಸು ಮನೆತನಗಳಿಗೆ ರಾಜರುಗಳಾಗಿ ವಿಷ್ಣು ಭಕ್ತಿ ಪ್ರಚಾರ ಮಾಡಿದರು. "ವೈಷ್ಣವ ಮತದ ಆಧಾರ ಸ್ತಂಭಗಳಂತಿದ್ದ ಆಳ್ವಾರರು, ವೈಷ್ಣವ ಭಕ್ತಿ ಪ್ರಚಾರ ಮಾಡಿದರು. ಈ ಮಧ್ಯೆ ಬೌದ್ಧ-ಜೈನಧರ್ಮಗಳು ಜನಾಶ್ರಯ-ರಾಜಾಶ್ರಯವಿಲ್ಲದೆ ಸೊರಗುತ್ತಿದ್ದವು. ಚೋಳರಾಜರ ಆಶ್ರಯದಲ್ಲಿ ಶೈವಧರ್ಮದ ಪ್ರಭಾವ ಮೇಲುಗೈಯಾಯಿತು. ದಕ್ಷಿಣ ಭಾರತದಲ್ಲಿ ಧರ್ಮ ಕ್ಷೇತ್ರದಲ್ಲಿ ಶೈವ-ವೈಷ್ಣವರಿಬ್ಬರೇ ಸ್ಪರ್ಧಿಗಳಾದರು. ಮಧ್ಯಯುಗದ ಭಾರತ (ಸುಮಾರು ೧೨-೧೫ನೇ ಶತಮಾನದವರೆಗೆ) ಭಕ್ತಿ ಆಂದೋಲನಗಳಿಗೆ ಸಾಮಾಜಿಕ ಸ್ವರೂಪ ನೀಡಿತು.

ಸಂಸ್ಕೃತ ದೇವ ಭಾಷೆಯಾಗಿ ಅದರಿಂದ ಶ್ರೀ ಸಾಮಾನ್ಯರು ವಂಚಿತರಾಗಿದ್ದರು. ಆದ್ದರಿಂದಲೇ ಭಕ್ತಿ ಚಳವಳಿಗೆ ಪ್ರಾಕೃತ ಭಾಷೆಗಳು ಧಾರ್ಮಿಕ ಶಿಕ್ಷಣದ ಮಾಧ್ಯಮಗಳಾದವು"[೨]. ಹೀಗಾಗಿ ವೈದಿಕ ಮತಗಳು ಶುಷ್ಕ ಆಚಾರದ ಬೆನ್ನುಹತ್ತಿ ನೀರಸವಾಗಿದ್ದವು. "ಡಾಂಭಿಕತೆ, ಅಂಧವಿಶ್ವಾಸ, ಪುರೋಹಿತರ ಶೋಷಣೆಯಿಂದ ತುಂಬಿದ್ದ ವೈದಿಕ ಪಂಥಗಳಿಂದ ರೋಸಿ ಹೋಗಿದ್ದ ಜನಸಮೂಹದಿಂದ ಪ್ರತಿಭಟನೆ ವ್ಯಕ್ತವಾಯಿತು. ಹೀಗಾಗಿ ಎಲ್ಲೆಡೆ ಚಳವಳಿ ಹುಟ್ಟಿತು."[೩]

## ಶೈವ ಚಳವಳಿ ಇತಿಹಾಸ

ಭಾರತದಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಭಕ್ತಿಪಂಥಗಳೆಂದರೆ ಶೈವ ಪಂಥ ಮತ್ತು ವೈಷ್ಣವ ಪಂಥ, ಇವೆರಡು ಪಂಥಗಳು ಮೊದಲು ತಮಿಳುನಾಡಿನಲ್ಲಿ ಪ್ರಾರಂಭವಾಗಿದ್ದು. **ಅದರಲ್ಲಿ ತಮಿಳು ಶೈವಪಂಥದಲ್ಲಿ ಎರಡು ವಿಧಗಳಿವೆ. ಅವು ಇಂತಿವೆ.**

೧. ನಾಯನಾರರ ಶೈವಪಂಥ

೨. ಅಳ್ವಾರರ ವೈಷ್ಣವ ಪಂಥ

## ನಾಯನಾರ್ ಶೈವಪಂಥ

ಕ್ರಿ.ಶ. ೨ ರಿಂದ ೫ನೇ ಶತಮಾನದವರೆಗೆ ಇವೆರಡು ಪಂಥಗಳಿದ್ದವು. ವೈಷ್ಣವ ಭಕ್ತಿಪಂಥ ರಾಮಾನುಜರ ವೈಷ್ಣವ ಮತಕ್ಕೆ ಮೂಲ ಪ್ರೇರಣೆ ಯಾಯಿತು. "ದಕ್ಷಿಣ ಭಾರತದಲ್ಲಿ ಶೈವ ಭಕ್ತಿ ಪಂಥವು ಅರವತ್ತುಮೂರು ಪುರಾತನದಿಂದ ಆರಂಭವಾಗುತ್ತದೆ. ಶೈವಭಕ್ತರನ್ನು ನಾಯನಾರ್ ಎಂದು ಕರೆಯುತ್ತಾರೆ. ಇವರಲ್ಲಿ ಅಪ್ಪಾರ್, ತಿರುಜ್ಞಾನ ಸಂಬಂಧಿ ಸುಂದರ ನಂಬಿ, ತಿರುವಾಚಕಂ, ಮಾಣಿಕ್ಯವಾಚಕರ್ ಇವರು ಮುಖ್ಯರು. ಇದರಲ್ಲಿ ಬ್ರಾಹ್ಮಣರಿಂದ ಹರಿಜನರವರೆಗೆ ಎಲ್ಲಾ ಜಾತಿಯ ಜನರಿದ್ದರೆಂದು ತಿಳಿದು ಬರುತ್ತದೆ.

## ವೈಷ್ಣವ ಪಂಥದ ಅಳ್ವಾರರು

('ಆಳ್ವಾರ್', ಎಂದರೆ ಭಗವಂತನಲ್ಲಿ ಗಾಢ ಭಕ್ತಿಯುಳ್ಳವರು ಎಂದರ್ಥ) ಈ ಪಂಥದಲ್ಲಿ ಹನ್ನೆರಡು ಮಂದಿಯಿದ್ದು, ಇವರು ತಮ್ಮ ಆಧ್ಯಾತ್ಮಿಕ ಅನುಭವವನ್ನು ಮಧುರವಾದ ಗೀತೆಗಳ ರೂಪದಲ್ಲಿ ಹಾಡಿದರು. ಈ ಗೀತೆಗಳು ತಮಿಳು ಭಾಷೆಯಲ್ಲಿವೆ. ಆಳ್ವಾರರು ಪಾಂಡ್ಯ, ಚೋಳ,

ಕೇರಳ ನಾಡಿನಲ್ಲಿ ವಿಷ್ಣುಭಕ್ತಿ ಪ್ರಸಾರ ಮಾಡಿದರು. ಪೊಗೈಯ್ ಅಳ್ವಾರ್, ಪೊದ್ದತ್ ಅಳ್ವಾರ್, ಪೇಯಾಳ್ವಾರ್, ತಿರುಮಳಸ್ಯೆ ಆಳ್ವಾರ್, ನಮ್ಮಾಳ್ವಾರ್, ಮಧುರಕವಿ ಆಳ್ವಾರ್, ಕುಲಶೇಖರ ಅಳ್ವಾರ್, ತಿರುಪ್ಪಾಣಿ ಅಳ್ವಾರ್, ತಿರುಮುಂಗೈ ಆಳ್ವಾರ್ ಇತ್ಯಾದಿ ಇವರಲ್ಲೂ ಎಲ್ಲ ಜಾತಿಯವರಿದ್ದರು ಎಂಬ ವಿವರವಿದೆ.

ಒಬ್ಬರು ರಾಜರು, ಒಬ್ಬಾಕೆ ಸ್ತ್ರೀ, ಒಬ್ಬ ಪಂಚಮರು, ಒಬ್ಬರು ಕಳ್ಳರ ಕುಲಕ್ಕೆ ಸೇರಿದವರು, ಇನ್ನೊಬ್ಬರು ಮ್ಲೇಚ್ಛರು, ಮೂವರು ಬ್ರಾಹ್ಮಣರಿದ್ದರು. ಇವರೆಲ್ಲರ ಉದ್ದೇಶ ಜನರಲ್ಲಿ ವೈಷ್ಣವ ಭಕ್ತಿಯನ್ನು ಮೂಡಿಸುವುದು. ಆಧ್ಯಾತ್ಮಿಕ ಜ್ಞಾನವನ್ನು ಸುತ್ತಲಿನ ಜನಕ್ಕೆ ಅರ್ಥವಾಗುವಂತೆ ಇವರೆಲ್ಲರೂ ತಮಿಳಿನಲ್ಲಿ ಹಾಡಿದ್ದಾರೆ. ಅವರ ಸೂಕ್ತಿಗಳಿಗೆ 'ತಮಿಳು ವೇದ' ಎಂದು ಕರೆಯುತ್ತಾರೆ. ಇವರ ಜೀವನ ಚರಿತ್ರೆ ಅರಿಯಲು 'ದಿವ್ಯ ಸೂರಿ ಚರಿತ' 'ಪ್ರಸನ್ನಾಮೃತ'[೮] ಮತ್ತು ಆಳ್ವಾರರ ಉಪದೇಶಗಳನ್ನೊಳಗೊಂಡ ನಾಲ್ಕು ಸಾವಿರ ಪ್ರಬಂಧಗಳು ಆಧಾರವಾಗಿವೆ.[೯] ಆಳ್ವಾರರುಗಳಲ್ಲಿ 'ಅಂಡಾಳ್' ಎಂದು ಖ್ಯಾತಳಾದ ಗೋದಾದೇವಿಯೆಂಬ ವಿರಾಗಿಣಿ, ಶ್ರೀರಂಗನಾಥನ ಪರಮಭಕ್ತಗಳಾಗಿದ್ದಳು. ಅಂಡಾಳ್ ರಚಿಸಿದ 'ತಿರುಪ್ಪಾ ವೈ' ಮೂವತ್ತು ಗೀತೆಗಳ ಸಂಗ್ರಹವಾಗಿದೆ. ಆಳ್ವಾರರಲ್ಲಿ ಗಮನಾರ್ಹವಾದ ಮತ್ತೊಂದು ಹೆಸರು ಕುಲಶೇಖರ ಆಳ್ವಾರರು. ಅವರ 'ಮುಕುಂದ ಮಾಲಾಭಕ್ತಿ' ಸಾಹಿತ್ಯದಲ್ಲಿ ಜನ ಪ್ರಿಯವಾಗಿದೆ.

ನಾಯನಾರ್ ಪಂಥದಲ್ಲಾಗಲೀ, ಆಳ್ವಾರ್ ಪಲಥದಲ್ಲಾಗಲೀ ದೈವದ ಹೆಸರು ಬೇರೆ ಇದ್ದಿತಾದರೂ ಈ ಎರಡು ಭಕ್ತಿ ಚಳವಳಿಗಳ ಉದ್ದೇಶ ಒಂದೇ ಆಗಿದೆ. ಈ ಭಕ್ತಿ ಪಂಥಗಳಲ್ಲಿ ಬಹುಪಾಲು ಜನ ಬ್ರಾಹ್ಮಣೇತರರು, ಹೆಚ್ಚಾಗಿ ಕೆಳವರ್ಗದವರು, ಅಂತ್ಯಜರು, ಹೆಂಗಸರು, ವೃತ್ತಿ ಜೀವಿಗಳು, ಕೂಲಿಕಾರರು. ಇವರು ಸಂಸ್ಕೃತ ಬಿಟ್ಟು ತಮಿಳಿನಲ್ಲಿ ಉಪದೇಶ ಮಾಡಿದರು. ಇದರಿಂದ ದೇವರು, ಧರ್ಮದ ವಿಷಯವನ್ನು ಜನ ತಮ್ಮ ತಮ್ಮ ಮಾತೃಭಾಷೆಯಲ್ಲಿ ಅರಿಯುವುದು ಸಾಧ್ಯವಾಯಿತು. ಭಕ್ತಿಪಂಥದ ಭಾವನೆಯು ದೇವ ಭಕ್ತಿಗೆ ಸಂಬಂಧಿಸಿತ್ತು. ಅವರು ನಂಬಿದ ದೇವರನ್ನು ದಾಸಭಾವದಿಂದಲೋ, ಮಧುರ ಭಾವದಿಂದಲೂ ಆರಾಧಿಸುತ್ತಿದ್ದರು."[೧೦] ಎಲ್ಲಾ ಜಾತಿ ಜನ ದೇವರ ದೃಷ್ಟಿಯಲ್ಲೂ ಸಾಮಾಜಿಕವಾಗಿ ಸಮಾನರಾಗಿದ್ದರು. ಹೀಗೆ ಮೇಲುವರ್ಗದವರು ಸಾಮಾನ್ಯರನ್ನು ಮನದಿಂದ ದೂರವಿಟ್ಟರೆ ಈ ಭಕ್ತಿ ಚಳವಳಿಗಳು ತಮ್ಮ ಮಂದಿರದ ಬಾಗಿಲನ್ನು ಎಲ್ಲರಿಗೂ ತೆರೆದವು. ತಮಿಳುನಾಡಿನ ಸುಂದರ್ (ಕ್ರಿ.ಶ. ೨ರ) ಹೇಳುತ್ತಾನೆ. ದೇವಾಲಯದಲ್ಲಿ ಜಡನಾದ ದೇವರಿದ್ದಾನೆ. ಆದರೆ ಮನುಷ್ಯನಲ್ಲಿನ ಜೀವಂತ ದೇವರು ಅವನಿಗಿಂತ ಮುಖ್ಯ ಎರಡನೆಯವನಿಗೆ ಅರ್ಪಿಸಿದ್ದು, ಮೊದಲನೆಯವನಿಗೆ ಸಲ್ಲುತ್ತದೆ.

ಭಕ್ತಿಪಂಥದ ಆಳ್ವಾರರಾಗಲೀ, ನಾಯನಾರರಾಗಲೀ ಯಾರೂ ಮೇಲು ಜಾತಿಯವರಾಗಿರಲಿಲ್ಲ, ತಿರುಪ್ಪಾಳ್ವಾರ್-ಅಸ್ಪೃಶ್ಯ ಜಾತಿಗೆ ಸೇರಿದವನು, ಅಂಡಾಳ್-ಸ್ತ್ರೀ ಭಾಷೆಯಲ್ಲಿ ಪ್ರತಿಪಾದಿಸಿದ ವಿಚಾರಗಳಿಗೆ, ರಚಿಸಿದ ಗೀತೆಗಳಿಗೆ ರಾಮಾನುಜರು ಮಾನ್ಯತೆ ನೀಡಿದರು. ಅಸ್ಪೃಶ್ಯರನ್ನು 'ತಿರುಕುಳತ್ತರ್' ಎಂದು ರಾಮಾನುಜರು ಕರೆದರು. ಯಾವ ಜಾತಿಯವನಾಗಲೀ ಭಕ್ತಿಯಿಂದ ಶುದ್ಧ ಜೀವನ ನಡೆಸಿದರೆ ಮುಕ್ತಿ ಸಾಧ್ಯ ಮುಕ್ತಿಸಾಧನೆಗೆ ಜಾತಿ ಅಡ್ಡಬರಬಾರದೆಂದು ಹೇಳಿ ದಲಿತರ, ಉಪೇಕ್ಷಿತರಾದವರಲ್ಲಿ ಆತ್ಮವಿಶ್ವಾಸವನ್ನು ತುಂಬಿ ಅವರನ್ನು ಭಕ್ತಿ ಮಾರ್ಗದ ಕಡೆಗೆ ತಿರುಗಿಸಿದನು ಎಂಬ ಪ್ರತೀತಿ ಕಾವ್ಯಗಳಲ್ಲಿದೆ.

ಶ್ರೀರಾಮಾನುಜರು ಆಳ್ವಾರರ ಉದಾರ ವಿಚಾರಧಾರೆಯಿಂದ ಪ್ರಭಾವಿತನಾಗಿ (ಕ್ರಿ. ಶ. ೧೧-೧೨ನೇ ಶತಮಾನದಲ್ಲಿ) ರಹಸ್ಯವಾಗಿ ಜಪಿಸಬೇಕಾದ ಮಂತ್ರವನ್ನು ಎಲ್ಲರೂ ಕೇಳುವಂತೆ ಗಟ್ಟಿಯಾಗಿ ಘೋಷಿಸಿದನು. ಕೆಲವರು ಮಂತ್ರವನ್ನು ಬಹಿರಂಗ ಪಡಿಸಬಾರದೆಂದು ಎಚ್ಚರಿಸಿದರು. ಕೇಳಲಿಲ್ಲ. ಇದನ್ನು ಕೇಳಿದವರು ಧನ್ಯಾತ್ಮರಾಗಲಿ, ತಾನೂ ನರಕಕ್ಕೆ ಹೋದರೂ ಚಿಂತೆಯಿಲ್ಲ ಎಂದು ಅವರು ಭಾವಿಸಿದರು. ಭಕ್ತಿ ಚಳವಳಿಗಳಲ್ಲಿ ಗಮನಿಸಬೇಕಾದ ಸಂಗತಿ ಎಂದರೆ "ಕೆಲವರು ರಾಜಪ್ರಭುತ್ವದ ವಿರುದ್ಧ ನಿಂತುದು. ನಮಗೆ ರಾಜನು ದೇವರೇ ಹೊರತು ಈ ನರಮನುಷ್ಯರಲ್ಲ" ಎಂದು ಅನೇಕ ಭಕ್ತರು ಬಹಿರಂಗವಾಗಿಯೇ ಹೇಳಿದರು. ಮಾಣಿಕ್ಯ ವಾಚಕರು ಹೇಳುತ್ತಾರೆ. ನಾನು ಯಾರಿಗೂ ಆಳಲ್ಲ (ದೇವರನ್ನು ಬಿಟ್ಟರೆ) ಯಾರಿಗೂ ಹೆದರಬೇಕಿಲ್ಲ.

ರಾಜನ ಆಸ್ಥಾನ ಮೇಲು-ಕೀಳು ಅಧಿಕಾರಿಗಳ "ಒಂದು ವೇದಿಕೆ ಆದರೆ, ದೇವರ ರಾಜ್ಯದಲ್ಲಿ ಅವನ ಮಕ್ಕಳೆಲ್ಲರೂ ಸಮಾನರು. ತಮಿಳುನಾಡಿನ ಭಕ್ತಿ ಚಳವಳಿಗಳಲ್ಲಿ ಎಲ್ಲರೂ ಏಕೇಶ್ವರವಾದಿಗಳು. ವೈದಿಕ ಧರ್ಮದ ಹಲವಾರು ಸಂಪ್ರದಾಯಗಳನ್ನು ವಿರೋಧಿಸಿದರು."[೬] ಮೇಲು-ಕೀಳು ತಾರತಮ್ಯ ವಿರೋಧ, ಮಾತೃಭಾಷೆಗೆ-ಮನ್ನಣೆ, ಸಂಸ್ಕೃತದ ನಿರಾಕರಣೆ- ಇವುಗಳ ಮೂಲಕ ಅವರು ಸಮಾನತೆ ಬೋಧಿಸಿದರು ಭಗವಂತನನ್ನು ಒಲೈಸಲು ಭಕ್ತಿಯೇ ಏಕೈಕ ಸಾಧನ; ಭಕ್ತರಿಗೆ ಪುರೋಹಿತರ ಮತ್ತು ಅರ್ಚಕರ ಮಾರ್ಗದರ್ಶನದ ಅಗತ್ಯವಿಲ್ಲ ಎಂದು ತಿಳಿಸಿದರು. ತಮಿಳು ನಾಡಿನ ವೈಷ್ಣವ ಆಳ್ವಾರರಲ್ಲಿ ತಿರುಪ್ಪಾಣಾಳ್ವಾರರು-ಒಬ್ಬ ಅಸ್ಪೃಶ್ಯ, ಶೈವ-ನಾಯನಾರರಲ್ಲಿ ನಂದನಾರ್-ಒಬ್ಬ ಅಸ್ಪೃಶ್ಯ ರಾಮಾನುಜರ ಗುರುಶೂದ್ರನಾಗಿದ್ದ ಕಾಂಜೀಪೂರ್ಣನ ಪಾದಗಳನ್ನು ಒತ್ತಲು ಮುಂದಾಗಿದ್ದನಂತೆ. ಕರ್ನಾಟಕದ ಮೇಲುಕೋಟೆಯ ಗುಡಿಯೊಳಗೆ ತಮಗೆ ಸಹಾಯ ಮಾಡಿದ ಅಸ್ಪೃಶ್ಯರಿಗೆ ಪ್ರವೇಶದ ಅವಕಾಶವನ್ನು ರಾಮಾನುಜರು ಒದಗಿಸಿದ್ದರು. ತಮಿಳುನಾಡಿನ ಈ ಭಕ್ತರು ಭಕ್ತಿಗೀತೆಗಳನ್ನು ಹಾಡುತ್ತಾ, ಊರಿಂದೂರಿಗೆ ದೇವಾಲಯದಿಂದ

ದೇವಾಲಯಕ್ಕೆ ಸಂಚಾರ ಮಾಡುತ್ತಿದ್ದರು. ದಕ್ಷಿಣ ಭಾರತದ ಚೋಳ-ಪಾಂಡ್ಯ, ಚೇರ ರಾಜ್ಯಗಳಲ್ಲಿ ಭಕ್ತಿಯ ಹೊನಲನ್ನೆ ಹರಿಸಿದ 'ತೇವಾರಂ' ಭಕ್ತಿಗೀತೆಗಳ ಧ್ವನಿ ಎಲ್ಲೆಡೆ ಹರಡುವಂತೆ ಮಾಡಿದರು. ಜಾತಿ-ಲಿಂಗಭೇದಗಳನ್ನು ಮುರಿದು ಭಕ್ತಿ ಮಾರ್ಗದ ಬಾಗಿಲನ್ನು ಎಲ್ಲರಿಗೂ ತೆರೆದರೂ ಅಲ್ಲಿ ಒಂದು ನಿರ್ಬಂಧವಿತ್ತು. ಶೂದ್ರರು ಮಾತ್ರ ದೇಗುಲದಲ್ಲಿ ಪ್ರವೇಶಿಸಿ ದೇವರನ್ನು ಪೂಜಿಸಲಾಗದು, ದೇಗುಲದ ಮಹಾದ್ವಾರದಲ್ಲೇ ನಿಂತು ತಮ್ಮ ಭಕ್ತಿಯನ್ನು ಅರ್ಪಿಸಬೇಕು ಎನ್ನುವ ಕರಾರು ಇತ್ತು. ಇದೇ ಆ ಕಾಲದಲ್ಲಿ ಕ್ರಾಂತಿಕಾರರ ಆಚರಣೆಯಾಗಿತ್ತು.

"ಕೀಳು ಜಾತಿಯಲ್ಲಿ ಹುಟ್ಟಿದ "ತಿರುಪ್ಪನ್"ಗೆ ರಂಗನಾಥ ದೇವಸ್ಥಾನದಲ್ಲಿ ಪ್ರವೇಶಿಸುವುದಕ್ಕೆ ಅನುಮತಿ ಇರಲಿಲ್ಲ. ಆದರೆ, ಇಂತಹ ಉದಾಹರಣೆಗಳು ತೀರಾ ವಿರಳವಾಗಿವೆ. ತಿರುಮಂಗೈ ಆಳ್ವಾರರ ಸಾಕುಮಗಳು-ಅಂಡಾಳ್. ಆಕೆಯ ಭಕ್ತಿಗೀತೆಗಳನ್ನು ವೈಷ್ಣವರು ಮಂಗಳ ಕಾರ್ಯಗಳಲ್ಲಿ ಈಗಲೂ ಹಾಡುತ್ತಾರೆ. ಆಳ್ವಾರರು ತಮಗಿದ್ದ ಸ್ಥಾನವನ್ನು ಈಕೆಗೆ ಕೊಡದೆ ಗುಂಪಿನಿಂದ ಹೊರಗಿಟ್ಟಿದ್ದರು. ಆದರೂ ಬಹುಪಾಲು ಆಳ್ವಾರರು, ನಾಯನಾರರು ತಮ್ಮ ಇತಿಮಿತಿಯಲ್ಲಿ ಕೆಲವು ಸಾಂಪ್ರಾದಾಯಕ ಕಟ್ಟಳೆಗಳನ್ನು ಮುರಿದು ದೈವಭಕ್ತಿ ಸಮತಾ ಭಾವವನ್ನು ಮೆರೆದಿದ್ದಾರೆ."[೭] ನಾಯನಾರರಲ್ಲಿ ಕಾರೈಕಾಲ್ ಅಮ್ಮಾಯ್ಯಾರ್ ಇನ್ನೊಬ್ಬ ಭಕ್ತಳು. ಈಕೆ ವೈಶ್ಯ ರಾಜನೊಬ್ಬನ ಪುತ್ರಿ ಗೃಹಿಣಿಯಾಗಿದ್ದಳು. ಕಾರೈಕಾಲ್ ಅಮ್ಮಾಯ್ಯಾರ್ ತಮಿಳು ಭಾಷೆಯಲ್ಲಿ ಭಕ್ತಿಗೀತೆ ಹಾಡಿದ್ದಾಳೆ.

ತಮಿಳು ನಾಡಿನ ಭಕ್ತಿ ಚಳವಳಿ ಇತಿಹಾಸದಲ್ಲಿ ಕ್ರಿ.ಶ. ೮ನೇ ಶತಮಾನದ ನಂದನಾರ್ ಬಹಳ ಮುಖ್ಯ ವ್ಯಕ್ತಿಯಾಗಿದ್ದನು. ಭಾರತದ ಭಕ್ತಿ ಪಂಥದ ಮೊದಲ ಬಂಡಾಯಗಾರನಾಗಿದ್ದ ಈತನಿಗೆ ಇತಿಹಾಸದಲ್ಲಿ ಅಗ್ರಸ್ಥಾನವಿದೆ. ಈತ ಅಸ್ಪೃಶ್ಯ ಜನಾಂಗಕ್ಕೆ ಸೇರಿದವನು. ದೇವಾಲಯದ ಪ್ರವೇಶ ಅಸ್ಪೃಶ್ಯರಿಗೆ ನಿಷಿದ್ಧವೆನ್ನುವ ನಿಯಮವನ್ನು ಭಗ್ನಗೊಳಿಸಿದ ವ್ಯಕ್ತಿ. ಶೈವ ಭಕ್ತರಲ್ಲಿ ಅಗ್ರಗಣ್ಯ ಹರಿಜನ ಕೇರಿಯಲ್ಲಿ ಮಲ ಹೋರುವ ಜೀತದಾಳಾಗಿ ಬದುಕಿದ್ದ ಈತ ತನ್ನ ಅಗಾಧ ದೈವ ಭಕ್ತಿಯಿಂದಾಗಿ "ನಂದನಾರ್" ಆಗಿ ಪ್ರಸಿದ್ಧನಾದನು. ಹೀಗೆ ತಮಿಳುನಾಡಿನ ಭಕ್ತಿ ಪಂಥಗಳು ಸಾಮಾಜಿಕ, ಧಾರ್ಮಿಕವಾಗಿ ಜನ ಸಮೂಹದಲ್ಲಿ ಭಾವೈಕ್ಯತೆ ತರಲು ಯತ್ನಿಸಿ ಬಹುಪಾಲು ಯಶಸ್ವಿಯಾದವು. ಇದು ಶೈವ ಭಕ್ತಿ ಚಳವಳಿ ಇತಿಹಾಸ. ಅದರಲ್ಲಿ ನನ್ನ ಅಧ್ಯಯನಕ್ಕೆ ಪೂರಕವಾಗುವಂತೆ ತಮಿಳುನಾಡಿನ ನಾಯನಾರರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

**ನಾಯನಾರರು**

ನಾಯನಾರ್ ಎಂಬುದು ದ್ರಾವಿಡಶಬ್ದ, ಅದು ಶಿವ, ಯಜಮಾನ, ಅಯ್ಯ, ದೇವ,

ಎಂಬ ಅರ್ಥವನ್ನು ಕೊಡುತ್ತದೆ. ಈ ನಾಯನಾರರು ತಮಿಳುನಾಡಿನ ಶಿವಭಕ್ತರಾಗಿದ್ದರು.

"Nayaramar Nayana-Naya means the supreme being (master) Nayanamars –Gods canonised saiva sains who's history is Narrated in periya puran"[8].

ತಮಿಳುನಾಡಿನಲ್ಲಿ ಭಕ್ತಿಯ ಪ್ರವಾಹ ಎರಡು ರೀತಿಯಿಂದ ಹರಿದು ಬಂದದ್ದನ್ನು ಕಾಣುತ್ತೇವೆ. ಒಂದು ಶೈವಭಕ್ತಿಯಾದರೆ ಇನ್ನೊಂದು ವೈಷ್ಣವಭಕ್ತಿ. ಶೈವಭಕ್ತರನ್ನು ನಾಯನಾರ್ ಎಂದು ಕರೆದರೆ ವೈಷ್ಣವ ಭಕ್ತರನ್ನು ಆಳ್ವಾರರೆಂದು ಕರೆಯುತ್ತಾರೆ. ಕ್ರಿಶಕ ೫ನೇ ಶತಮಾನದಿಂದ ೧೧ನೇ ಶತಮಾನದವರೆಗೆ ಆಗಿಹೋದ ನಾಯನಾರರ ಭಕ್ತಿಗೀತೆಗಳನ್ನು ಸಂಗ್ರಹಿಸಿ (ತೇವಾರಮ್) ಅವುಗಳನ್ನು ಹನ್ನೆರಡು ವಿಭಾಗಗಳಲ್ಲಿ ಪ್ರಕಟಪಡಿಸಿದ್ದಾರೆ"[೯]. ಅಂತಹ ಭಕ್ತಿಗೀತೆಗಳ ಸಂಗ್ರಹ ಕೃತಿಗಳಿಗೆ ತಿರುಮುರಾಯಿ ಎಂದು ಕರೆದಿದ್ದಾರೆ. ತಿರು ಎಂದರೆ ಶ್ರೀ ಅಥವಾ ಪವಿತ್ರ; 'ಮುರಾಯಿ' ಎಂದರೆ ಪುಸ್ತಕ ತಿರುಮುರಾಯಿ ಎಂದರೆ ಪವಿತ್ರ ಪುಸ್ತಕವೆನ್ನುವ ಅರ್ಥ ಅದಕ್ಕೆ ಇದೆ. ಆದ್ದರಿಂದ ತಿರುಮುರಾಯಿಗಳು. ನಾಯನಾರರ ಬೈಬಲ್ ಗ್ರಂಥಗಳಾಗಿವೆ.

'ನಾಯನಾರರು ಜನಸಾಮಾನ್ಯರ ಮಧ್ಯದಲ್ಲಿ ಬೆರೆತು ಜನಹಿತಕ್ಕಾಗಿ ಜೀವ ಸವೆಸಿ ವಿಶ್ವ ಪ್ರೇಮಿಗಳಾಗಿ ಜನತೆಯೊಂದಿಗೆ ಜೀವನ್ಮುಕ್ತರಾಗಿದ್ದಾರೆ. ಭಕ್ತಿ, ಪ್ರೇಮ, ಪೂಜೆ, ಧ್ಯಾನ, ಇವು ಈ ನಾಯನಾರರ ಅಂತರಂಗದ ಐಸಿರಿ. ಸೌಂದರ್ಯದ ಪ್ರತೀಕಗಳಾದ ನೃತ್ಯ ಸಂಗೀತಗಳಿಂದ ಜನತೆಯ ಮನವನ್ನಾಕರ್ಷಿಸಿ ಭಕ್ತಿಗೀತೆಗಳನ್ನು ಹಾಡಿ ಬೋಧನೆ ನೀಡಿ ಕುಣಿದಾಡಿದ್ದಾರೆ. ಒಳಪಂಗಡಗಳನ್ನು ಲೆಕ್ಕಿಸದೆ ಶಿವಭಕ್ತರೆನ್ನುವುದು ಒಂದು ಕುಲವೆಂದು ಸಾರಿ ಅದರಂತೆ ನಿತ್ಯ ಜೀವನದಲ್ಲಿ ನಡೆದು ಕೊಳ್ಳುತ್ತಾರೆ."[೧೦]

ಲೋಕದಲ್ಲಿ ಶಿವ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬುದು ನಾಯನಾರರ ಧ್ಯೇಯವಾಗಿತ್ತು. ತ್ರಿಷಷ್ಟಿ ಪುರಾತನರ ಸಂದೇಶ ಮಾನವದ ಕುಲದ ಉದ್ಧಾರವಾಗಿದೆ. ಅವರ ಭಕ್ತಿ ಉಗ್ರವಾಗಿರಬಹುದು. ಅವರು ಕೈಕೊಂಡ ಕೆಲವು ಕಾರ್ಯಗಳು ಭಯಾನಕವೆನಿಸಬಹುದು. ಆದರೆ, ಅಂದಿನ ಪರಿಸರ ಅವರ ಜೀವನವನ್ನು ಒಂದೊಂದು ಬಗೆಯಾಗಿ ರೂಪಿಸಿದೆ. ಇಂದಿನವರಿಗೆ ಅವರ ಕೆಲವು ಕೃತಿಗಳು ಹೇಯವೆಂದು ತೋರಬಹುದು. ಆದರೆ, ಅಂದಿನ ಸಮಾಜ ಸಂಘಟನೆಗೆ ಅವು ಅವಶ್ಯವೆಂದು ಅವರು ನಂಬಿದ್ದರು. ಇಂದಿನ ಅಳತೆಗೋಲಿನಿಂದ ಅಂದಿನವರ ನೆಲೆ , ಬೆಲೆಗಳನ್ನು ಅಳೆಯಲಾಗದು. ಮುಗ್ಧರಾಗಿಯೇ ಉಗ್ರರಾಗಿಯೋ, ವೀರರಾಗಿಯೋ ಪ್ರಕಟಣೆಗೊಂಡ ಈ ಪುರಾತನರು

ಸತ್ಯದರ್ಶಿಗಳಾಗಿದ್ದರೆಂಬುದರಲ್ಲಿ ಸಂದೇಹವಿಲ್ಲ.

**ತಿರುಮೂಲರ್**

ನಾಯನಾರರಲ್ಲಿ ಅತ್ಯಂತ ಪ್ರಾಚೀನನೆಸಿದ ತಿರುಮೂಲರನು ಸಿದ್ಧರಲ್ಲಿ ಶ್ರೇಷ್ಠನಾದವನು. ಸಿದ್ಧನೂ ಅನುಭಾವಿಯೂ ಆದ ಈ ಶಿವಭಕ್ತ ಕವಿಯೂ ಕಾಶ್ಮೀರ ದೇಶದಿಂದ ಬಂದವನೆಂಬ ನಂಬಿಕೆ. ಈತನ ತಿರುಮಂದಿರಮ್ ಎಂಬ ಗ್ರಂಥವೆ ಶೈವ ಸಿದ್ಧಾಂತ ಪ್ರತಿಪಾದಿಸುವ ಮೊದಲು ಗ್ರಂಥವಾಗಿದೆ.

'This book is probably the earliest krow work Rerfering to any Tantra Agama and also calling if self one.

ತಿರುಮಲೂರನು ದೇಹ ಅಲ್ಲಗಳೆಯುವುದನ್ನು ವಿರೋಧಿಸುತ್ತಾನೆ. ದೇಹವೇ ದೇವಾಲಯ, ಆತ್ಮವೇ ಶಿವಲಿಂಗವೆಂದು ಪ್ರತಿಪಾದಿಸುತ್ತಾನೆ.

He is against the mortification of the body. If the body is destroyed the soul is destoroyed-though He is not against Temple worship he carese More for the temple with in the heart."[11]

ಪ್ರೇಮವೇ ದೇವರು ಎನ್ನುವುದು ಆತನ ಸಂದೇಶವಾಗಿದೆ. His message in love is god ಅರಿಯದವರು ಶಿವಪ್ರೇಮ ಎರೆಡೆಂಬರು. ಇವು ಒಂದೇ ಎಂದು ಅರಿತವರು ಶಿವನ ಪ್ರೇಮದಲ್ಲಿ ನೆಮ್ಮದಿಪಡೆದರು.ಮಾನವರನ್ನು ಪ್ರೀತಿಸದವರು ಶಿವನನ್ನು ಪ್ರೀತಿಸರು ಎಂಬುದು ತಿರುಮೂಲರನ ಜೀವನ ಸಿದ್ಧಾಂತ. ಆತನ ಭಕ್ತಿಗೀತೆಗಳನ್ನು ಹತ್ತನೇಯ ತಿರುಮೂರಾಯಿಯಲ್ಲಿ ಜೋಡಿಸಿದ್ದಾರೆ.

**ಅಪ್ಪರ್**

ನಾಯನಾರರಲ್ಲಿ ಅತ್ಯಂತ ಪ್ರಸಿದ್ಧಿ ಪಡೆದವರೆಂದರೆ ಅಪ್ಪರ್, ತಿರುಜ್ಞಾನ ಸಂಬಂಧರ್, ಸುಂದರ್ ಹಾಗೂ ಮಾಣಿವಾಕ್ಯವಾಚಗರ್ ಅವರು, ಅಪ್ಪರ್ ಅವರಿಗೆ ತಿರುಣಾವುಕ್ಕ ರಸರ್, ವಾಗೀಶರ್ ಎಂಬ ಹೆಸರುಗಳಿವೆ. ತಿರುಜ್ಞಾನ ಸಂಬಂಧರಿಗಿಂತ ಹಿರಿಯರಾದುದರಿಂದ ಸಂಬಂಧರು

ಇವರನ್ನು ಯಾವಾಗಲೂ ಅಪ್ಪರ್ ಎಂದೇ ಕರೆಯುತ್ತಿದ್ದರಂತೆ. ಅಪ್ಪರ್ ಎಂದರೆ ತಂದೆ ಎಂಬಾರ್ಥವಿದೆ. ಮೇಲು ಜಾತಿಗೆ ಸೇರಿದವರು. ಅಕ್ಕ ತಿಲಕವತಿಯ ಆಶ್ರಯದಲ್ಲಿ ಬೆಳೆದು ಜೈನ ಧರ್ಮ ಸ್ವೀಕರಿಸಿ ಮತ್ತೆ ಶೈವಧರ್ಮಕ್ಕೆ ಶರಣು ಹೊಕ್ಕವರು. ಶಿವಗೀತೆಗಳನ್ನು ಹಾಡಿ, ಹಾಡಿ, ಅನ್ಯಮತೀಯರು ಶೈವಧರ್ಮವನ್ನು ಮೊರೆಹೋಗುವಂತೆ ಪ್ರಭಾವ ಬೀರಿದವರು. ಇವರ ಕಾಲ ಸುಮಾರು ೨ನೇ ಶತಮಾನದ ಕೊನೆಯಾಗಿದ್ದು, ಇವರದು ದಾಸಮಾರ್ಗವಾಗಿದೆ.

'ತನುವೆಂಬ ಗೇಹದಲಿ ಮನದ ಪ್ರಣತಿಯ ಮಾಡಿ, ಧಾನ್ಯವೆಂಬ ತೈಲವನೆರೆದು ಜೀವನದ ಬತ್ತಿಗೆ ಸುಜ್ಞಾನವೆಂಬ ಜ್ಯೋತಿ ಮುಟ್ಟಿಸಿದರೆ ಶಿವ ಸಾಕ್ಷತ್ಕಾರವಾಗುವುದು ಎಂಬುದೇ ಇವರ ಜೀವನದ ಸಂದೇಶವಾಗಿದೆ."?"[೧೨] ವೇಣುವಾದನವು ಹೃದಯವನ್ನು ತಣಿಸಿದಂತೆ ಶಿವನ ಅನುಗ್ರಹ ನೆಮ್ಮದಿ ತರುವುದು. ಶೀತಳವಾದ ಚಂದ್ರ ಬಿಂಬದಂತೆ ಹೃದಯದ ತಾಪವನ್ನು ನೀಗುವುದು. ವಿದ್ಯೆಗಳೆಲ್ಲದರ ಗುರಿ ಶಿವನ ಆರಾಧನೆ. ಶಿವವೇದ ಪ್ರಿಯನಲ್ಲ, ಶಾಸ್ತ್ರ ಪ್ರಿಯನಲ್ಲ, ಭಕ್ತಿಪ್ರಿಯ. ಇದು ಅಪ್ಪರ್ ಅವರ ಜೀವನ ಸಿದ್ಧಾಂತ. ನಾವು ಯಾರಿಗೂ ದಾಸರಲ್ಲ, ನಮಗೆ ಸಾವಿನ ಭಯವಿಲ್ಲವೆಂಬ ಧೀರವಾಣಿಯನ್ನು ಪಲ್ಲವರಾಜರ ಶಕ್ತಿ ಸಾಮರ್ಥ್ಯಗಳೆದುರು ಮಾರೊಡ್ಡಿದ ಮೊದಲ ಸತ್ಯಾಗ್ರಹಿ ಅಪ್ಪರ್ ಅವರು. ನಾನು ಯಾರಿಗೂ ಬಂದಿಯಲ್ಲ, ಸಾವಿಗೆ ಹೆದರುವುದಿಲ್ಲ, ನರಕಕ್ಕೂ ನಾವು ಬೆದರುವುದಿಲ್ಲ, ನಾವು ಅಂಜಿಕೆಯಿಂದ ಮುಕ್ತರು ನಾವು ತಲೆ ಎತ್ತಿ ಓಡಾಡುವವರು, ರೋಗ, ದುಃಖ ನಮ್ಮವಲ್ಲ, ನಾವು ಅವನ ಗುಲಾಮ ಗುಲಾಮರು ಎಂದು ಮೃತ್ಯುಭಾವ ಮೆರೆದಿದ್ದಾರೆ. ಇವರ ಭಕ್ತಿಗೀತೆಗಳನ್ನು ಸಂಗ್ರಹಿಸಿ ತಿರುಮುರಾಯಿ ನಾಲ್ಕು, ಐದು, ಆರು ಭಾಗಗಳನ್ನಾಗಿ ವಿಂಗಡಿಸಿದ್ದಾರೆ"[೧೩].

**ತಿರುಜ್ಞಾನ ಸಂಬಂಧರ್:**

ತಿರುಜ್ಞಾನ ಸಂಬಂಧರಿಗೆ ಪಿಳ್ಳೆ ನಾಯನಾರರೆಂದು ಹೆಸರು, ದಕ್ಷಿಣ ಹಿಂದೂಸ್ತಾನದ ಕ್ಷೇತ್ರಗಳನ್ನೆಲ್ಲ ಸಂದರ್ಶಿಸಿ ಹೋದ ಹೋದಲೆಲ್ಲ ಪರಮತಾನುಯಾಯಿಗಳೂ ಸಹ ಶೈವಧರ್ಮ ಸ್ವೀಕರಿಸುವಂತೆ ಧರ್ಮ ಪ್ರಚಾರ ಕಾರ್ಯ ಕೈಗೊಂಡವರಿವರು. ಬೌದ್ಧ ಧರ್ಮಗಳನ್ನು ಎದುರಿಸಿ ಶೈವಧರ್ಮದ ಪ್ರಚಾರ ಕಾರ್ಯ ಆರಂಭಿಸಿದವರಲ್ಲಿ ತಿರುಜ್ಞಾನ ಸಂಬಂಧರ್ ಮೇಲಾದವರು. ಸಂಗೀತಮಯವಾದ ಅವರ ಸುಂದರ ನುಡಿಗಳಿಗೆ ಮಾರುಹೋದ ಜನತೆ ಅವರ ಶಿಷ್ಯರಾಗಿದ್ದಾರೆ. ಅವರು ಸುತ್ಪುತ್ರ ಮಾರ್ಗವನ್ನು ಅರಿತವರಾಗಿದ್ದಾರೆ. ಅವರು ಬದುಕಿದ ಕಾಲ ಸುಮಾರು ೨ನೇ ಶತಮಾನದ ಕೊನೆ ಇಲ್ಲವೆ ೮ನೇ ಶತಮಾನದ ಆದಿ. ನಾವು ದಿನದಿನವೂ ಈ ವಿಶ್ವದಲ್ಲಿ

ಬಾಳಬಹುದು. ಆಚೇಯ ಜನ ಜೀವನಕ್ಕಿಂತ ಇಲ್ಲಿ ಹೆಚ್ಚಿನದಲ್ಲ. ಅಲ್ಲಿ ವಾಸಿಸುವ ಒಡೆಯನನ್ನು ನೋಡು, ಚಲುವೆ, ಜೊತೆಗಾರ್ತಿಯೊಂದಿಗೆ ಅನಂತ ಜೀವರಾಶಿಗಳನ್ನು ಹುಟ್ಟಿಸುತ್ತಾನೆ. ಇದು ಸಂಬಂಧದ ಸಿದ್ಧಾಂತವಾಗಿದೆ. ಇವರ ಭಕ್ತಿ ಗೀತೆಗಳನ್ನು ತಿರುಮುರಾಯಿ ಒಂದು, ಎರಡು, ಮೂರು ಭಾಗಗಳನ್ನಾಗಿ ವಿಂಗಡಿಸಿದ್ದಾರೆ.

**ಸುಂದರರ್**

ಇವರಿಗೆ ಸುಂದರ ಮೂರ್ತಿಯೆಂದು, ಸೌಂದರ ಪೆರುಮಾಳ್ ಎಂದು ಹೆಸರಿದೆ. ಕನ್ನಡದ ಹರಿಹರ ಕವಿ ಈತನನ್ನು ನಂಬಿಯಣ್ಣ ಎಂದು ಕರೆದಿದ್ದಾನೆ. ದೇವರನ್ನು ಮಿತ್ರನನ್ನಾಗಿ ಬಗೆದ ಸಖ್ಯಮಾರ್ಗ ಇವನದು. ಈತನು ಬಾಳಿದುದು ಸುಮಾರು ಒಂಬತ್ತನೇ ಶತಮಾನದಲ್ಲಿ ಶಿವದೇವಾಲಯಗಳೆಲ್ಲಲ್ಲ ಭಕ್ತಿಗೀತೆಗಳನ್ನು ಪಠಿಸಲು ಪ್ರಯತ್ನಿಸಿದವರಲ್ಲಿ ಸುಂದರ ಮೂರ್ತಿಯೂ ಒಬ್ಬನು ಎಂದು ತಿಳಿದು ಬಂದಿದೆ. ಮಲಿನವಾದ ಈ ಶರೀರದೊಂದಿಗೆ ನಿನ್ನ ನಿರ್ಮಲವಾದ ಪಾದ ಸನ್ನಿಧಿಗೆ ನಾನು ಬಂದಿದ್ದೇನೆ. ನಾನೇನದರೂ ಮಾಡಿದ್ದರೆ ನಿನ್ನೆಡೆಗೆ ಬರುವುದೊಂದನ್ನು ಮಾತ್ರ ಮಾಡಿದ್ದೇನೆ. ಭಕ್ತರಭಾಗ್ಯ ನಿಧಿಯೆ. ನನ್ನಲ್ಲಿನ ಮಲಿನತೆಯನ್ನು ತೊರೆದು ಹಾಲನ್ನು ಸ್ವೀಕರಿಸುವವ ನೀನು. ಎಲ್ಲವನ್ನು ಬಿಟ್ಟರೂ ನಿನ್ನ ಪವಿತ್ರ ಪಾದಗಳನ್ನು ಮಾತ್ರ ಬಿಡಲಾರೆ. ಇದು ಸುಂದರ ಮೂರ್ತಿಯ ಜೀವನ ಸಿದ್ಧಾಂತ.

'ನಾನು ಜಾರಬಹುದು, ಬೀಳಬಹುದು, ಆದರೆ ದೇವರ ನಾಮವೊಂದನ್ನು ಬಿಟ್ಟು ನಾನು ಮತ್ತೊಂದನ್ನರಿಯೆ. ಇದು ಅವನ ಜೀವನ ಸಂದೇಶ, ತನಗಿಂತಲೂ ಪೂರ್ವದಲ್ಲಿ ಅಗಿಹೋದ ಪ್ರಸಿದ್ಧಿಯನ್ನು ಪಡೆದ ಅರವತ್ತೆರಡು ನಿಷ್ಠಾವಂತ ಪುರಾತನರ ಚರಿತ್ರೆಗಳನ್ನು ಮೊಟ್ಟ ಮೊದಲು ರಚಿಸಿದವನು. ಈ ಸುಂದರ ಮೂರ್ತಿಯೇ. ಆ ಗ್ರಂಥಕ್ಕೆ 'ತಿರುತ್ತೊಂಡತ್ತೊಗೈ' ಎಂಬ ಹೆಸರು. ತಿರುವಾರೂರು ಭಕ್ತ ಜನ ಸಮ್ಮುಖದಲ್ಲಿ ಸುಂದರ ಮೂರ್ತಿ ಅರವತ್ತೆರಡು ಜನ ಪುರಾತನರನ್ನು ಕುರಿತು ಹಾಡಿದ ಭಕ್ತಿಗೀತೆಗಳ ಸಂಕಲನವೇ ಈ 'ತಿರುತ್ತೊಂಡತ್ತೊಗೈ' ಸುಂದರ ಮೂರ್ತಿಯ ಗೀತೆಗಳನ್ನು ಏಳನೇ ತಿರುಮುರಾಯಿಯಲ್ಲಿ ಸೇರಿಸಿದ್ದಾರೆ ಎಂಬ ಅಭಿಪ್ರಾಯ ಕಾವ್ಯಗಳಿಂದ ತಿಳಿದು ಬಂದಿದೆ''[೧೪].

**ಮಾಣಿಕ್ಯ ವಾಚಗರ್**

ಇವರು ಪಾಂಡ್ಯರಾಜನ ಮಂತ್ರಿಯಾಗಿದ್ದರು, ಶಿವನಲ್ಲಿದ್ದ ಪ್ರೇಮವೇ ಅನುಭವವೇ ಅವರ

ಗೀತೆಗಳಿಗೆ ವಿಷಯವಾದುದರಿಂದ ಜ್ಞಾನ ಹೊರಚಲ್ಲಿದೆ. ಪ್ರೇಮ ಹಾಸುಹೊಕ್ಕಾಗಿದೆ. ಅತಿಸುಂದರವಾದ ಗೀತೆಗಳನ್ನು ರಚಿಸಿ ತಿರುವಾಚಕಮ್: ತಿರುವಾಕ್ಕೋವಯಾರ್' ಇವು ಅವರ ಕೃತಿಗಳು ಸನ್ಮಾರ್ಗವನ್ನು ನಡೆಸಿ ತೋರಿಸಿದವರಲ್ಲಿ ಮಾಣಿಕ್ಯವಾಚಗರೇ ಶ್ರೇಷ್ಠರು. ಶಿವನ ಅನುಗ್ರಹದ ಕಾವಿನಲ್ಲಿ ನನ್ನ ಆತ್ಮಕರಗಿತು. ನನ್ನ ಜೀವನದ ಅಡೆತಡೆಗಳು ಕಳಚಿದವು. ನಾಥ ಎಂಬ ಕ್ರಂದಿಸಿದೆ. ಮೈನವಿರೇರಿತು. ಗದ್ಗದಕಂಠನಾದೆ, ಕಂಬನಿಗ್ಸ್ಪರೆದೆ: ಕರಮುಗಿದೆ: ಮೇಣದಂತೆ ಕರಗಿದ ನಾನು ಕಂಪಿತವಾದ ಒಡಲಿನಿಂದ ಅಡಿಯಿಟ್ಟೆ: ತಲೆವಾಗಿದೆ: ಆಡಿದೆ ಅರಚಿದೆ; ಪಾಡಿದೆ; ನನ್ನನ್ನು ಬಿಡದೆ ಹಿಡಿಯಿತು. ಆ ಶಿವ ಇದು ಮಾಣಿಕ್ಯವಾಚಕರರ ಅನುಭವಾಗೀತೆ.

ನಿನ್ನ ಬಣ್ಣ ಕೆಂಪಲ್ಲ, 'ಬಿಳಿದೂ ಅಲ್ಲ. ನೀನು ಅನೇಕ; ಹಾಗೆಯೇ ಏಕ. ಅಣುವಿ ಗಿಂತಲೂ ಅಣಿಯನು' ಇದು ಅವರ ಜೀವನ ಸಂದೇಶ, ಇವರ ಗೀತೆಗಳನ್ನೆಲ್ಲ ಎಂಟನೇಯ ತಿರುಮುರಾಯಿಯಲ್ಲಿ ಜೋಡಿಸಿದ್ದಾರೆ."[೧೫] ಸಂಬಂಧರ್, ಅಪ್ಪರ್, ಸುಂದರರ್ ಹಾಗೂ ಮಾಣಿಕ್ಯವಾಚಕರ್ ಇವರನ್ನು ತಮಿಳು ನಾಡಿನ ಸಮಯಾಚಾರಿಗಳೆಂದು ಅಂದರೆ ಶೈವಧರ್ಮದ ಶಿಕ್ಷಕರೆಂದು ಕರೆದಿದ್ದಾರೆ. ಅದಕ್ಕೆ ಕಾರಣ ಅವರ ಪವಿತ್ರವಾದ ಜೀವನ ಬದುಕು ಮತ್ತು ಶೈವಧರ್ಮದ ಪ್ರಚಾರ.

It may be noted that sambandar, appar, sundarar and manikya vasagar are called the four samayacharyis or techers of saivism because they were instrumental in popularising and spreading saivism in the land by their writings and saintly life.

ತಮಿಳು ನಾಡಿನಲ್ಲಿ ಶೈವಧರ್ಮದ ಬಾವುಟವೆತ್ತಿದ ಶ್ರೇಯಸ್ಸು ಅಂದಿನ ಕಾಲದ ನಿಷ್ಠಾವಂತ ಶಿವಭಕ್ತ ಮಹಿಳೆಯರಿಗೂ ಸಲ್ಲುತ್ತಿದೆ. ಕಾರೈಕಾಲಮ್ಮೈಯಾರ್, ಅವ್ವೆ ತಿಲಕವತಿ ಮಂಗಾಯಕ್ಕರಸಿ ಮುಂತಾದ ಸ್ತ್ರೀಯರಲ್ಲಿ ಪ್ರಮುಖರಾದವರು, ಕಾರಿಕಾಲಮ್ಮೆಯಂತೂ ಅಗ್ರಗಣ್ಯಳೆಂದೆ ಹೇಳಬೇಕಾಗುತ್ತದೆ. ಸ್ತ್ರೀಯರಿಗೂ ಸಚ್ಚಿದಾನಂದ ಅನುಭವವು ಸಿದ್ಧಿಸುವುದು ಎನ್ನುವುದಕ್ಕೆ ಕಾರಿಕಾಲಮ್ಮೆಯ ಜೀವನ ಚರಿತ್ರೆ ಸಾಕ್ಷಿಯಾಗಿದೆ. ಕಾರಿಕಾಲೆಮ್ಮೆ ಬದುಕಿದ ಕಾಲ ಸುಮಾರು ಆರನೆಯ ಶತಮಾನವೆಂದು ಹೇಳಬಹುದಾಗಿದೆ."[೧೬]

ಶಿವನನ್ನು ಸೇರುವ ದಾರಿ ಯಾವುದೆಂದು ಕೇಳುವಿರೋ ? ಅವನ ಕೃಪೆ ಪಡೆಯುವುದು ಬಂತೆಂದೆಂಬಿರೊ? ಅವನ ಇರುವಿನ ಎಡೆ ಯಾವುದೆನ್ನುವಿರೋ ? ಅದು ನಮ್ಮೆಲ್ಲರ ಹೃದಯ.

ಇದು ಕಾರಿಕಾಲಮ್ಮೆಯ ಜೀವನ ಸಂದೇಶವಾಗಿದೆ. ಅಂತೆಯೇ ಅವಳ ಬಹುಮುಖ ವ್ಯಕ್ತಿತ್ವದ ಅರಿವನ್ನು ಈ ಪ್ರಬಂಧದಲ್ಲಿ ಮಾಡಿಕೊಡಲಾಗಿದೆ.

**ನಂಬಿ ಅಂಡಾರ್ ನಂಬಿ**

ಒಂಬತ್ತನೇ ಶತಮಾನದ ಕೊನೆ ಇಲ್ಲವೆ ಹತ್ತನೆ ಶತಮಾನದ ಆದಿಯಲ್ಲಿ ಬಾಳಿದ ಈ ಕವಿ ಬರೆದ ಗ್ರಂಥ ತಿರುತ್ತೊಂಡರ್-ತಿರು ಅಂದಾನಿ' ಎಂಬುದು ಸುಂದರ ಮೂರ್ತಿ ತನ್ನ ಕೃತಿಯಿಂದ 'ತಿರುತ್ತೊಂಡರ್'ದಲ್ಲಿ ಅರವತ್ತೆರಡು ಜನ ಪುರಾತನರನ್ನು ಹಾಕಿದ್ದಾನೆ. ನಂಬಿಕವಿಯ ಸುಂದರ ಮೂರ್ತಿಯನ್ನು ಸೇರಿಸಿ ತನ್ನ ಕಾವ್ಯದಲ್ಲಿ ಅರವತ್ತು ಮೂರು ಜನ ಪುರಾತನರನ್ನು ಕುರಿತು ಕೃತಿ ರಚಿಸಿದ್ದಾನೆ. ಚೋಳರಾಜನಾದ 'ರಾಜರಾಜ'ನ ಸಮಕಾಲೀನನೀತ, ನಾಯನಾರರ ಭಕ್ತಿಗೀತೆಗಳನ್ನು ಸಂಗ್ರಹಿಸಿ ಗೀತೆಯ ಆಧಾರದಿಂದ ಈತನೇ ಏಳು ವಿಭಾಗಗಳನ್ನು ಮಾಡಿದ್ದಾನೆ. ಅವನೇ ಮುಂದೆ ಹನ್ನೆರಡರವರೆಗೆ ಬೆಳೆಸಿದ್ದಾನೆ. ಈತನ ಕೃತಿಯನ್ನು ಹನ್ನೊಂದನೇ ತಿರುಮುರಾಯಿಯಲ್ಲಿ ಜೋಡಿಸಿದ್ದಾರೆ. ಪೆರಿಯ ಪುರಾಣವನ್ನು ೧೨ನೇ ತಿರುಮುರಾಯಿಯಲ್ಲಿ ಜೋಡಿಸಿದ್ದಾರೆ.

"Nampiyantar Nampi is said to be Responsible for collecting them into saven tiramuray is ................ in the classification in'u saven books was on the basis of Musical tunes"[17].

**ಶೇಕ್ಕಿಳಾರ್**

ನಾಯನಾರರ ಅಥವಾ ಪುರಾತನರ ಜೀವನ ಚರಿತ್ರೆ ಇಂದು ಜಗತ್ತಿನ ತುಂಬೆಲ್ಲ ಪಸರಿಸಿ ಉಳಿದು ಬಂದದ್ದು- 'ಪೆರಿಯ ಪುರಾಣ' ಎಂಬ ಪುರಾಣ ಕಾವ್ಯದಿಂದ. ಇದನ್ನು ಬರೆದವನು ಶೇಕ್ಕಿಳಾರ್ ಎಂಬ ಕವಿಯು. ಈತನ ಅಣಪಾಯ ಚೋಳರಾಯನ ಮಂತ್ರಿಯೂ ಆಗಿದ್ದನು. ಹನ್ನೆರಡನೇ ಶತಮಾನದಲ್ಲಿ ಬಾಳಿ ಬದುಕಿದನು. ತನಗಿಂತಲೂ ಪೂರ್ವದಲ್ಲಿ ರಚಿತವಾದ ಸುಂದರ ಮೂರ್ತಿಯ ತಿರುತ್ತೊಂಡತ್ತೋಗೈ ಹಾಗೂ ನಂಬಿಯಾಂಡರ್ ನಂಬಿ ರಚಿಸಿದ ತಿರುತ್ತೊಂಡರ್ ತಿರು ಅಂದಾದಿ' ಗ್ರಂಥಗಳು, ನಾಯನಾರರ ಭಕ್ತಿಗೀತೆಗಳನ್ನು ಆಧರಿಸಿ ಈ ಪುರಾಣ ಕಾವ್ಯವನ್ನು ಈತ ರಚಿಸಿದ್ದಾನೆ"[೧೮]. ಪೆರಿಯ ಪುರಾಣದಲ್ಲಿ ಅರವತ್ತು ಮೂವರ ಪುರಾತನರ ಜೀವನ ಚರಿತ್ರೆಗಳು ಅಡಕವಾಗಿವೆ. ಹೆಸರೆ ಹೇಳುವಂತೆ ನಿಜಕ್ಕೂ ಪೆರಿಯ ಪುರಾಣವು ಪಿರಿಯ ಪುರಾಣವೇ ಆಗಿದೆ.

(ಪೆರಿಯ= ದೊಡ್ಡದು, ಹಿರಿದು) ಹದಿಮೂರು ಸರ್ಗಗಳಿಂದ ಕೂಡಿದ ಈ ಕಾವ್ಯದಲ್ಲಿ

ನಾಲ್ಕು ಸಾವಿರದ ಎರಡನೂರಾ ಎಂಬತ್ತಾರು ಪದ್ಯಗಳಿವೆ. ತಮಿಳುನಾಡಿನ ಬೃಹತ್ ಪುರಾಣ ಕಾವ್ಯವಷ್ಟೇ ಅಲ್ಲ ಅದು ಪವಿತ್ರ ಧರ್ಮ ಗ್ರಂಥವೂ ಎನಿಸಿದೆ. ತಮ್ಮ ತಮ್ಮ ನೆಲೆಯಲ್ಲಿ ನಿಂತು ಶಿವಾನಂದ ಅನುಭವವನ್ನು ಪಡೆಯುವುದು. ಸಾಧ್ಯವೆನ್ನುವ ಉತ್ತಮ ಸಂದೇಶವನ್ನು ಲೋಕಕ್ಕೆ ಕೊಟ್ಟ ಮಹತ್ತರ ಗ್ರಂಥವು 'ಪೆರಿಯ ಪುರಾಣ'ವನ್ನು ೧೨ನೇ ತಿರುಮುರಾಯಿಯಲ್ಲಿ ಜೋಡಿಸಿದ್ದಾರೆ. ಶೇಕ್ಕಿಳಾರನ ಮಹಾಪುರಾಣ ಕಾವ್ಯವನ್ನೇ ಆಧರಿಸಿ ಕನ್ನಡ, ತೆಲುಗು, ಸಂಸ್ಕೃತ, ಇಂಗ್ಲಿಷ್ ಮೊದಲಾದ ಭಾಷೆಗಳಲೆಲ್ಲ ಇಂದು ಹಲವಾರು ಕೃತಿಗಳು ಪ್ರಕಟವಾಗಿವೆ. ಕನ್ನಡದಲ್ಲಿ ಹರಿಹರ ಮತ್ತು ಸುರಂಗ ಕವಿಗಳಂತೂ ಈ ಪುರಾಣಕ್ಕೆ ಮಾರುಹೋಗಿದ್ದಾರೆ. ಪುರಾತನರಿಗೆ ಶರಣು ಹೋಗಿದ್ದಾರೆ. ಕಾರೈಕಾಲಮ್ಮೆಯಾರ್ ಅವಳ ಜೀವನ ಚರಿತ್ರೆಯನ್ನು ಅರಿಯಬೇಕಾದಲ್ಲಿ ಈ ಪೆರಿಯಾ ಪುರಾಣವನ್ನೇ ಓದಬೇಕು.

ನಾಯನಾರರ ಎಲ್ಲ ಭಕ್ತಿಗೀತೆಗಳನ್ನು ಪ್ರತಿಯೊಂದು ದೇವಾಲಯದಲ್ಲಿ ಪೂಜೆಯ ಕಾಲಕ್ಕೆ ಹಾಡುವಂತೆ ನಂಬಿ ಕವಿಯೂ ಅರಸನ ಮೂಲಕ ಏರ್ಪಾಡು ಮಾಡಿಸಿದ್ದನು. ತಮಿಳು ನಾಡಿನ ನಂಬಿ ಅಂಡಾರ್ ನಂಬಿ ಮತ್ತು ಶೇಕ್ಕಿಳಾರ್ ಕವಿಗಳನ್ನು ಶಿವಕವೀಂದ್ರರೆಂದು ಕರೆಯಬಹುದು. 'ಸುಂದರವೂ ಭವ್ಯವೂ ಆದ ಸಾವಿರಾರು ಶಿವದೇವಾಲಗಳನ್ನು ತಮಿಳುನಾಡಿನಲ್ಲಿ ಈಗಲೂ ಪ್ರತ್ಯಕ್ಷ ಕಂಡಾಗ ಆ ಅರವತ್ತು ಮೂವರ ಪುರಾತನರ ಅದ್ಭುತ ಚಿತ್ರ ಕಣ್ಮುಂದೆ ಕಟ್ಟುತ್ತದೆ. ಪ್ರತಿಯೊಂದು ಶಿವದೇವಾಲಯದಲ್ಲಿ ಅರವತ್ತು ಮೂವರ ಜನ ಪುರಾತನರ ಮೂರ್ತಿಗಳನ್ನು ಇಂದೂ ನಾವು ಕಾಣುತ್ತೇವೆ. ಆ ಪುರಾತನರಲ್ಲಿ ಕಾರಿಕಾಲಮ್ಮೆ ಇಪ್ಪತ್ತಾನ್ಲಕನೆಯವಳೆಂದು ಪ್ರಸಿದ್ಧ ಪಡೆದಿದ್ದಾಳೆ. ಈ ಪುರಾತನರ ಪ್ರಭಾವ ಕೇವಲ ತಮಿಳುನಾಡಿಗಷ್ಟೇ, ಸೀಮಿತವಾಗಿದೆ. ಸರ್ವತ್ರವೂ ಪಸರಿಸಿದೆ. ವಿಶೇಷವಾಗಿ ಕರ್ನಾಟಕದ ಸಾಹಿತ್ಯ, ಧರ್ಮ, ಸಂಸ್ಕೃತಿಗಳ ಮೇಲೆ ಪ್ರಭಾವ ಮುದ್ರೆ ಮೂಡಿದೆ."[೧೯]

## ತ್ರಿಷಷ್ಠಿ ಪುರಾತನರು

ಕನ್ನಡ ಕಾವ್ಯ ಕೃತಿಗಳಲ್ಲಿ ಅರವತ್ತುಮೂವರ ಪುರಾತನರ ಪುಣ್ಯ ಚರಿತ್ರೆಗಳನ್ನು ಓದುತ್ತೇವೆ. ಕನ್ನಡದಲ್ಲಿ ಮೊಟ್ಟಮೊದಲ ಈ ಚರಿತ್ರೆಗಳನ್ನು ಕಾಣುವುದು ಹದಿಮೂರನೇ ಶತಮಾನದ ಮಹಾಕವಿ ಹರಿಹರನ ರಗಳೆಗಳಲ್ಲಿ. ನಂಬಿಯಣ್ಣನ ರಗಳೆ, ತಿರುನೀಲಕಂಠನ ರಗಳೆ, ಬೇಡರ ಕಣ್ಣಪ್ಪನ ರಗಳೆ, ಕಾರಿಕಾಲಮ್ಮೆಯ ರಗಳೆ ಮೊದಲಾದವುಗಳಲ್ಲಿ ಹಾಗೂ ರಗಟಾ ಪ್ರಬಂಧದಲ್ಲಿಯೂ ಪುರಾತನದ ಭಕ್ತಿಕಂಪಿತ ಅದ್ಭುತ ಚರಿತ್ರೆಗಳನ್ನು ಕಂಡುಕೊಳ್ಳುತ್ತೇವೆ. ಅವು ಕನ್ನಡ ಸಾಹಿತ್ಯದ ಶಾಶ್ವತವಾದ

ನಿಧಿಯಿರುವುದು ಸರ್ವಶೃತ' ಶಿವನಿಗಾಗಿ, ಶಿವಭಕ್ತಿಗಾಗಿ ಜೀವಸವೆಸಿದ ಈ ಮಹಾನುಭಾವರ ಪುಣ್ಯ ಭೂಮಿಗಳನ್ನು ಸಂದರ್ಶಿಸಿ, ಅವರವರ ಜನ್ಮ ಸ್ಥಳದಲ್ಲಿ ವಾಸಮಾಡಿದ್ದ ಜನತೆಯಿಂದ ಪುರಾತನರ ಕತೆಗಳನ್ನು ಕೇಳಿ, ಶೇಕ್ಕಿಳಾರ್ ಕವಿಯ ಪೆರಿಯ ಪುರಾಣವನ್ನು ಓದಿ ಹರಿಹರ ತನ್ನ ರಗಳೆಗಳನ್ನು ರಚಿಸಿರಬೇಕೆಂದು ತೋರುತ್ತದೆ.

"the stories of these nayanmars became so popular ever in the distant kannada country, that the great veerasaiva kannada poet Harihar of the twelth centary came all the way from his cvartry on a piligrimage to the native places of these saints. He went back and produced popular Literary pieces called Roglala describing the lluip of the saints"[20].

ಪೆರಿಯ ಪುರಾಣವನ್ನು ಆಧರಿಸಿ ಸಂಸ್ಕೃತದಲ್ಲಿ ಉಪಮನ್ಯುಮುನಿ 'ಭಕ್ತವಿಲಾಸಂ' ಎಂಬ ಗ್ರಂಥ ಬರೆದಿದ್ದಾನೆ. ಆ ಗ್ರಂಥದ ಆಧಾರದಿಂದ ಹದಿನಾರನೇ ಶತಮಾನದ ಕವಿ ಚಕ್ರವರ್ತಿ ಸುರಂಗ ಕವಿಯ ಚಂಪು ಶೈಲಿಯಲ್ಲಿ ತ್ರಿಷಷ್ಠಿ ಪುರಾತನ ಚಾರಿತ್ರಂ' ಎಂಬ ಕಾವ್ಯ ರಚಿಸಿದ್ದಾನೆ. ಕನ್ನಡ ಸಾಹಿತ್ಯದಲ್ಲಿಯೇ ಪುರಾತನರನಲ್ಲಿ ಕುರಿತು ಬರೆದ ಮಹಾಕಾವ್ಯ ಇದಾಗಿದೆ"[೨೧]. ಕವಿಚಕ್ರವರ್ತಿ, ಸುರಂಗನ ತ್ರಿಷಷ್ಠಿ ಪುರಾತನ ಚಾರಿತ್ರವೆಂಬುದು ಕನ್ನಡ ಸಾಹಿತ್ಯದಲ್ಲಿ ಪುರಾತನರ ಚರಿತ್ರೆ ಕುರಿತು ಬರೆದ ಏಕೈಕ ಮಹಾಕಾವ್ಯ' ಸುರಂಗ ಕವಿ ಪುರಾತನರನ್ನು ಕಂಡ ರೀತಿ ಅದ್ಭುತವಾಗಿದೆ.

"ಧರೆ ಬೆರಲೆತ್ತಿ ಬಣ್ಣಿಸುತ್ತಿರಲ್ ಪೊಗಳ್ವಂ ಘನಭಕ್ತಿಯಂ ಕೃಪಾ ।

ಕರ ಶಿವಲಿಂಗಮಂ ಬಿಡದೆ ಪೂಜಿಸಿ ಸಂದ ಮಹಾನುಭವರಂ ।

ದುರಿತ ಸಮೂಹಮಂ ನೆರೆಯೆ ಸೋವರನರ್ಥಿಗಳೊಳ್ವಾನಿವರಂ ।

ಶರಣನೆ ಕಾವರಂ ಸುಕೃತ ಜೀವರನೊಬ್ಬ ಅರವತ್ತು ಮೂವರಂ'[೨೨] ಈ ಲೈನ್‌ನಲ್ಲಿ ಹಳೆಗನ್ನಡ ಬರಬೇಕು

ನಿಜಗುಣ ಶಿವಯೋಗಿಗಳು ಕೂಡ ಪುರಾತನರ ತ್ರಿವಿಧಿ ರಚಿಸಿ, ಒಬ್ಬೊಬ್ಬ ಪುರಾತನರ ಘನ ಮಹಿಮೆಯನ್ನು ಒಂದೊಂದು ತ್ರಿಪದಿಯಲ್ಲಿ ಹಾಡಿ ಹೊಗಳಿದ್ದಾರೆ.

'ಉತ್ತಮಗಣೇಶ್ವರರ ಮೊತ್ತದೊಳು ನಿಜಕೀರ್ತಿ

ವೆತ್ತ ಮಹಿಮೆಗಳನೊಳಗೊಂಡ ಶರಣರರು

ವತ್ತು ಮೂವರನು ಪೊಗಳುವೆಂ"[೨೩]

ಇಂತಹ ಪುರಾತನರ ಮಹಿಮೆಗಳನ್ನು ಬರೆದು, ಓದಿ ಕೇಳಿ, ಪೇಳಿದವರಿಗೆ ನಿಜ ಸುಖ ದೊರೆಯುವುದೆಂದು ನಿಜಗುಣರು ಹೇಳಿದ್ದಾರೆ."[೨೪]

ಶರಣರರುವತ್ತು ಮೂವರ ಮಹಿಮೆಗಳನಿಂತು

ಬರದೋದಿ ಕೇಳಿ ಪೇಳ್ದವರ್ಗೆ ನಿಜಸುಖಂ

ದೊರೆವುದಿಹಂ ಪರದೊಳಿದು ಸಿದ್ಧ"[೨೫]

ಈ ಪುರಾತನರ ಚರಿತ್ರೆಗಳನ್ನು ಕೆಳಗಿನ ಕನ್ನಡ ಗ್ರಂಥಗಳಲ್ಲಿಯೂ ಕಾಣುತ್ತೇವೆ.

| ಕವಿ | ಕಾವ್ಯ | ರೂಪ |
|---|---|---|
| ೧. ವೀರಭದ್ರ | ಅರವತ್ತು ಮೂವರು ಪುರಾತನರ ಚರಿತ್ರೆ | ವಾರ್ಧಕ ಷಟ್ಪದಿ |
| ೨. ಶಿವಯೋಗಿ | ಅರವತ್ತು ಮೂವರು ಪುರಾತನರ ಚರಿತ್ರೆ | ವಾರ್ಧಕ ಷಟ್ಪದಿ |
| ೩. ಸೋಮಶೇಖರ | ಅರವತ್ತು ಮೂವರ ಸಾಂಗತ್ಯ | ಸಾಂಗತ್ಯ |
| ೪. ಕಳಲೆ ನಂಜರಾಜ | ಅರವತ್ತು ಮೂವರ ತ್ರಿವಿಧಿ | ತ್ರಿಪದಿ |
| | ಪುರಾತನ ದೇವಿಯರ ತ್ರಿವಿಧಿ | ತ್ರಿಪದಿ |
| | ಅರವತ್ತು ಮೂವರ ಪುರಾತನರ ಚಾರಿತ್ರ್ಯ | ಗದ್ಯ |
| | ಪ್ರಾಕ್ತನ ಗಣ ಕಥಾವಳಿ | |
| | ಪುರಾತನರ ಪ್ರಕರಣಗಳು | |
| ೫. ಕುಮಾರ ಚನ್ನಬಸವ | ಪುರಾತನರ ಚರಿತ್ರೆ | |
| ೬. ಭದ್ರ ವೀರಸುತ | ಪುರಾತನರ ಪುರಾಣ | |
| | ಸರ್ವ ಪುರಾತನರ ಪುರಾಣ | |
| ೭. ಲಕ್ಕಣ್ಣ ದಂಡೇಶ | ಶಿವತತ್ವ ಚಿಂತಾಮಣಿ | ಷಟ್ಪದಿ (ಸಂ.೩೫೨) |
| ೮. ವಿರೂಪಾಕ್ಷ ಪಂಡಿತ | ಚನ್ನಬಸವ ಪುರಾಣ | ಷಟ್ಪದಿ (ಸಂ.೫೬) |

ಒಬ್ಬೊಬ್ಬರನ್ನೇ ಕುರಿತು ಬರೆದ ಗ್ರಂಥಗಳನ್ನು ಕನ್ನಡದಲ್ಲಿ ಕಾಣುತ್ತೇವೆ.

| ಪುರಾತನರು | ಕೃತಿ | ಕವಿ |
|---|---|---|
| ನಂಬಿಯಣ್ಣ | ಸೌಂದರ ಪುರಾಣ | ಬೊಮ್ಮರಸ |
| ನಂಬಿಯಣ್ಣ | ಸೌಂದರ ವಿಲಾಸ | ಅಣ್ಣಾಜಿ |
| ಚೇರಮ | ಚೇರಮ ಕಾವ್ಯ | ಚೇರಮಾಂಕ |
| ಸಿರಿಯಾಳ | ಸಿರಿಯಾಳ ಸೆಟ್ಟಿಯ ಸಾಂಗತ್ಯ | ಮಹಾದೇವ |
| ಸಿರಿಯಾಳ | ಸಿರಿಯಾಳ ಸತ್ವ ಪರೀಕ್ಷೆ | ಶಾಂತಕವಿ |
| ಸಿರಿಯಾಳ | ಸಿರಿಯಾಳ ಚರಿತ್ರೆ | ಮಹಾಂತ ದೇಶಿಕ |
| ಸಿರಿಯಾಳ ಜಯರಾಮಚಾರ್ಯ | ಸಿರಿಯಾಳ ರಾಜ | |
| ಪಗಲ್ಚೋಳ | ಚೋಳರಾಜ ಸಾಂಗತ್ಯ | ಲಿಂಗ |
| ಕಣ್ಣಪ್ಪ | ಕಣ್ಣಪ್ಪನವರ ಕಥೆ' [೨೭] | |

ಇತ್ತಿತ್ತಲಾಗಿ ಅಂದರೆ ಹತ್ತೊಂಬತ್ತುನೂರ ಎರಡರಲ್ಲಿ ಪೆರಿಯ ಪುರಾಣ ಆಧಾರವಾಗಿಟ್ಟುಕೊಂಡು ಮದ್ರಾಸಿನ ಶ್ರೀಂ ಎಸ್.ಸಿ. ಚನ್ನವೀರಪ್ಪ ಅವರು 'ಪುರಾತನ ಭಕ್ತವಿಲಾಸಂ' ಎಂಬ ಗದ್ಯ ಕೃತಿಯನ್ನು ಪ್ರಕಟಿಸಿದ್ದಾರೆ."[೨೮] ಅದೇ ರೀತಿ ಹುಬ್ಬಳ್ಳಿಯ ಶ್ರೀ ಮಿರ್ಜಿ ಮಹಾರಾದ್ರಪ್ಪನವರು ಕ್ರಿಸ್ತಶಕ ಸುಮಾರು ಹತ್ತೊಂಬತ್ತನೂರ ಮೂವತ್ತೊಂದರಲ್ಲಿ ಅರವತ್ತು ಮೂವರು ಪುರಾತನರು ಎಂಬ ಕೃತಿಯನ್ನು ಸುರಂಗ ಕವಿಯ ಕಾವ್ಯವನ್ನಾಧರಿಸಿ ಬರೆದಿದ್ದಾರೆ. ಅಲ್ಲದೆ ವೀರಶೈವ ಪುರಾಣಗಳಲ್ಲೆಲ್ಲ ಈ ಪುರಾತನರನ್ನು ಸ್ತುತಿಸಿರುವ ಪದ್ಯಗಳನ್ನು ಕಾಣುತ್ತೇವೆ"[೨೯].

ಶಿವಶರಣರು ಗೌರವಭಾವದಿಂದ ಈ ಪುರಾತನರನ್ನು ತಮ್ಮ ವಚನಗಳಲ್ಲಿ ಹಾಡಿ ಹೊಗಳಿದ್ದನ್ನು ಕಾಣುತ್ತೇವೆ. ಪುರಾತನರನ್ನು ಆದ್ಯರೆಂದು, ಪ್ರಮಥರೆಂದು ಸಂಬೋಧಿಸಿದ್ದಾರೆ. ಆದ್ಯರ ವಚನ ಪರುಷ ಕಂಡಣ್ಣ"[೩೦] ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ; ೨ ಹಾಲತೊರೆಗೆ ಬೆಲ್ಲದ ಹೆಸರು_... ತಟರಾಜದ ನೊರೆತೆರೆಯಂತೆ ಆದ್ಯರ ವಚನವಿರಲು .. .. .. .. ನಿಮ್ಮಾಣೆ ನಿಮ್ಮ ಪ್ರಮಥ ರಾಣೆ"[೩೧]

ಬಸವಣ್ಣನವರಿಗಂತೂ ರಾಮಾಯಣ, ಮಹಾಭಾರತ ವ್ಯಕ್ತಿಗಳಿಗಿಂತಲೂ ಪುರಾತನರೆಂದರೆ ಬಲು ಪೂಜ್ಯ ಭಾವನೆ, ತಮ್ಮ ವಚನಗಳಲೆಲ್ಲ ಅವರ ಹೆಸರೆನ್ನೆತ್ತಿ ಕೊಂಡಾಡಿದುದನ್ನು ಕಾಣುತ್ತೇವೆ.

'ನಾರಾಯಣ ವೃದ್ಧ ಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ

ಧಾನವ ಬೇಡಿದ, ಕೊಟ್ಟ ಬಲಿ ಬಂಧನಕ್ಕೊಳಗಾದ.

ಈಶ ಜಂಗಮವಾಗಿ ಬಂದು ದಾಸನ ವಸ್ತ್ರದ ಬೇಡಿದ

ಕೊಟ್ಟ ದಾಸ ತವನಿಧಿಯ ಪಡೆದ.

ನಾರಾಯಣ ಹಾರುವನಾಗಿ ಬಂದು ಕರ್ಣನ ಕವಚವ ಬೇಡಿದ

ಕೊಟ್ಟ ಕರ್ಣ ಕಾಳಗದಲ್ಲಿ ಮಡಿದ

ಕಾಮಾರಿ ಜಂಗಮವಾಗಿ ಬಂದು ಸಿರಿಯಾಳನ ಮಗನ ಬೇಡಿದ

ಕೊಟ್ಟ ಸಿರಿಯಾಳ ಕಂಚಿಯ ಪುರವ ಕೈಲಾಸಕ್ಕೊಯ್ದ, ಅದು ಕಾರಣ

ಇಲ್ಲಿಯೂ ಲೇಸು, ಅಲ್ಲಿಯು ಲೇಸು ಕೊಡಿರೆ ಕೂಡಲ ಸಂಗನ ಶರಣರಿಗೆ"[೩೨]

ವೀರ ಶೈವಧರ್ಮಕ್ಕೆ ಸಂಬಂಧಪಟ್ಟ ಅನೇಕ ಪುರಾಣ ಕಾವ್ಯಗಳಲ್ಲಿಯೂ ಕೂಡ ಪುರಾತನರನ್ನು ಕುರಿತ ಉಲ್ಲೇಖಗಳು ಬಂದುದನ್ನು ಕಾಣುತ್ತೇವೆ. ವೀರಶೈವ ಮಹಾಪುರಾಣ, ಬಸವ ಪುರಾಣ, ಪ್ರೌಢರಾಯನ ಕಾವ್ಯ, ಪಾಲ್ಕುರಿಕೆ ಸೋಮನಾಥ ಪುರಾಣ ಮೊದಲಾದವರುಗಳಲ್ಲಿ ಇದನ್ನು ಕಾಣಬಹುದು. ಧಾರ್ಮಿಕ ಆಚರಣೆಗಳಲ್ಲೂ ವೀರಶೈವರು ಆ ನಾಯನಾರರನ್ನು ಗೌರವದಿಂದ ಕಾಣುತ್ತಾ ಬಂದಿದ್ದಾರೆ. ಇಂದಿಗೂ ಅರವತ್ತು ಮೂವರು

ಪುರಾತನರ ಮಂಟಪ ಪೂಜೆಗಳನ್ನು ಮಾಡಿ ಅವರಿಗೆ ಗೌರವ ಸಲ್ಲಿಸುತ್ತಿರುವುದನ್ನು ಕಾಣುತ್ತೇವೆ. ಅನೇಕ ಪ್ರಸಾರ ನಿಲಯಗಳಲ್ಲಿಯೂ ಈ ಪುರಾತನರ ಹೆಸರಿನಿಂದ ಪ್ರತ್ಯೇಕ ಕೋಣೆಗಳನ್ನು ಭಕ್ತರು ಕಟ್ಟಿಸಿ ಕೊಟ್ಟಿದುದನ್ನು ಉಲ್ಲೇಖಿಸಬಹುದಾಗಿದೆ.

ಶಿವದೇವಾಲಯಗಳಲ್ಲಿ ಪುರಾತನರ ವಿಗ್ರಹಗಳು ಪ್ರತಿಷ್ಠಾಪನೆಯಾದುದನ್ನು ಕಾಣುತ್ತೇವೆ. ವೀರಶೈವಧರ್ಮ ನಾಯನಾರ ಧರ್ಮ. ಅವರ ಸಂಸ್ಕೃತಿ ಪುರಾತನರ ಸಂಸ್ಕೃತಿಯ ಮತ್ತು ಇವರ ಭಕ್ತಿಪರ ಕಾವ್ಯಗಳಾಗಲಿ, ಪುರಾಣಗಳಾಗಲಿ ತಮಿಳುನಾಡಿನ ಶಿವಭಕ್ತರ ಹಾಸುಹೊಕ್ಕು, ಹೀಗೆ ವೀರಶೈವರು ಆಚಾರ, ವಿಚಾರಗಳಲ್ಲಿ, ಧಾರ್ಮಿಕ ವಿಧಿ ಸಂಸ್ಕಾರಗಳಲ್ಲಿ, ಸಾಹಿತ್ಯ ಸಂಪಾದನೆಯಲ್ಲಿ ಪುರಾತನರ ಆದರ್ಶ ಮಾರ್ಗಗಳನ್ನಿಟ್ಟುಕೊಂಡು ಅವರಲ್ಲಿ ಲೋಪ ದೋಷಗಳಿದ್ದವನ್ನು ಬಿಟ್ಟು ಕೊಟ್ಟು, ಉತ್ತಮ ಜೀವನ ಮೌಲ್ಯಗಳನ್ನು ಅಳವಡಿಸಿಕೊಂಡು ಬಂದಿದ್ದಾರೆ. ಅರವತ್ತು ಮೂವರು ಪುರಾತನರೆಂದರೆ ವೀರಶೈವರಿಗೆ ಅಷ್ಟು ಪೂಜ್ಯ ಭಾವ, ಗೌರವ, ಆದರ, ಅಭಿಮಾನ, ಅವರ ಸಂಸ್ಕಾರದ ಫಲವೇ ಶಿವಶರಣರ ಉದಯಮಾನವೆಂದು ಹೇಳಬಹುದು.

ಪುರಾತನರಲ್ಲಿ ಹತ್ತೊಂಬತ್ತು ಜನ ಶಿವಭಕ್ತರ ಅನುಗ್ರಹದಿಂದ ಮುಕ್ತಿಯನ್ನು ಸಂಪಾದಿಸಿದ್ದಾರೆ. ಹನ್ನೆರಡು ಜನ ಗುರುಗಳ ಅನುಗ್ರಹದಿಂದ ಸದ್ಗತಿ ಹೊಂದಿದ್ದಾರೆ. ಉಳಿದ ಮೂವತ್ತೆರಡು ಜನ ಶಿವಲಿಂಗದಿಂದ ಮೋಕ್ಷವನ್ನು ಪಡೆದಿದ್ದಾರೆ. ಅಂತಹ ಅರವತ್ತು ಮೂವರು ಜನ ಪುರಾತನರ ಹೆಸರುಗಳನ್ನು ಸ್ಮರಿಸುವುದು ಒಂದು ಪುಣ್ಯ ವಿಶೇಷ. ತಮಿಳುನಾಡಿನ ಈ ಪುರಾತನರ ಹೆಸರುಗಳು ಕನ್ನಡದಲ್ಲಿ ಕೆಲವೊಂದು ಬದಲಾವಣೆ ಹೊಂದಿವೆ.

| ಕನ್ನಡ | ತಮಿಳು |
|---|---|
| ೧. ಸೌಂದರನಂಬಿ | ಸುಂದರ ಮೂರ್ತಿ |
| ೨. ತಿರುನೀಲಕಂಠ | ತಿರುನೀಲಕಂಠ |
| ೩. ಇಹಪ್ಪಗೆಯಾಂಡ | ಇಯರ್ಪ್ಗೈ |
| ೪. ಎಳೆಯಾಂಡ ಗುಡಿಮಾರ | ಇಳೈಯಾನ್ ಕುಡಿಮಾರ್ |
| ೫. ಸೇದಿರಾಜಯ್ಯ | ಮೆಯ್‌ಪ್ಪೆರುಳ್ |

| ಕನ್ನಡ | ತಮಿಳು |
|---|---|
| ೬. ಮೆರೆಮಿಂಡದೇವ | ವಿರನ್‌ಮಿಂಡ |
| ೭. ಅಮರನೀತಿ | ಅಮರ್‌ನೀತಿ |
| ೮. ಇರಿಭಕ್ತರು | ಎರಿಭಕ್ತ |
| ೯. ಏನಾದಿನಾಥ | ಏನಾದಿ |
| ೧೦.ಕಣ್ಣಪ್ಪ ದೇವರು | ಕಣ್ಣಪ್ಪ |
| ೧೧. ಕುಂಗಲಿ ಯಕ್ಕಲಯ | ಕಂಗಲಿ ಕರಿಯಾಂಡ |
| ೧೨. ಮಾನಕಂಜರ | ಮಾನಕ್ಕಂಜಾರ್ |
| ೧೩. ಅರಿವಾಳ್ತಾಂಡರು | ಅರಿವಾಟ್ಟಾಯ |
| ೧೪. ಅನ್ಯೆನಾರರು | ಆನಾಯ |
| ೧೫. ವಲಘಂಡಮೂರ್ತಿಗಳು | ಮೂರ್ತಿನಾಯನಾರ್ |
| ೧೬. ಮುರುಘ | ಮುರುಗರು |
| ೧೭. ರುದ್ರಪಶುಪತಿಗಳು | ರುದ್ರಪಶುಪತಿ |
| ೧೮. ತಿರುನಾಳ್ಪೋವರು | ತಿರುನಾಳೈಪ್ಪೋವಾರ್ |
| ೧೯. ತಿರುಕುರುಂಪಿ ತೊಂಡರು | ತಿರುಕ್ಕುರಿಪ್ಪ ತ್ತೊಂಡ |
| ೨೦. ತಂಡೇಶ | ಚಂಡೇಶ್ವರ |
| ೨೧. ವಾಗೀಶ್ವರರು | ತಿರುನಾವುಕ್ಕರರು |

| ಕನ್ನಡ | ತಮಿಳು |
| --- | --- |
| ೨೨. ಕುಲಚ್ಚರಿಯರು | ಕುಲಚ್ಚಿರೈ |
| ೨೩. ಪಿರುಮಳಲೆ ಕುರುಂಬರು | ಪೆರುಮಿಳಲೈ ಕುರುಂಬ |
| ೨೪. ಕಾರಿಕಾಲೆಮ್ಮೆ | ಕಾರೈಕಾಲಮ್ಮೈ |
| ೨೫. ಅಪ್ಪೋದಿಯಡಿಗಳು | ಅಪ್ಪೊದಿಯಡಿಗಳ್ |
| ೨೬. ತಿರುನೀಲನಕ್ಕ | ತಿರುನೀಲನಕ್ಕರು |
| ೨೭. ನೇಮಿನಂದಿ | ನಮಿನಂದಿಯಡಿಗಳ್ |
| ೨೮. ಪಿಳ್ಳೆನಾಯಾನಾರ್ | (ತಿರುಜ್ಞಾನ ಸಬಂಧಿ) |
| | ತಿರುಜ್ಞನ ಸಂಬಂಧಮೂರ್ತಿ |
| ೨೯. ಕಲಿಕಾಮದೇವರು | ಏಯರ್‌ರೋನ್ ಕಲಿಕ್ಕಾಮ |
| ೩೦. ತಿರುಮೂಲದೇವರು | ತಿರುಮೂಲ |
| ೩೧. ನಾಟ್ಯ ಮಹತ್ತಂಡಿ | ದಂಡಿಯಡಿಗಳ್ |
| ೩೨. ಅಚ್ಚುತರು | ಮೂರ್ತಿ |
| ೩೩. ಸೋಮಾಸಿಮಾರರು | ಸೋಮಾಸೀಮಾರ |
| ೩೪. ಸಾಂಖ್ಯನಾರರು | ಶಾಕ್ಯನಾಯನಾರ್ |
| ೩೫. ಚಿರುಪುಲಿಯಾಂಡರು | ಶಿರುಪ್ಪುಲಿ |
| ೩೬. ಚಿರುತೊಂಡ ಭಕ್ತರು | ಶಿರುತ್ತೊಂಡ |

| ಕನ್ನಡ | ತಮಿಳು |
|---|---|
| ೩೭. ಚೇರಮರಾಜರು | ಚೇರಮಾನ್ ಪೆರುಮಾಳ್ |
| ೩೮. ಗಣನಾಥ | ಗಣನಾಥ |
| ೩೯. ವೆಳ್ಳೂತರು | ಕೂತ್ತೂವ |
| ೪೦. ನರಸಿಂಗಮೊನೆಯರು | ನರಸಿಂಗಮುನ್ನೈಯರೈಯ |
| ೪೧. ಪಗಲ್‌ಚೋಳ | ಪುಗಲ್ಚ್ಚೋಳ |
| ೪೨. ಅತಿಭಕ್ತ | ಅತಿಭಕ್ತ |
| ೪೩. ಕಲಿಕುಂಭರು | ಕಲಿಕ್ಕಂಬ |
| ೪೪. ಕಲಿಯನಾಯನಾರರು | ಕಲಿಯನಾಯನಾರ್ |
| ೪೫. ಕಳಚೆತ್ತಿಯಾಂಡರು | ಶಕ್ತಿನಾಯಿನಾರ್ |
| ೪೬. ಐಯಡಿಗಳು | ಐಯ್ಯಡಿಗಳ್ |
| ೪೭. ಕಣಂಬಲ್ ನಂಬಿಗಳು | ಕಣಂಪುಲ್ಲ |
| ೪೮. ಕಡವೂರಕಾರಿಗಳು | ಕೇರಿನಾಯನಾರ್ |
| ೪೯. ಸೌಂದರ ಪಾಂಡ್ಯ | ನೆಡುಮಾರ |
| ೫೦. ವಾಹಿಲ್ಯರು | ವಾಯಿಲಾರ್ |
| ೫೧. ಮೊನೆಯಾಂಡರು | ಮೊನ್ನೈಯ್ಯಡುವಾರ್ |
| ೫೨. ಕುಲಚಂಗ | ಕಳಳ್‌ಸಿಗ |

| ಕನ್ನಡ | ತಮಿಳು |
| --- | --- |
| ೫೩. ಅಡವಘಯ ಪೆರುಮಾಳರು | ಇಡಂಗಳ್ ನಾಯ್ಯನಾರರು |
| ೫೪. ಚಿರುತೊಣೆಯಾಂಡರ್ | ಶರುತ್ತು ಣ್ಯೈ |
| ೫೫. ಪಗಲ್ ತೊಣೆಯಾಂಡರ್ | ಪುಗಲ್ತ್ತುಣ್ಯೈ |
| ೫೬. ಕೊಲ್ಪುಲಿಯಾಂಡರು | ಕೋಟ್ಪುಲಿ |
| ೫೭. ಊರ್ವಶಿಲೆಯಿಂಡರ್ | ಪೂಶಲಾರ್ |
| ೫೮. ಮಾಂಗಾಯಕ್ಕ | ಮಂಗಯಕ್ಕರಸಿ |
| ೫೯. ನೈಶಭಕ್ತರು | ನೇಶನಾಯನಾರ್ |
| ೬೦. ಕಳಚೆಂಗು ಪೆರುಮಾಳೆ | ಕೊಚ್ಚೆಂಗಣ್‌ಚೋಳ |
| ೬೧. ತಿರುನೀಲಕಂಠ ಪಾಣರು | ತಿರುನೀಲಕಂಠಯಾಪ್ಪಾನ |
| ೬೨. ಜಡೆಯನೈನಾರರು | ಶಡೈನಾಯನಾರ್ |
| ೬೩. ಯಸ್ಯ ಜ್ಞಾನಿ | ಇಶೈಜ್ಞಾನಿಯಮ್ಮೈ |

ಆಧಾರ:ಎಸ್.ಸಿ. ಚನ್ನವೀರಪ್ಪ: ಪುರಾತನ ಭಕ್ತವಿಲಾಸ ಪುಟ.೧೩–೧೪

ಎಸ್.ಸಿ. ಚನ್ನವೀರಪ್ಪ: ಪುರಾತನ ಭಕ್ತವಿಲಾಸ ಪುಟ.೧೫–೧೮

## ತಮಿಳು ಶೈವಸಿದ್ಧಾಂತ

ದಕ್ಷಿಣ ದೇಶದ ಶೈವ ಶಾಖೆಗಳಲ್ಲಿ ತಮಿಳು ದೇಶದ ಶೈವಸಿದ್ಧಾಂತ ಮತ್ತು ಕನ್ನಡ ನಾಡಿನ ವೀರಶೈವ ಧರ್ಮ– ಇವು ಬಹಳ ಪ್ರಮುಖವಾದವುಗಳು. ತಮಿಳು ಶೈವಸಿದ್ಧಾಂತದ ಮೂಲ ಮತ್ತು ಬೆಳವಣಿಗೆ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗದಿದ್ದರೂ ಸುಮಾರು ಕ್ರಿ.ಶ. ೮ನೇ ಶತಮಾನದಿಂದ ೧೩ನೇ ಶತಮಾನದ ಒಳಗೆ ಎಂದು ಹೇಳಬಹುದು.

ಹಿಂದೂ ಧರ್ಮವು ದಕ್ಷಿಣ ಇಂಡಿಯಾಕ್ಕೆ ಬಂದ ಪ್ರಾರಂಭದಲ್ಲಿ ಶಿವ ಮತ್ತು ವಿಷ್ಣು ಪ್ರಮುಖ ದೇವರುಗಳಾಗಿ ಪೂಜೆಗೊಳ್ಳುತ್ತಿದ್ದರು."[೩೩] ಭಕ್ತರ ಇಷ್ಟದಂತೆ ಒಬ್ಬೊಬ್ಬ ದೇವತೆಗೆ ಒಂದೊಂದು ಸಮಯದಲ್ಲಿ ಪ್ರಮುಖ ಸ್ಥಾನ ಸಿಗುತ್ತಿತ್ತು. ಕಾಲಕ್ರಮೇಣ ಇವು ಬೇರೆ ಬೇರೆ ಮತಗಳನ್ನು ಎದುರಿಸಬೇಕಾಯಿತು.

ಒಂದೆಡೆ ನಾಸ್ತಿಕವಾದ, ಇನ್ನೊಂದೆಡೆ ವೈದಿಕ ಧರ್ಮ ತಿರಸ್ಕರಿಸುವ ಜೈನ, ಬೌದ್ಧ, ಧರ್ಮಗಳು; ಮತ್ತೊಂದೆಡೆ ತಮ್ಮ ಧರ್ಮಗಳಲ್ಲಿಯೇ ಉಂಟಾದ ಸಂಪ್ರದಾಯಬದ್ಧ ಅಂಧ ಶ್ರದ್ಧೆಗಳು– ಇವೆಲ್ಲವನ್ನು ಶೈವ, ವೈಷ್ಣವ ಧರ್ಮಗಳು ಎದುರಿಸಿ ಪರಿವರ್ತನೆಯನ್ನುಂಟು ಮಾಡಬೇಕಾಯಿತು.

ಈ ಕಾರ್ಯವನ್ನು ತಮಿಳು ದೇಶದಲ್ಲಿ ಶಿವಭಕ್ತರಾದ ನಾಯನಾರರು, ವಿಷ್ಣುಭಕ್ತರಾದ ಆಳ್ವಾರರೂ ಸಾಧಿಸಿದರು. ಅದರಲ್ಲಿಯೂ ಮುಖ್ಯವಾಗಿ ನಾಯನಾರರು ತಮ್ಮ ಭಕ್ತಿಗೀತೆಗಳಿಂದ ಅದ್ಭುತ ಪರಿಣಾಮವನ್ನು, ಪರಿವರ್ತನೆಯನ್ನು ಸಮಾಜದಲ್ಲಿ ಉಂಟು ಮಾಡಿದರು.

"ಶೈವಮತಕ್ಕೆ ಹೆಚ್ಚಾಗಿ ರಾಜಾಶ್ರಯ ಸಿಕ್ಕಿದುದು ಕೂಡ ಅದು ಇನ್ನೂ ಹೆಚ್ಚು ಪ್ರಭಾವ ಶಾಲಿಯಾಗುವುದಕ್ಕೆ ಅನುಕೂಲವಾಯಿತು. ಅನೇಕ ಶೈವಗ್ರಂಥಗಳು. ತಮಿಳಿನಲ್ಲಿ ರಚಿತವಾದವು. ನಾಯಾನಾರರು ಶಿವನ ಉಗ್ರ ರೂಪವನ್ನು ತೊಡೆದು ಹಾಕಿ ಶಾಂತಿರೂಪನಾದ ಶಿವನ ನಿಜಸ್ವರೂಪವನ್ನು ಬೆಳಗಬಲ್ಲ ಭಕ್ತಿಗೀತೆ ಹಾಡಿದರು. ಶಿವಭಕ್ತರ ಈ ಕೀರ್ತನೆಗಳ ಸಂಗ್ರಹವು ತೇವಾರಂ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು"[೩೪].ಅಲ್ಲದೆ ಶಿವಭಕ್ತರ ಭಕ್ತಿಗೀತೆಗಳಲ್ಲಿ ಹೊರಹೊಮ್ಮಿದ ಶೈವ ದರ್ಶನವನ್ನು ತರ್ಕಬದ್ಧವಾದ ಸಿದ್ಧಾಂತ ರೂಪದಲ್ಲಿ ಪ್ರತಿಪಾದಿಸುವ ಸೂತ್ರಗಳು ರಚನೆಯಾದವು. ಮೆಯ್ ಕುಂಡದೇವನ 'ಶಿವಜ್ಞಾನ ಭೋದ' ಅರುಳ್‌ನಂದಿಯ 'ಶಿವಜ್ಞಾನಸಿದ್ದಿ' ಉಮಾಪತಿಯ 'ಶಿವಪ್ರಕಾಶ' ಮೊದಲಾದ ಹದಿನಾಲ್ಕು ತಮಿಳು ಗ್ರಂಥಗಳು ಶೈವಧರ್ಮದ ಚಳವಳಿ ಬಗ್ಗೆ ವಿವರಿಸುತ್ತವೆ.

**ಶೈವಚಳವಳಿ**

'ಕನ್ನಡ ನಾಡಿನಲ್ಲಿ ಬಸವಾದಿ ಶಿವಶರಣರಿಂದ ವಿಶಿಷ್ಟ ಚಳವಳಿಯಾಗಿ ರೂಪತಾಳಿದ ವೀರಶೈವಧರ್ಮಕ್ಕೂ, ತಮಿಳುನಾಡಿನಲ್ಲಿ ಅದಕ್ಕೂ ಮುಂಚೆ ಶೈವ ಪುರಾತನರಿಂದ ಪ್ರಚಾರವಾದ ಶೈವಧರ್ಮಕ್ಕೂ ವಿಶೇಷವಾದ ನಂಟಿದೆ. ಈ ಶೈವ ಪುರಾತನರಲ್ಲಿ ಅಪ್ಪರ್, ಸಂಬಂಧರ್, ಸುಂದರರ್ ಎಂಬುವರು ಮೂವರು ಪುರಾತನ ಶ್ರೇಷ್ಠ ಸಮಯಾಚಾರ್ಯರು. ಈ ಧರ್ಮವು ವೈಷ್ಣವ ಹಾಗೂ ಜೈನಮತಗಳ ದಾಳಿಯಲ್ಲಿ ಸಿಕ್ಕಿ ನಾಶವಾಗದಂತೆ ಕಾಪಾಡಿಕೊಂಡು ಬಂದ ಮಹಾತ್ಮರೆನಿಸಿದ್ದಾರೆ. ಇವರು ಹಾಡಿರುವ ತೇವಾರಂಗಳೆಂದು ಪ್ರಸಿದ್ಧವಾದ ಪದಿಗಳನ್ನು ತಮಿಳುನಾಡಿನ ಶೈವರು ಅನುದಿನವು ಭಕ್ತಿಯಿಂದ ಹಾಡಿದ ನಿದರ್ಶನಗಳಿವೆ.

ಶಿವಭಕ್ತರ ಹಾಡುಗಳಲ್ಲಿ ಕಂಡು ಬರುವ ಭಕ್ತನ ಅಂತರಂಗ ನಿವೇದನೆ, ಮಾನವ ಕಲ್ಯಾಣದ ಬೋಧನೆಗಳು, ಉಪದೇಶಗಳು ನಮ್ಮ ಶಿವಶರಣರ ಹೃದಯವನ್ನು ಮುಟ್ಟಿ ಕಲುಕಿರುವುದು, ಅವರುಗಳಲ್ಲಿ ವಿಶೇಷವಾದ ಗೌರವಾದರಗಳನ್ನಿಟ್ಟಿರುವುದು, ಶರಣರ ವಚನಗಳಲ್ಲಿ ವ್ಯಕ್ತವಾಗಿದೆ.     ಶಿವಶರಣರು ಗುರಿಯಾಗಿಟ್ಟುಕೊಂಡ, ಜಾತಿಕುಲಗಳನ್ನು ತೊರೆದು ಹಾಡುವ, ಗಂಭೀರವಾದ ಉದ್ದೇಶದಲ್ಲಿ, ಸಾಮಾಜಿಕ ವಿಪರ್ಯಾಸಗಳ ವಿರುದ್ಧದ ಹೋರಾಟದಲ್ಲಿ ಈ ಪುರಾತನರ ಬಾಳು, ಸಂದೇಶಗಳು ಹೆಚ್ಚು ಅರ್ಥ ಪೂರ್ಣವಾಗಿ, ಪೂರ್ವಭಾವಿಯಾದ ಹಿನ್ನೆಲೆಯನ್ನು ಒದಗಿಸಿರುವುದನ್ನೆ ನಾವು ಕಾಣುತ್ತೇವೆ.

ಕಾಪಾಲಿ, ಕಾಳಿಮುಖರಂಥ ಉಗ್ರ ಶೈವಧರ್ಮಿಗಳಿಂದ ಜನಸಂಪರ್ಕ ಕಡಿದುಕೊಂಡು, ಸುಡುಗಾಡು ಸೇರಿದ್ದ ಶೈವ ಧರ್ಮವು, ಮಾನವ ಕಲ್ಯಾಣದ ತಿಳಿವು ತಂದುಕೊಂಡು ಮತ್ತೆ

ಜನಮನ ಸೂರೆಗೊಳ್ಳುವಂತೆ ಮಾಡಿದ ಶ್ರೇಯಸ್ಸು ತಮಿಳುನಾಡಿನ ಶಿವಭಕ್ತರಿಗೆ ಸಲ್ಲುತ್ತದೆ."[೨೫] ಆದ್ದರಿಂದಲೇ ಬಸವಾದಿ ಶಿವಶರಣರು ಈ ಭಕ್ತರನ್ನು ಪುರಾತನ ಪುರುಷರೆಂದು ಗೌರವಿಸಿದರು. ಅವರ ಧಾರ್ಮಿಕ, ಸಾಮಾಜಿಕ ಸ್ವರೂಪದ ಚಳವಳಿಗೆ ಅವರ ಉಪದೇಶಗಳನ್ನು ಆಧಾರವಾಗಿಟ್ಟುಕೊಂಡರು. ಪುರಾತನರು ಮಾನವ ಧರ್ಮದ ಅಡಿಗಲ್ಲ ಮೇಲೆ ನಿಂತ, ಸುಂದರವಾದ ದೈವಿಕ ಭಾವನೆಗಳನ್ನು ತಮ್ಮ ತೇವಾರ ಪದಗಳಲ್ಲಿ ಹಾಡಿದ್ದಾರೆ. 'ಹಾಲತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು, ತವರಾಜನ ನೊರೆಯಂತಿರುವ ಈ ಆದ್ಯರ ವಚನಗಳನ್ನು ನಮ್ಮ ಶಿವಶರಣರು ತಮ್ಮ ವಚನಗಳಲ್ಲಿ ಕೊಂಡಾಡಿದ್ದಾರೆ.

"ತಮಿಳು ನಾಡಿನ ಶಿವಭಕ್ತರಲ್ಲಿ ಅರವತ್ತು ಮೂವರು ಮಂದಿಗೆ ವಿಶೇಷವಾದ ಮನ್ನಣೆ, ಗೌರವಾದರಗಳು ಸಲ್ಲುತ್ತಿವೆ. ಇವರನ್ನು 'ನಾಯನ್ಮಾರ್' ಅಥವಾ ನಾಯನಾರ್‌ಗಳೆಂದು ಗೌರವದಿಂದ ಕರೆಯುತ್ತಾರೆ. ಕನ್ನಡನಾಡಿನಲ್ಲಿ ಶೈವ ದೇವಾಲಯಗಳಲ್ಲಿ ಈ ಅರವತ್ತು ಮೂವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿರುವುದಲ್ಲದೆ ಅವರಿಗೆ ಪೂಜೆ, ಪುನಸ್ಕಾರಗಳು ನಡೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಪುರಾತನರು ಬಾಳಿ ಬದುಕಿದ ಹಿನ್ನೆಲೆ, ಸಂಗತಿಗಳನ್ನು ಚಿತ್ರಿಸುವ ಕಥೆಗಳು ತಮಿಳುನಾಡಿನಲ್ಲಿ ಮಾತ್ರವಲ್ಲದೆ, ಕರ್ನಾಟಕ, ಆಂಧ್ರಗಳಲ್ಲಿಯೂ ಜನಪ್ರಿಯವಾಗಿ ಪ್ರಚಾರದಲ್ಲಿವೆ. ಈ ಕಥೆಗಳು ಮೊದಲು ಬಾಯಿ ಮೂಲಕವಾಗಿ ಒಬ್ಬರಿಂದ ಒಬ್ಬರಿಗೆ ಪ್ರಸಾರವಾಗಿ, ಅಮೇಲೆ ಅವು ಕಾವ್ಯರೂಪ ಪಡೆದಿರುವಂತೆ ತೋರುತ್ತದೆ. ತಮಿಳುನಾಡಿನಲ್ಲಿ ಮೊದಲು ಕಾರೈಕ್ಕಲ್‌ಅಮ್ಮೆಯಾರ್ ಪ್ರಬಂಧಗಳು, ತಿರುಮೂಲರ 'ತಿರುಮಂತಿರಮ್' ಮತ್ತುಳಿದ ಶೈವನಾಯನಾರರುಗಳು ಹಾಡಿದ ತೇವಾರಂ ಸ್ತೋತ್ರಗಳಲ್ಲಿ, ಶಾಸನಗಳ ಕೆಲವು ಉಲ್ಲೇಖಗಳಲ್ಲಿ ಈ ಕಥೆಗಳು ಸೂಕ್ಷ್ಮವಾಗಿ ಕಾಣಿಸಿಕೊಂಡಿವೆ.

ಸುಂದರಮೂರ್ತಿ ನಾಯನ್ಮಾರರು ತಮ್ಮ ತಿರುತ್ತೊಂಡರ್‌ತ್ತೊಗೈ' ಎಂಬ ಭಕ್ತಸ್ತೋತ್ರ ಮಾಲೆಯಲ್ಲಿ ತಮ್ಮನ್ನುಳಿದು ಅರವತ್ತೆರಡು ಮಂದಿ ಶೈವನಾಯನಾರರುಗಳನ್ನು ಕುರಿತು ಸಂಗ್ರಹವಾಗಿ ಹೇಳಿದ್ದಾರೆ'. ಅನಂತರ ಎರಡು ಶತಮಾನಗಳು ಕಳೆದ ಮೇಲೆ ಬಂದ ನಂಬಿ ಅಂಡಾರ್ ನಂಬಿಯ ತಿರುತ್ತೊಂಡರ್ ತಿರುವನಾದಿ'ಯ ಸುಂದರ ಮೂರ್ತಿ ನಾಯನಾರರನ್ನು ಸೇರಿಸಿಕೊಂಡು ಅರವತ್ತು ಮೂವರ ಭಕ್ತರ ಸ್ತುತಿನ್ನು ಸಂಗ್ರಹ ರೂಪದಲ್ಲಿ ಹೇಳುವುದು ಕಂಡುಬರುತ್ತದೆ".[೨೬] ಆದರೆ ಈ ಕಥೆಗಳು ವಿಸ್ತಾರವಾಗಿ ಕಾವ್ಯರೂಪದಲ್ಲಿ ತೋರಿಸಿಕೊಂಡದ್ದು, ಕ್ರಿ.ಶ.೧೨ನೇ ಶತಮಾನದಲ್ಲಿ ಬಂದ ಶೇಕ್ಕಿಳಾರನ 'ಪೆರಿಯ ಪುರಾಣ'ದಲ್ಲಿಯೇ. ಹಿಂದೆ ಹೇಳಿದ ಎಲ್ಲ ಆಧಾರಗಳಿಂದಲೂ ವಿಷಯ ಸಂಗ್ರಹಿಸಿ ಈ ಪುರಾತನರ ಜೀವನ ದೃಷ್ಟಾಂತಗಳನ್ನು ಸುಂದರವಾಗಿ ಕಡೆದಿಟ್ಟು ಕಾವ್ಯಲೋಕದಲ್ಲಿ ಅವರನ್ನು ಅಮರರನ್ನಾಗಿಸಿದ ಕೀರ್ತಿ ಶೇಕ್ಕಿಳಾರನಿಗೆ ಸಲ್ಲಬೇಕಿದೆ.

'ಕ್ರಿ.ಶ.೧೨ನೇ ಶತಮಾನದಲ್ಲಿ ಬಾಳಿ ಬದುಕಿದ ಶಿವಶರಣರ ಕಾಲಾನಂತರ ಬಂದ ೧೩ನೇ ಶತಮಾನದ ಹರಿಹರನು ತನಗೆ ವಿಶಿಷ್ಟವಾದ ರಗಳೆಗಳ ರೂಪದಲ್ಲಿ ಮೊತ್ತ ಮೊದಲಿಗೆ, ಈ ಪುರಾತನರ ಕಥೆಗಳನ್ನು ಕನ್ನಡಿಗರಿಗೂ ಮನಮುಟ್ಟುವಂತೆ ಬಣ್ಣಿಸಿದ್ದಾನೆ''[೩೭]. ಶಿವಶರಣರ ಗೌರವಕ್ಕೆ ಪಾತ್ರರಾದ ಈ ಪುರಾತನರು ಹರಿಹರನಿಗೂ ಪರಿಚಿತರು. ಶಿವಶರಣರು ಇವರಲ್ಲಿ ಕೆಲವರ ಹೆಸರುಗಳನ್ನು ತಮ್ಮ ವಚನಗಳಲ್ಲಿ ಹೇಳಿರುವುದನ್ನು ಅವರ ಮಹಿಮೆಗಳನ್ನು ಕೊಂಡಾಡಿರುವುದನ್ನು ಗಮನಿಸಿದರೆ ಇವರ ಕಥೆಗಳು ಹರಿಹರನಿಗೆ ಮುಂಚೆಯೇ ಕನ್ನಡ ನಾಡಿನಲ್ಲಿ ಪ್ರಚಾರವಾಗಿದ್ದಿತ್ತೆಂದು ತಿಳಿಯುತ್ತದೆ. ಆ ಮೇಲೆ ಹರಿಹರನ ರಗಳೆಗಳಿಂದ ಪ್ರಭಾವಿತರಾಗಿ, ಲಕ್ಕಣ್ಣ, ದಂಡೇಶ, ಸುರಂಗ, ನಿಜಗುಣ ಶಿವಯೋಗಿ ಮೊದಲಾದ ವೀರಶೈವ ಕವಿಗಳು ಈ ಕಥೆಗಳನ್ನು ಭಾವಪೂರ್ಣವಾಗಿ ವಿಸ್ತರಿಸಿ ವಿವಿಧ ಛಂದೋರೂಪಗಳಲ್ಲಿ ಬರೆದಿದ್ದಾರೆ. ತೆಲುಗಿನಲ್ಲಿ ಪಾಲ್ಕುರಿಕೆ ಸೋಮನಾಥನು ತನ್ನ 'ಬಸವ ಪುರಾಣಾಮು' ಮತ್ತು ಪಂಡಿತಾರಾಧ್ಯ ಚರಿತ್ರೆಗಳಲ್ಲಿ ಈ ಭಕ್ತರ ಕಥೆಗಳನ್ನು ದ್ವಿಪದಗಳಲ್ಲಿ ಚಿತ್ರಿಸಿದ್ದಾನೆ. ಸಂಸ್ಕೃತದಲ್ಲಿ ಕೂಡ ಬಹುಹಿಂದಿನಿಂದ ಈ ಕಥೆಗಳು ಪ್ರಚಾರದಲ್ಲಿ ಬಂದಿವೆ.

'ಸ್ಕಂದಪುರಾಣ' ಉಪಮನ್ಯುವಿನ 'ಭಕ್ತವಿಲಾಸ' ಶಿವರಹಸ್ಯ'ಗಳಲ್ಲಿ ಈ ಕಥೆಗಳು ಬರುತ್ತವೆ. ಇವೆಲ್ಲವನ್ನು ಗಮನಿಸಿದಾಗ, ಈ ಪುರಾತನರು ದಕ್ಷಿಣ ಭಾರತದಲ್ಲಿ ನೆಲೆಸಿದ ಶೈವ ಧರ್ಮಕ್ಕೆ ಆಧಾರ ಸ್ತಂಭಗಳಂತೆ ಇದ್ದರೆಂಬುದು ವ್ಯಕ್ತವಾಗುತ್ತದೆ. ಈ ಅರವತ್ತು ಮೂರು ನಾಯನ್ಮಾರರು ಬಾಳಿ ಬದುಕಿದ ಕಾಲ ಕ್ರಿ.ಶ. ೩೫೦–೮೬೦ ಎಂದು ತಮಿಳಿನ ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇವರಲ್ಲಿ ತಿರುಮೂವರ್ ಎಂದು ಪ್ರಸಿದ್ಧರಾದ ಅಪ್ಪರ್, ಸಂಬಂಧರ್ ಮತ್ತು ಸುಂದರರರೆಂಬ ಮಹಾವಿಜ್ಞಾನಿಗಳು ತಮ್ಮ ತೇವಾರ ಸ್ತೋತ್ರಗಳಲ್ಲಿ ತಮಗಿಂತ ಹಿಂದೆ ಇದ್ದವರೂ, ಸಮಕಾಲೀನರೂ ಆದ ಹಲವು ನಾಯನ್ಮಾರರುಗಳನ್ನು ಸ್ತುತಿಸಿ ಹಾಡಿದ್ದಾರೆ.

"ಅಪ್ಪರ್ ಮತ್ತು ಸಂಬಂಧರ್ ಹೆಚ್ಚು ಕಡಿಮೆ ಸಮಕಾಲೀನರಾಗಿದ್ದವರು. ಅಂದರೆ ಕ್ರಿ.ಶ. ೫೪೦– ಕ್ರಿ.ಶ. ೬೬೦ರ ನಡುವೆ ಜೀವಿಸಿದ್ದರು. ಸುಂದರ ಮೂರ್ತಿ ನಾಯನಾರರು ಇವರುಗಳ ಕಾಲನಂತರ ಸುಮಾರು ಎರಡು ಶತಮಾನಗಳ ನಂತರ ಬಂದವರು ಇವರ ಕಾಲ ಕ್ರಿ.ಶ. ೮೪೦–೮೬೫. ಪೆರಿಯ ಪುರಾಣದಲ್ಲಿ ಬರುವ ನಾಯನ್ಮಾರರುಗಳ ಕಥೆಗಳಲ್ಲೆಲ್ಲ ಈ ಮೂವರನ್ನು ಕುರಿತ ಕಥೆಗಳೇ ಹೆಚ್ಚು ವಿಸ್ತಾರವಾಗಿ ಬಂದಿವೆ. ಉಳಿದ ನಾಯನ್ಮಾರರುಗಳ ಕಥೆಗಳು ಇವರ ಕಥೆಗಳ ಚೌಕಟ್ಟಿನಲ್ಲಿ ಹೆಣೆದುಕೊಂಡಿರುವುದನ್ನು ಕಾಣಬಹುದು. ಇವರಲ್ಲಿ ಅನೇಕರು ಭಕ್ತಿಯೊಂದೇ ತಮ್ಮ ಬಾಳ ನೆಲೆಯಾಗಿರುವ ಮುಗ್ಧ ಭಕ್ತರುಗಳಿದ್ದಾರೆ"[೩೮].

ಅಪ್ಪರ್ ಮತ್ತು ಸಂಬಂಧರ ತೇವಾರ ಪದಿಗಳಿಂದಲೂ, ಪೆರಿಯ ಪುರಾಣದ ಆಧಾರದಿಂದಲೂ ಇವರಿಬ್ಬರ ಸಮಕಾಲೀನರಾಗಿ ಜೀವಿಸಿದ್ದರು. ಹನ್ನೊಂದು ಮಂದಿ ಎಂದು ತಿಳಿಯುತ್ತದೆ. ಅವರ ಹೆಸರುಗಳು ಈ ರೀತಿ ಇವೆ.

೧. ಅಪ್ಪರ್,

೨. ಸಂಬಂಧರ್,

೩. ಅಪ್ಪೂದಿ ಅಡಿಗಳ್,

೪. ಮುರಗನಾಯನಾರ್,

೫. ಚಿರುತ್ತೊಂಡರ್,

೬. ನೀಲನಕ್ಕರ್,

೭. ಕುಲತ್ತಿಳೈಯಾರ್,

೮. ಮಂಗೈಯರ್ಕ್ಕರಸಿಯಾರ್,

೯. ಅವರ ಪತಿ ಪಾಂಡ್ಯದೊರೆನೆಡು ಮಾರರ್,

೧೦. ಕುಂಗಿಲಿಯಕ್ಕಲಯರ್,

೧೧. ತಿರುನೀಲಕಂಡಯೊಳ್ ಪಾಣರ್.

ಈ ಇಬ್ಬರು ನಾಯನ್ಮಾರರ ಕಾಲಕ್ಕೆ ಮುಂಚಿತವಾಗಿದ್ದು, ಅವರಿಂದ ಸ್ತೋತ್ರ ಮಾಡಲ್ಪಟ್ಟವರು ಹತ್ತು ಮಂದಿ, ಅವರುಗಳೆಂದರೆ.

೧. ಕೊಚ್ಚೆಂಗಣಾನ್

೨. ಚಂಡೀಶರ್

೩. ಕಣ್ಣಪ್ಪರ್

೪. ಕಣಂಬುಲರ್

೫. ಶಕ್ಕೀಳಾರ್

೬. ಅಮರ ನಿದಿಯಾರ್

೭. ಅರಿವಾಳ್‌ತಾಯರ್

೮. ನಮಿನಂದಿ ಅಡಿಗಳ್

೯. ದಂಡಿಯಡಿಗಳ್

೧೦. ಮಗಳ್‌ತ್ತುಣ್ಯೆಯಾರ್ ಇವರೆಲ್ಲರು ಅಪ್ಪರ್ ಸಂಬಂಧರ ಕಾಲವಾದ ಕ್ರಿ.ಶ. ೭ನೇ ಶತಮಾನಕ್ಕೆಮುಂಚೆಯಿದ್ದವರು."[೩೯]

ಅಪ್ಪರ್ ಸಂಬಂಧರರಿಗೆ ಮುಂಚೆ ಇದ್ದು, ಅವರಿಂದ ಉಲ್ಲೇಖಿಸಲ್ಪಡದೆ ಚರಿತ್ರೆಯ ಆಧಾರಗಳಿಂದ ತಿಳಿದುಬರುವ ನಾಯನಾರರುಗಳು ಏಳುಮಂದಿ. ಅವರ ಹೆಸರುಗಳಿವು:

೧. ಮಗಲ್‌ಚ್ಚೋಳಿರ್

೨. ಎರೆಬತ್ತನಾಯನಾರ್

೩. ಕೂಳ್ದುವ ನಾಯನಾರ್

೪. ಮೂರ್ತಿ ನಾಯನಾರ್

೫. ಅಯ್ಯಡಿಗಳ್ ಕಾಡವರ್ಗೊನ್

೬. ತಿರುಮೂಲರು

೭. ಕಾರಿಕಾಲ್ಯೆಯಮ್ಮೆಯಾರ್

ಸುಂದರ ಮೂರ್ತಿ ನಾಯನಾರರ ಕಾಲದಲ್ಲಿ ಅಂದರೆ ಕ್ರಿ.ಶ. ೬ನೇ ಶತಮಾನದಲ್ಲಿ ಜೀವಿಸಿದ್ದ ನಾಯನಾರರ ಕಾಲದಲ್ಲಿ ಹದಿಮೂರು ಮಂದಿ:

೧. ಸುಂದರ್,

೨. ಅವರ ತಂದೆ ಶಡೈಯ ನಾಯನಾರ್,

೩. ತಾಯಿ ಇಶೈಜ್ಞಾನಿಯಾರ್,

೪. ಅವರ ಸಾಕು ತಂದೆ ನರಸಿಂಗ ಮುನ್ನೈಯರೈಯಾರ್,

೫. ಅವರು ತಿರುತ್ತೊಂಡತ್ತೋಗೈಯನ್ನು ಹಾಡುವಂತೆ ಪ್ರೇರೇಪಿಸಿದ ವಿಳಲ್ ಮಿಂಡನಾಯನಾರ್.

೬. ಚೇರಮಾನ್‌ಪೇರುಮಾಳ್,

೭. ಏಯರ್ಗೋನ್ ಕಲಿಕ್ಕಾಮರ್.

೮. ಅವರ ಮಾವ ಮಾನಕ್ಕಂಜಾರ್,

೯. ಕಳರ್‌ಸಿಂಗರ್.

೧೦. ಶೇರುತ್ತುಣೈನಾಯನಾರ್.

೧೧. ಪೆರುಮಿವಿಲೈಕ್ಕುಂಬರ್.

೧೨. ಕೊಟ್ಪುಲಿಯಾರ್,

೧೩. ಶೋಮಾಶಿಮಾರರ್.

ಇದುವರೆಗೆ ಹೇಳಿದ ನಲವತ್ತೊಂದು ಮಂದಿಯಲ್ಲದೆ, ಉಳಿದ ೩೩ ಮಂದಿ ಅಪ್ಪರ್ ಸಂಬಂಧರ ಕಾಲಕ್ಕೂ, ಸುಂದರರ ಕಾಲಕ್ಕೂ ನಡುವೆ ಜೀವಿಸಿದ್ದವರೆಂದೂ, ಸುಂದರರು ಇವರನ್ನು ಕುರಿತು ತಮ್ಮ ತಿರುತ್ತಂಡರ್‌ತ್ತೋಗೈ'ಯಲ್ಲಿ ಹಾಡಿದ್ದರೂ ಇವರ ಕಾಲದ ಬಗ್ಗೆ ಇತಿಹಾಸವು ಯಾವ ಬೆಳಕು ಚೆಲ್ಲುವುದಿಲ್ಲವೆಂದೂ, ಇವರನ್ನು ಕುರಿತು ಜನಜನಿತವಾದ ಕಥೆಗಳು, ಐತಿಹ್ಯಗಳು ಪ್ರಚಾರದಲ್ಲಿದ್ದಿರಬೇಕೆಂದು ಶೇಕ್ಕಿಳಾರನ ಪೆರಿಯ ಪುರಾಣದಲ್ಲಿ ಬರುವ ಇವರ ಕಥೆಗಳಿಗೆ ಇವು ಆಧಾರವಾಗಿರಬೇಕೆಂದೂ ಪ್ರಸಿದ್ಧ ತಮಿಳು ವಿದ್ವಾಂಸರಾದ ಎಂ.ರಾಜಮಾಣಿಕ್ಕನಾರ್ ತಮ್ಮ ಪೆರಿಯ ಪುರಾಣ ಆದಾಯ್ಚಿ' ಎಂಬ ಗ್ರಂಥದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಈ ಇಪ್ಪತ್ತೆರಡು ಪುರಾತನರ ಹೆಸರುಗಳು ಈ ರೀತಿ ಇವೆ.

೧. ಪೂಶಲಾರ್ ನಾಯನಾರ್

೨. ಕಾರಿ

೩. ಅದಿಬತ್ತ

೪. ಕವಿಕ್ಕಂಬ

೫. ಕಲಿಯ

೬. ಸಂಧಿ

೭. ವಾಯಿಲಾರ್ ನಾಯನಾರ್

೮. ಮುನ್ನೈಯಿಡುವಾರ್

೯. ಇಡಂಗಳೆ

೧೦. ಇಯಾಳ್ ಪಗೈ

೧೧. ನೇಶ

೧೨. ಇಳಿಯಾಂಡ ಗುಡಿಮಾರ

೧೩. ಮೇಯ್‌ಘೋರುಳ್

೧೪. ತಿರುನಾಳೈಯಪವರ್

೧೫. ಏನಾಧಿನಾದ ನಾಯನಾರ್

೧೬. ಅನಾಯ

೧೭ ಉರುತ್ತಿರಪತಿ (ರುದ್ರಪತಿ)

೧೮. ಘರುಕುಳಿಪ್ಪುತ್ತೊಂಡ

೧೯. ಮೂರ್ಕ್ಕ

೨೦. ಶಿರಪ್ಪುಲಿ

೨೧. ಕಣನಾದ

೨೨. ತಿರುನೀಲಕಂಠ"[೪೦]

ಈ ಮೇಲೆ ತಿಳಿಸಿದ ಅರವತ್ತು ಮೂವರು ನಾಯನ್ಮಾರರುಗಳು ಜೀವನದ ಹಲವಾರು ವೃತ್ತಿ, ಜಾತಿಗಳನ್ನು ಪ್ರತಿನಿಧಿಸಿದ್ದಾರೆ. ಇವರಲ್ಲಿ ಪಾಂಡ್ಯ, ಚೇರ, ಚೋಳ ವಂಶಗಳ ಅರಸರು ೬ ಮಾಂಡಲೀಕರಾಗಿದ್ದರು.

| | |
|---|---|
| ಮಂತ್ರಿ | ೫ |
| ಶೈವರು | ೧ |
| ವೇದಿಯ ಬ್ರಾಹ್ಮಣರು | ೪ |

| | |
|---|---|
| ವೈಶ್ಯಕುಲದವರು | ೧೨ |
| ವ್ಯವಸಾಯಿಗಳು | ೫ |
| ಬೆಸ್ತರು | ೧೩ |
| ಹೊಲೆಯರು | ೧ |
| ಕುರುಬರು | ೧ |
| ಕುಂಬಾರರು | ೨ |
| ಬೇಡರು | ೧ |
| ನಾಡರ್ | ೧ |
| ಗಾಣಿಗರು | ೧ |
| ಉಳಿದ ಜಾತಿಗಳಿಗೆ ಸೇರಿದವರು | ೧ |
| ಇವರಲ್ಲಿ ಮೂವರು ಸ್ತ್ರೀಯರಿದ್ದಾರೆ. | ೨ |

ಸಮಾಜದ ಉನ್ನತ ವರ್ಗದಿಂದ ಹಿಡಿದು ಆಳೆಂದು ಪರಿಗಣಿಸಲ್ಪಟ್ಟ ಜಾತಿಗಳವರೆಗೆ ಎಲ್ಲ ಕುಲದ ಭಕ್ತರು ಸರಿ ಸಮಭಾವದಿಂದ ನಡೆದುಕೊಂಡು, ಪರಸ್ಪರ ಗೌರವಿಸುವುದರಿಂದಲೇ ನಮ್ಮ ಶಿವಶರಣರು ತಮ್ಮ ಗುರಿಸಾಧನೆಗೆ ಇವನ್ನು ಪ್ರೇರಕ ಶಕ್ತಿಯಾಗಿ ಪಡೆದುಕೊಂಡಿದ್ದಾರೆ.

ಪೆರಿಯ ಪುರಾಣವು ತಮಿಳಿನಲ್ಲಿ ಮೊತ್ತಮೊದಲಿಗೆ ವಿಸ್ತರವಾಗಿ ಅರವತ್ಮೂರು ಪುರಾತನರ ಚರಿತ್ರೆಯನ್ನು ಹೇಳುವ ಕಾವ್ಯ. ಇದಕ್ಕೆ ಮೊದಲು ಇದ್ದ ಹೆಸರು 'ತಿರುತ್ತೊಂಡರ್ ಪುರಾಣಮ್' ಎಂದು ತೊಂಡರು ಎಂದರೆ ಸೇವಕರು, ಭಕ್ತರು ಎಂದು ಅರ್ಥ" ತಿರುತ್ತೊಂಡರ್ ಪುರಾಣವೆಂದರೆ ಶ್ರೇಷ್ಠ ಭಕ್ತರ ಪೆರಿಯ ಪುರಾಣವೆಂಬುದು ಜನರು ಈ ಕಾವ್ಯದ ವಿಸ್ತಾರ, ಹಿರಿಮೆಯನ್ನು ಮೆಚ್ಚಿ ಇಟ್ಟ ಹೆಸರು. ಈ ಕಾವ್ಯವನ್ನು ಬರೆದ ಶೇಕ್ಕಿಳಾರ್ ಕವಿ ಹನ್ನೆರಡನೆ ಶತಮಾನದ ಮಧ್ಯಭಾಗದಲ್ಲಿ (ಕ್ರಿ.ಶ. ೧೧೬೪-೧೧೧೩) ಅನಪಾಯ ಚೋಳನೆಂದು ಪ್ರಸಿದ್ಧನಾಗಿದ್ದ ಎರಡನೆಯ ಕುಲೋತ್ತುಂಗ ಚೋಳನಲ್ಲಿ ಪ್ರಧಾನಮಾನ್ಯನಾಗಿದ್ದ. ಇವರ ನಿಜನಾಮಧೇಯ ಅರುಳ್ ತೋಳೆತ್ತೆವರ್ ಎಂದು. ತೊಂಡನಾಡಿನ ಕುನ್ನತ್ತೂರಿನ ವೇಳಾಳರ್ ಎಂದರೆ ಕೃಷಿಕರ ಜಾತಿಯಲ್ಲಿ ಹುಟ್ಟಿದವನು. ಶೇಕ್ಕಿಳಾರ್ ಎಂಬುದು ಅವರ ವಂಶದ ಹೆಸರು. ಪಂಡಿತ ಜ್ಞಾನಿ ಎಂದು ಅರ್ಥ.

"ಅರುಳ್‌ಮೊಳೆ ತೇವರನಲ್ಲಿದ್ದ ಅಪಾರ ಪಾಂಡಿತ್ಯ ಗಮನಿಸಿ ಜನರು ಅವನನ್ನು ಶೇಕ್ಕಿಳಾರ್ ಎಂದೇ ಕರೆದರು. ಇವನು ಪಲ್ಲವರ ನಾಡಿನಿಂದ ಬಂದು ಚೋಳರ ಅರಸನಲ್ಲಿ ಪ್ರಧಾನಿಯಾಗಿದ್ದುದರಿಂದ ಅರಸನು ಇವನಿಗೆ ಉತ್ತಮ ಚೋಳ ಪಲ್ಲವರಾಯನ್ ಎಂಬ ಬಿರುದು ನೀಡಿ ಗೌರವಿಸಿದ. ಅರಸನಿಗೆ ಇವನನ್ನು ಕಂಡರೆ ಅಸೀಮ ಪ್ರೇಮ ಗೌರವಗಳಿದ್ದವು".[೯೧] ಒಮ್ಮೆ ಅನಪಾಯ ಚೋಳನು ಜೈನಕಾವ್ಯವಾದ 'ಜೀವಿಕ ಚಿಂತಾಮಣಿ'ಯನ್ನು ಓದುತ್ತ ಆದರಿಂದ ಅಕರ್ಷಿತನಾಗುತ್ತಿರುವುದನ್ನು ಶೇಕ್ಕಿಳಾರ್ ಅವನ ಮನಸ್ಸನ್ನು ಶೈವದೆಡೆಗೆ ತಿರುಗಿಸಲು, ಸುಂದರ ಮೂರ್ತಿ ನಾಯನಾರರು ರಚಿಸಿದ ತಿರುತ್ತೋಂಡರ್ ತೊಗೈ ಎಂಬ ಸ್ತೋತ್ರ ಮಾಲೆ ಆಧರಿಸಿ ರಚಿತವಾದ ನಂಬಿಯಾಂಡರ್ ನಂಬಿಯು ತಿರುತ್ತೋಂಡರ್ ತಿರುವಂದಾದಿಯನ್ನು ಓದಿ ವಿವರಿಸಿದ. ಈ ಭಕ್ತರ ಕಥೆಗಳನ್ನು ನೀವೆ ಏಕೆ ವಿಸ್ತರಿಸಿ ಬರೆಯಬಾರದು" ಎಂದು ಹೇಳಿದಾಗ, ದೊರೆ ಇಚ್ಛೆ ಮೇರೆಗೆ, ತನ್ನಕಾವ್ಯ ರಚನೆಗೆ ಬೇಕಾದ ಸಾಧನ ಸಾಮಗ್ರಿಗಳನ್ನು ಸಂಗ್ರಹಿಸಲು ಚಿದಂಬರಕ್ಕೆ ಬಂದನು.

"ಚಿದಂಬರನ ಅನುಗ್ರಹದಿಂದ ಪೆರಿಯ ಪುರಾಣವನ್ನು ವೆಣ್ಬಾ ವೃತ್ತದಲ್ಲಿ ಬರೆದು ಮುಗಿಸಿದ. ಆ ಸಮಯಕ್ಕೆ ಅವನ ಕಾವ್ಯರಚನೆಯಲ್ಲಿ ಆಸಕ್ತಿ ತೋರಿದ ಅರಸನು ಅವನನ್ನರಸಿಕೊಂಡು ಚಿದಂಬರಕ್ಕೆ ಬಂದ ಅರಸನ ಅಪೇಕ್ಷೆ ಮೇರೆಗೆ ಶೇಕ್ಕಿಳಾರನ ತಿಲ್ಲೈನಟರಾಜನ ಪೊನ್ನಾಂಬಲದ ಮಂಟಪದಲ್ಲಿ ಶೈವ ಮಹಾ ಸಭೆಯನ್ನು ಉದ್ದೇಶಿಸಿ ತನ್ನ ಕಾವ್ಯ ವಿವರಿಸಿ

ಹೇಳಿದ. ಅಲ್ಲಿ ಸೇರಿದ್ದ ಜನಸ್ತೋಮ ಅದನ್ನು ಮೈಮರೆತು ಆಲಿಸಿತು. ಅರಸನು ಇದರಿಂದ ಹೆಮ್ಮೆಪಟ್ಟು, ಶೇಕ್ಕಿಳಾರನನ್ನು ತನ್ನಡಿಯಲ್ಲಿ ಪ್ರಧಾನಿಯಾಗಿಟ್ಟುಕೊಳ್ಳುವುದು ಅವನಿಗೆ ಅಗೌರವ ತೋರಿದಂತೆ ಎಂದು ಅರಸನು ಬಗೆದ, ಶೇಕ್ಕಿಳಾರನ ತಮ್ಮ ಬಾಲಲೂವಾಯರನ್ನು ತೊಂಡೈಮಾನ್ ಎಂಬ ಪಟ್ಟದೊಡನೆ ತೊಂಡೈ ಮಂಡಲನ್ನಾಳುವಂತೆ ನೇಮಿಸಿದ. ಶೇಕ್ಕಳಾರನು ಚಿದಂಬರದಲ್ಲೆ ಇದ್ದು, ವಿರಕ್ತ ಜೀವನ ನಡೆಸುತ್ತ ಕೊತ್ತ ಪೆರುಮಾನನ್ನು (ನಟರಾಜ) ಸೇವಿಸುತ್ತ ಶೈವಭಕ್ತರ ಕಥೆ, ಶೈವತತ್ವಗಳನ್ನು ಜನರಲ್ಲಿ ಪ್ರಸಾರ ಮಾಡುತ್ತ ಕೆಲಕಾಲವಿದ್ದು, ಮುಕ್ತಿಪಡೆದ. ಇವಿಷ್ಟು ಅವನ ಜೀವನ ಮತ್ತು ಕಾವ್ಯದ ಬಗ್ಗೆ ತಿಳಿದು ಬರುವ ಸಂಗತಿ"[೪೨].

ಶೇಕ್ಕಿಳಾರನ ಕಾವ್ಯದಲ್ಲಿ ೪೨೮೬ ಪದ್ಯಗಳಿವೆ. ಸುಂದರ ಮೂರ್ತಿನಾಯನಾರರ ಕಥೆಗಳನ್ನು ಆದಿ ಮಧ್ಯಂತರದಲ್ಲಿ ವಿವರಿಸುತ್ತ ಅರವತ್ತು ಮೂವರು ಪುರಾತನರ ಮತ್ತು ಒಂಬತ್ತು ಮಂದಿ ಇತರ ಶೈವಭಕ್ತರ ಕಥೆಗಳನ್ನು ಇದರಲ್ಲಿ ವಿವರಿಸಿದ್ದಾರೆ.

**ಹರಿಹರನ ಪುರಾತನರ ರಗಳೆಗಳು ಮತ್ತು ಪೆರಿಯ ಪುರಾಣ**

"ಹರಿಹರನು ತನ್ನ ಪುರಾತನರ ರಗಳೆಗಳಿಗೆ ತಮಿಳಿನಿಂದಲೇ ಆಕರಗಳನ್ನು ಪಡೆದುಕೊಂಡಿದ್ದನೆಂಬುದರಲ್ಲಿ ಸಂದೇಹವಿಲ್ಲ, ಹರಿಹರನ ಕಾಲಕ್ಕೆ ಸಂಸ್ಕೃತದಲ್ಲಿ ಬಂದ ಉಪಮನ್ಯು ದಿನ 'ಭಕ್ತವಿಲಾಸ' ಮೊದಲಾದ ಪುರಾತನರ ಕೃತಿಗಳು ಲಭ್ಯವಾಗಿದ್ದವು ಎನ್ನುವುದು ಸಂದೇಹಕ್ಕೆ ಕಾರಣವಾಗಿದೆ. ತಮಿಳಿನ ಹಿರಿಯ ವಿದ್ವಾಂಸ ಡಾ॥ ಟಿ.ಪಿ. ಮೀನಾಕ್ಷಿ ಸುಂದರಂ ಅವರು ಪೆರಿಯ ಪುರಾಣ 'ಶೇಳ್ವೋರೆವುಗಳ್' ಎಂಬ ಸಂಕಲನ ಗ್ರಂಥದಲ್ಲಿರುವ ತಮ್ಮ ಪ್ರಬಂಧದಲ್ಲಿ "ಬಸವರ ಕಾಲನಂತರ ಬಂದ ವೀರಶೈವ ಕವಿಯಾಗಿ ಹರಿಹರನು ತಮಿಳುನಾಡಿಗೆ ಬಂದು ಈ ಭಕ್ತರು ನೆಲೆಸಿದ ಸ್ಥಳಗಳೆನ್ನೆಲ್ಲ ಕಂಡು ಅಲ್ಲಿ ಪ್ರಚಾರದಲ್ಲಿದ್ದ ತಮಿಳು ಕಥೆಗಳನ್ನು ಅರಿತುಕೊಂಡು ರಗಳೆ ಎಂಬ ಛಂದೋ ರೂಪದಲ್ಲಿ ಈ ಭಕ್ತರ ಕಥೆಗಳನ್ನು ಮನಮುಟ್ಟುವಂತೆ ಕನ್ನಡದಲ್ಲಿ ವರ್ಣಿಸಿದ್ದಾನೆ"[೪೩].

ಆ ಮೇಲೆ ಬಂದ ವೀರಶೈವ ಕವಿಗಳು ಈ ಭಕ್ತರ ಕಥೆಗಳನ್ನು ಒಂದೆಡೆ ಸೇರಿಸಿ ಬರೆದಿದ್ದಾರೆ ಎಂದು ಹೇಳಿದ್ದಾರೆ. ಇದರಿಂದ ಇವನು ತಮಿಳು ಕಾವ್ಯಾಧಾರಗಳನ್ನೆ ಆಶ್ರಯಿಸಿದ್ದನೆಂದು ತಿಳಿಯುತ್ತದೆ. ತಮಿಳುನಾಡಿನಲ್ಲಿ ಪ್ರಚಾರದಲ್ಲಿದ್ದು, ಪುರಾತನರನ್ನು ಕುತೂಹಲದಿಂದ ಅಭ್ಯಾಸ ಮಾಡಿರಬೇಕೆಂದು ತೋರುತ್ತದೆ. ಹರಿಹರ ಪೆರಿಯ ಪುರಾಣವನ್ನು ನೋಡಿದ್ದನೇ, ಆ ಕಾವ್ಯವನ್ನು ತನ್ನ ಪುರಾತನರ ರಗಳೆಗಳಿಗೆ ಮೂಲ ಆಕರವಾಗಿ

ಬಳಸಿಕೊಂಡಿದ್ದನೇ ಎಂಬ ವಿಷಯದಲ್ಲಿ ವಾದ ವಿವಾದಗಳೆದ್ದಿವೆ. ಪೆರಿಯ ಪುರಾಣ ಬರೆದ ಶೇಕ್ಕಿಳಾರ್ ಹನ್ನೆರಡನೇ ಶತಮಾನದ ಮಧ್ಯಭಾಗದಲ್ಲಿ ಎರಡನೇ ಕುಲೋತ್ತುಂಗ ಚೋಳನ ಕಾಲದಲ್ಲಿ ಇದ್ದನೆಂದು ತಿಳಿಯುವುದರಿಂದ ಇವನು ಹೆಚ್ಚುಕಮ್ಮಿ ಬಸವೇಶ್ವರ ಮೊದಲಾದ ಶಿವಶರಣರ ಸಮಕಾಲೀನನಾಗಿ ಜೀವಿಸಿದ್ದನೆಂದು ಹೇಳಬಹುದು.

ಬಸವಾದಿಗಳ ಕಾಲ ನಂತರ ಬಂದ ಹರಿಹರನು ಪುರಾತನ ಕಥೆಗಳನ್ನು ಕನ್ನಡದಲ್ಲಿ ಬಣ್ಣಿಸಿರುವುದರಿಂದ ಶೇಕ್ಕಿಳಾರನ ಪೆರಿಯ ಪುರಾಣವನ್ನು ಅವನು ನೋಡಿರುವ ಸಾಧ್ಯತೆ ಇದೆ. ಹರಿಹರನ ಕಾಲ ಕ್ರಿಶ. ೧೨ನೇ ಶತಮಾನದ ಮಧ್ಯಭಾಗವೆಂದು ಈಚಿನ ಕೆಲವು ಸಮರ್ಥನೆಗಳಿಂದ ತಿಳಿಯುತ್ತದೆ. ಪ್ರಾಚಾರ್ಯ ಡಿ.ಎಲ್. ನರಸಿಂಹಚಾರ್ಯರು ತಮ್ಮ ಹಂಪಿಯ ಹರಿಹರ ಎಂಬ ಕಿರುಹೊತ್ತಿಗೆಯಲ್ಲಿ ಹರಿಹರನು ಅರವತ್ತು ಮೂವರು ಪುರಾತನರ ಕಥಾವಸ್ತುಗಳನ್ನು ಕ್ರಿಶ. ೧೧೪೫ರಲ್ಲಿ ರಚಿತವಾದ ಪೆರಿಯ ಪುರಾಣವೆಂಬ ಗ್ರಂಥದಿಂದ ತೆಗೆದುಕೊಂಡಿರುವನೆಂದು ಹೇಳಲು ಅಧಾರವಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. "ಶ್ರೀ ಡಿ.ಎಲ್.ಎನ್. ಅವರ ಅಭಿಪ್ರಾಯವನ್ನು ಸಮರ್ಥಿಸುತ್ತ ಹಿರೇಮಲ್ಲೂರ್ ಈಶ್ವರನ್ ಅವರು ತಮ್ಮ 'ಹರಿಹರನ ಕೃತಿಗಳು ಒಂದು ಸಂಖ್ಯೆ ನಿರ್ಣಯ' ಎಂಬ ಮಹಾ ಪ್ರಬಂಧದಲ್ಲಿ ಹರಿಹರನು ಈ ಕೃತಿಯನ್ನು ಮತ್ತು ಇತರ ತಮಿಳು ಆಕರಗಳನ್ನು ನೋಡಿರುವುದು ಮಾತ್ರವಲ್ಲ ತನ್ನ ಕೃತಿಗಳಿಗೆ ಹೆಚ್ಚು ಕಾಲ್ಯಾಧಾರವನ್ನು ಅವುಗಳಿಂದಲೇ ಪಡೆದಿರಬೇಕೆಂದು ರಗಳೆಯ ಕಥೆಯನ್ನು ಪೆರಿಯ ಪುರಾಣದ ಕಥೆಗಳನ್ನು ಹೋಲಿಸಿ ನೋಡಿದಾಗ ಕಂಡುಬರುತ್ತದೆ ಎಂದು ಕೆಲ ಉದಾಹರಣೆಗಳೊಂದಿಗೆ ಚರ್ಚಿಸಿದ್ದಾರೆ."[೪೪]

ಹರಿಹರ ತನ್ನ ಕಾವ್ಯ ಕೌಶಲ್ಯವನ್ನು ಮೆರೆಸುವ ಸಲುವಾಗಿ ಪೆರಿಯ ಪುರಾಣದ ಕಥಾ ಸಂದರ್ಭಗಳನ್ನು, ಸನ್ನಿವೇಶಗಳನ್ನು ತನ್ನ ಪ್ರತಿಭೆಗೆ ತಕ್ಕಂತೆ, ಬದಲಾಯಿಸಿಕೊಂಡಿದ್ದಾನೆ. ಈ ರೀತಿ ಮಾರ್ಪಾಡುಗಳಿಗೆ ಅವನು ತಮಿಳುನಾಡಿನಲ್ಲಿ ಸಂಚರಿಸಿ ಕೇಳಿ ತಿಳಿಸಿದ ದಂತ ಕಥೆಗಳೂ, ಇತರ ಆಕರಗಳೂ ನೆರವಾಗಿರಬೇಕು. ಪೆರಿಯ ಪುರಾಣದಲ್ಲಿ ಸೂಕ್ಷ್ಮವಾಗಿ ಹೇಳಿರುವ ಅನೇಕ ಸಂದರ್ಭಗಳು ಇವನಲ್ಲಿ ವಿಸ್ತಾರವಾಗಿ ವರ್ಣಿತವಾಗಿವೆ. ನಂಬಿಯಣ್ಣನ ಕಥೆಯಲ್ಲಿ ಬರುವ ಶೃಂಗಾರ ಸನ್ನಿವೇಶಗಳು ಹರಿಹರನಲ್ಲಿ ತನ್ನದೇ ಆದ ಕಾವ್ಯದ ಮಹಿಮೆಯಲ್ಲಿ ವಿಶಿಷ್ಟ ಶೈಲಿಯಲ್ಲಿ ಮೂಡಿಬಂದಿವೆ, ಶೇಕ್ಕಿಳಾರನು ಶೃಂಗಾರ ಸನ್ನಿವೇಶಗಳನ್ನು ಅತಿ ಸಂಯಮದಿಂದ ಚಿತ್ರಿಸಿದರೆ ಹರಿಹರನು ರಸಿಕ ಚಕ್ರವರ್ತಿಯಂತೆ ಹಲವು ಸ್ಥಳಗಳಲ್ಲಿ ನಂಬಿಯಣ್ಣ ಪರವೆನಾಚಿ, ಸಂಕಿಲೆಯರೊಡನೆ ಇಟ್ಟುಕೊಂಡಿದ್ದ ಕಾಮ ಸಂಬಂಧವನ್ನು ಬಣ್ಣಿಸಿದ್ದಾನೆ. ಅದೇ ಶೇಕ್ಕಿಳಾರನಲ್ಲಿ ನಂಬಿಯ ಸಂಕಿಲೆಯೊಂದಿಗೆ ಸಂಪರ್ಕಕ್ಕೆಳಿಸಿ, ಕೂಡಿದಾಗ ಇನ್ಯತ್ತುಜ್ಞೈಯಿಲ್ ಎಳೆಯರಾನಾರ್

ಅಂದರೆ ದೈಹಿಕ ಸುಖದಲ್ಲಿ ಸಾಮಾನ್ಯರಂತೆ ವರ್ತಿಸಿದರು ಎಂದು ಒಂದೇ ಮಾತಿನಲ್ಲಿ ಮುಗಿಸಿ ಬಿಡುತ್ತೇನೆ. ಇಂಥ ಶೃಂಗಾರ ಸನ್ನಿವೇಶಗಳು ವಿರಕ್ತನ ವರ್ಣನೆಗೆ ಸಲ್ಲದು ಎಂಬ ಸಂಯಮ ಅವನಲ್ಲಿದೆ. ಅಲ್ಲದೆ ಇತಿಹಾಸಕ್ಕೆ ಅಪಚಾರವಾಗಬಾರದೆಂಬ ಎಚ್ಚರಿಕೆ ಇದೆ. ಶಿವಭಕ್ತರಿಗೆ ಹಾನಿಯುಂಟಾಗುವ ಸಂದರ್ಭದಲ್ಲಿ ಕೂಡ ಅವನು ಸಂಯಮದಿಂದ ಮಾತುಗಳನ್ನು ಬಳಸುತ್ತಾನೆ. ಉದಾಹರಣೆಗೆ ಏಣಾದಿನಾಥರು ವಸ್ತು ಮೇಯ್‌ಪ್ಪೊ ರಳ್ ನಾಯನಾರ್‌ಗಳ ಕಥೆಯಲ್ಲಿ ಅವರನ್ನು ಶಿವಭಕ್ತರ ವೇಷದಿಂದ ಶತೃಗಳು ಕೊಲ್ಲುವ ಪ್ರಸಂಗ ಬಂದಾಗ 'ತನ್‌ಕಜುತ್ತೇ ಮುಜ್ಜು ವಿತ್ತಾನ್' ಎಂದರೆ ತಾನು ಚಂಡಿಸಿದಂತೆಯೋ ಮಾಡಿ ಮುಗಿಸಿದನು ಎಂದು ಹೇಳಿರುವುದು ಅವರ ಸಂಯಮದ ಬರವಣಿಗೆಗೆ ಸಾಕ್ಷಿಯಾಗಿದೆ. ಅದೇ ಹರಿಹರನಲ್ಲಿ ಈ ಸಂದರ್ಭಗಳು ಹಲವು ಸಾಲುಗಳಲ್ಲಿ ಮೇರೆ ವರಿದು ಹರಿದಿವೆ.

"ಹರಿಹರನಿಗೆ ವೀರವೇ ಆಗಲೀ, ಶೃಂಗಾರವೇ ಆಗಲಿ ನಾಟಕೀಯವಾಗಿ ಬಣ್ಣಿಸುವುದರಲ್ಲಿ ವಿಶೇಷ ಆಸಕ್ತಿಯಿದ್ದಂತೆ ತೋರುತ್ತದೆ. ಹರಿಹರನ ಪುರಾತನ ರಗಳೆಗಳಲ್ಲಿರುವ ಕಾವ್ಯದ ಔನ್ನತ್ಯ, ಪದಲಾಲಿತ್ಯ, ಭಾವಪುಷ್ಪ ಸನ್ನಿವೇಶನಗಳು, ರಸಘಟಕಗಳು ಶೇಕ್ಕಿಳಾರನ ಕಾವ್ಯದಲ್ಲಿ ಕಾಣಲಾರವು ಎಂಬುದು ಎಲ್ಲರೂ ಒಪ್ಪುವ ಮಾತು. ಕಥಾ ವಸ್ತುಗಳನ್ನು ಎರವಲಾಗಿ ಪಡೆದಿದ್ದರೂ, ಸನ್ನಿವೇಶಕ್ಕೆ ತಕ್ಕಂತೆ ತನ್ನಿಲ್ಲಿರುವ ಸ್ವತಂತ್ರವಾದ ಪ್ರತಿಭೆಯನ್ನು ಮೆರೆದಿರುವುದರಿಂದ ಈ ಕಥೆಗಳು ಚಿನ್ನಕ್ಕೆ ಕುಂದಣವಿಟ್ಟಂತೆ ಮತ್ತಷ್ಟು ಶೋಭಿಸಿವೆ."[೪೫] ಹರಿಹನ ಕೈಯಲ್ಲಿ ಪಳಗಿರುವ ರಗಳೆ ಶೈಲಿ, ವರ್ತಿಸುವ ಪದಜಾಲಗಳು, ಕಥೆಗಳ ಓಟದ ಲಲಿತಗತಿಗೆ ವಿಶೇಷವಾಗಿ ಸಹಾಯ ಮಾಡಿವೆ. ಅವನು ಮಾಡಿಕೊಂಡಿರುವ ಮೂಲ ಸನ್ನಿವೇಶಗಳ ಮಾರ್ಪಾಡು ಪೆರಿಯ ಪುರಾಣದ ಮಾರ್ಪಾಡು ಪೆರಿಯ ಪುರಾಣದ ಕಾವ್ಯ ಪ್ರಭೆಯನ್ನು ಮೆರೆಸುವಷ್ಟು ರಸಪುಷ್ಪವಾಗಿ ಮೈತಾಳಿದೆ. ತಿರುನೀಲಕಂಠರು, ಬೇಡರಕಣ್ಣಪ್ಪ, ತಿರುನಾಳ್ಪೋಯಪ್ಪೋವರ್ ಮತ್ತು ನಂಬಿಯಣ್ಣ ರಗಳೆಗಳಲ್ಲಿ ಅವನು ತೋರಿರುವ ಕವಿ ಜಾಣ್ಮೆ, ನಾಟಕೀಯ ಗುಣಗಳು ಇದಕ್ಕೆ ನಿದರ್ಶನವಾಗಿವೆ.

ಶೇಕ್ಕಿಳಾರನ ಪೆರಿಯ ಪುರಾಣದೊಂದಿಗೆ ಹರಿಹರನ ಪುರಾತನ ರಗಳೆಗಳನ್ನು ಹೋಲಿಸುವಾಗ ಒಂದು ವಿಷಯವನ್ನು ಗಮನದಲ್ಲಿಟ್ಟು ಕೊಳ್ಳಬೇಕಾಗುತ್ತದೆ. ಈ ಪುರಾತನದ ಬಾಳು ಅವರ ನಡೆ ನುಡಿ, ತೋರಿದ ಮಾರ್ಗದರ್ಶನ ಇವೆಲ್ಲವೂ ಶೇಕ್ಕಿಳಾರನ ನಾಡಿನಲ್ಲಿ ಆಗಿ ಹೋದ ಐತಿಹಾಸಿಕ ಸತ್ಯ. ಈ ಇತಿಹಾಸದ ವ್ಯಕ್ತಿಗಳನ್ನು ಮುಂದಿನ ಪೀಳಿಗೆಗೆ ಪರಿಚಯ ಮಾಡಿಕೊಡುವಾಗ, ಲೇಖಕನಿಗೆ ಇರಬೇಕಾದ ಸಂಯಮವನ್ನು ಶೇಕ್ಕಿಜಾರನು ತನ್ನ ಕಾವ್ಯದಲ್ಲಿ ಪ್ರದರ್ಶಿಸಿದ್ದಾನೆ. ಈ ಪುರಾತನ ಜೀವನ ಭಕ್ತಿ ಮಾರ್ಗಗಳನ್ನು, ಅವರು ಸಾರಿದ ಶಿವ ತತ್ವಗಳನ್ನು

ಶೇಕ್ಕಿಚಾರನು ಶ್ರದ್ಧೆಯಿಂದ, ಸಂಶೋಧನ ದೃಷ್ಟಿಯಿಂದ ಪರಿಶೀಲಿಸಿರುವುದು ಕಂಡು ಬರುತ್ತದೆ. "ಸಾಮಾಜಿಕವಾಗಿ ತಮಿಳುನಾಡಿನಲ್ಲಿದ್ದ ಶಿವಾಚಾರ ಪದ್ಧತಿ, ಜನರ ವ್ಯವಹಾರ ನೀತಿ, ಶೈವ ಬ್ರಾಹ್ಮಣರು, ಬೆಸ್ತರು, ಬೇಡರು, ಹೊಲೆಯರ ಪರಿಸರ, ಅವರ ಜೀವನ ರೀತಿಗಳು, ಅಲಂಕಾರಾದಿಗಳ ಪರಿಚಯ, ಆಯಾ ಕಥಾ ಸಂದರ್ಭಗಳಲ್ಲಿ ನೈಜವಾಗಿ ಬಂದಿವೆ. ಇವಲ್ಲದೆ ಸಂಗೀತ, ಚಿತ್ರಗೀತೆ, ರಾಜಕಾರಣ, ವಾಣಿಜ್ಯ, ಕೃಷಿ ಮೊದಲಾದವು ಆ ಕಾಲದಲ್ಲಿದ್ದಂತೆ ಚಿತ್ರಿತವಾಗಿವೆ. ಇವುಗಳನ್ನು ವರ್ಣಿಸುವಾಗ ಅವನ ಕಾವ್ಯ ಪ್ರಜ್ಞೆಯೊಂದಿಗೆ ಇತಿಹಾಸ ಪ್ರಜ್ಞೆಯೂ ಎಚ್ಚರವಾಗಿ ಕೆಲಸ ಮಾಡುತ್ತದೆ. ಈ ದೃಷ್ಟಿಯಿಂದ ಪೆರಿಯ ಪುರಾಣ ಒಂದು ಮಹಾ ಕಾವ್ಯ ಮಾತ್ರವಾಗಿರದೆ ತಮಿಳು ಸಂಸ್ಕೃತಿಯ ವಸ್ತು ಪೋಷಕವೂ ಆಗಿದೆ ಎಂದು ಶ್ರೀ ಎಂ.ಎಸ್. ಪೂರ್ಣಲಿಂಗಂ ಪಿಳ್ಳೆಯೆಂಬ ತಮಿಳು ವಿದ್ವಾಂಸರು ಹೇಳಿದ ಮಾತನ್ನು ಇಲ್ಲಿ ನೆನೆಯಬಹುದು".[೪೬]

ಶೇಕ್ಕಿಟಾರನಿಗಿದ್ದ ಈ ಐತಿಹಾಸಿಕ ದೃಷ್ಟಿ ಕನ್ನಡದ ಹರಿಹರನಿಗಿರಲಿಲ್ಲ ನೆರೆನಾಡಿನಲ್ಲಿದ್ದ ಶಿವಭಕ್ತರ ಕಥೆಗಳನ್ನು ತನ್ನ ನಾಡಿನ ಜನರಿಗೆ ಪರಿಚಯ ಮಾಡಿಕೊಡುವಾಗ ಅದರಲ್ಲಿದ್ದ ಐತಿಹಾಸಿಕ ಅಂಶಗಳು ಗೌಣವಾದವು. ಅಲ್ಲದೇ ತನ್ನವರದೇ ಆದ ಬಸವಾದಿ ಶಿವಶರಣರ ಕಥೆಗಳನ್ನು ರಗಳೆಗಳಲ್ಲಿ ಹೇಳುವಾಗಲೂ ಅವನು ಐತಿಹಾಸಿಕ ಅಂಶಗಳಿಗೆ ಹೆಚ್ಚು ಒತ್ತು ಕೊಡಲಿಲ್ಲ. ಅವರು ಭಕ್ತಿಯ ಉದ್ದೇಶ, ಆವೇಶ, ನಿಷ್ಠೆಗಳು ಅವನಿಗೆ ಪ್ರಿಯವಾದವು. ಅವರು ಮೆರೆದ ಮಹಿಮೆಗಳಿಗೆ ಹೆಚ್ಚು ಒತ್ತು ಕೊಟ್ಟು ಹೇಳುವುದರಿಂದ ಈ ಕಥೆಗಳು ಹೆಚ್ಚಾಗಿ ಜನರ ಮನಸ್ಸಿನಲ್ಲಿ ನೆಲೆಸಲು ಸಹಾಯವಾಗುತ್ತದೆ ಎಂದು ಅವನು ಉದ್ದೇಶವಿಟ್ಟಂತೆ ಕಾಣುತ್ತದೆ. ಶೇಕ್ಕಿಚಾರನು ಪುರಾತನರು ಮೆರೆದ ಪವಾಡಗಳನ್ನು ಉಲ್ಲೇಖಿಸಿದರೂ ಅವುಗಳನ್ನು ಅತಿ ಸೂಕ್ಷ್ಮದಲ್ಲಿ ಮುಗಿಸಿ ಬಿಡುತ್ತಾನೆ. ಹರಿಹರ ಹುಟ್ಟು ಕಥೆಗಾರ, ಕಥನಕಲೆ ಅವನಿಗೆ ಹಸ್ತಗತವಾದಂತೆ ಶೇಕ್ಕಿಚಾರನಿಗೆ ಆಗಿಲ್ಲ. ಇಲ್ಲಿ ಹರಿಹರನದೇ ಮೇಲುಗೈಯಾಗಿದೆ.

"ಶಕ್ಕಿಲಾರನಲ್ಲಿ ಕಾಣಲಾಗದ ಮತ್ತು ಹರಿಹರನಲ್ಲಿ ಕಂಡು ಬರುವ ಮತ್ತೊಂದು ಅಂಶವೆಂದರೆ ಬ್ರಾಹ್ಮಣ ಮತನಿಂದೆ, ಇದಕ್ಕೆ ಹರಿಹರನ ಕಾಲಕ್ಕೆ ಮತ್ತು ಅವನಿಗಿಂತ ಮುಂಚೆ ಬಸವಣ್ಣನವರ ಕಾಲಕ್ಕೆ ತಲೆದೋರಿದ ಸಾಮಾಜಿಕ ಕ್ರಾಂತಿಯೇ ಕಾರಣವೆಂದು ಹೇಳಬಹುದು. ವೀರಶೈವ ಮತವು ವೈದಿಕ ಮತದ ಕೆಲವು ನಂಬಿಕೆಗಳಿಗೆ ವಿರೋಧವಾಗಿ, ಉಗ್ರವಾದ ಚಳವಳಿ ರೂಪದಲ್ಲಿ ಕರ್ನಾಟದಲ್ಲಿ ಕಾಣಿಸಿಕೊಂಡಂತೆ, ತಮಿಳುನಾಡಿನ ಶೈವಧರ್ಮವು ಕಾಣಿಸಿಕೊಳ್ಳಲಿಲ್ಲ. ಸಮಾಜದಲ್ಲಿ ಜಾತಿ, ಕುಲಭೇದಗಳನ್ನು ತೊಡೆದು ಹಾಕುವುದರಲ್ಲಿ ವೀರಶೈವ ಶರಣರು ಹೊಸ ಕ್ರಾಂತಿ ಉಂಟು ಮಾಡಿದರು".[೪೭]

ಸಾಮಾಜಿಕ ಅಸಮಾನತೆ ಬಗ್ಗೆ, ಅಸಹನೆ ವಿಶೇಷವಾದ ಕಾಳಜಿ ಇತ್ತು. ಹರಿಹರನೂ ಇದಕ್ಕೆ ಹೊರತಾಗಿರಲಿಲ್ಲ, ಈ ಕಳಕಳಿ, ಅಸಹನೆ ಶೈವಭಕ್ತರಲ್ಲಿ ಅಷ್ಟಾಗಿ ಕಾಣಿಸಿಕೊಳ್ಳಲಿಲ್ಲ. ಅವರಿಗೆ ವೈದಿಕ ಮತದ ಮೇಲೆ ಉಗ್ರ ಕೋಪವಾಗಲೀ, ವೈದಿಕ ಸಂಪ್ರದಾಯಗಳನ್ನು ಕುರಿತ ವಿರೋಧವಾಗಲೀ ಇರಲಿಲ್ಲ. ಈ ಶೈವಭಕ್ತರು ತಮ್ಮ ತಮ್ಮ ಕುಲಗೋತ್ರಗಳಲ್ಲಿದ್ದುಕೊಂಡೇ ಶೈವಧರ್ಮ ಸ್ಥಾಪನೆಗೆ ಹೆಣಗಿದರು. ಶೈವ ನಿಷ್ಠೆಯೊಂದೇ ಎಲ್ಲ ಜಾತಿಕುಲಗಳನ್ನು ಬೆಸೆಯುವ ಸಾಧನವಾಗಿತ್ತು. ಇದರಿಂದ "ಪೆರಿಯ ಪುರಾಣದಲ್ಲಿ ವೇದಿಯರ ಕುಲದ ಅವಹೇಳನ ನೇರವಾಗಿ ಬರುವುದಿಲ್ಲ. ಪ್ರತಿಯಾಗಿ ತಿಲ್ಲೈ ಬ್ರಾಹ್ಮಣರ ಸಂಪ್ರದಾಯ, ಹಿರಿಮೆಗಳನ್ನು ವರ್ಣಿಸಲು ಒಂದು ಅಧ್ಯಾಯವೇ ಇದರಲ್ಲಿ ಮೀಸಲಾಗಿದೆ.

ಅಲ್ಲದೆ ಭಕ್ತರ ಪರೀಕ್ಷೆಗಾಗಿ ಶಿವನು ವೃದ್ಧವೇದಿಯ ಬ್ರಾಹ್ಮಣನಾಗಿಯೋ, ಬಾಲವೇದಿಯಾಗಿಯೋ ಬರುವುದು ಕಥೆಗಳಲ್ಲಿ ಸಾಮಾನ್ಯವಾದ ಅಂಶ. ಶಕ್ತಿಜಾರ ಮತ್ತು ಹರಿಹರನ ಜೀವನ ಮಾರ್ಗದಲ್ಲಿರುವ ಕೆಲವು ಸಮಾನ ಧರ್ಮವನ್ನು ಇಲ್ಲಿ ಗುರುತಿಸಿ ಹೇಳಿದರೆ ತಪ್ಪಾಗದು, ಇವರಿಬ್ಬರು ಮೊದಲು ರಾಜಾಶ್ರಯದಲ್ಲಿದ್ದು, ಅನಂತರ ವಿರಕ್ತರಾದರು. ಇಬ್ಬರೂ ಸ್ವತಂತ್ರವಾದ ನಿರ್ಭೀತ ಪ್ರವೃತ್ತಿಯುಳ್ಳವರು. ಯೋಗಿಗಳಂತೆ ಜೀವನ ನಡೆಸಿ ಶಿಷ್ಯವರ್ಗವನ್ನು ಬೆಳೆಸಿಕೊಂಡವರು. ಶೇಕ್ಕಿಳಾರನಿಗೆ ತಿಲ್ಲೈನಟರಾಜನು ಆರಾಧ್ಯದೈವವಾಗಿದ್ದಂತೆ ಹಂಪಿಯ ವಿರೂಪಾಕ್ಷ ಹರಿಹರನಿಗೆ ಆರಾಧ್ಯದೈವವಾಗಿದ್ದ. ಮುಂದೆ ಬಂದ ರಾಘವಾಂಕ, ಲಕ್ಕಣ್ಣ ದಂಡೇಶ, ನಿಜಗುಣ ಶಿವಯೋಗಿ ಮೊದಲಾದ ವೀರಶೈವ ಕವಿಗಳು ಹರಿಹರನನ್ನು ಗುರುಸ್ಥಾನದಲ್ಲಿಟ್ಟು ಪೂಜಿಸಿ ಕಾವ್ಯ ರಚನೆಯಲ್ಲಿ ಅವನನ್ನು ಅನುಸರಿಸಿದಂತೆ, ಶೇಕ್ಕಿಳಾರನನ್ನು ಉಮಾಪತಿ ಶಿವನೇ ಮೊದಲಾದವರು ಪೂಜ್ಯ ಭಾವದಿಂದ ನೋಡಿ, ಶೈವಧರ್ಮದ ಪ್ರಚಾರದಲ್ಲಿ ಅವನು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿದರು. ಪೆರಿಯಾ ಪುರಾಣವನ್ನು ಶೈವಧರ್ಮ ಗ್ರಂಥಗಳಾದ ಹನ್ನೆರಡು ತಿರುನೀಲಮಜೈಗಳಲ್ಲಿ ಹನ್ನೆರಡನೆಯದಾಗಿ ಗೌರವಿಸಿದರು.

ತಮಿಳುನಾಡಿನಲ್ಲಿ ಶೇಕ್ಕಿಳಾರನನ್ನು ೬೩ ಪುರಾತನರೊಂದಿಗೆ ಸೇರಿಸಿ ೬೪ನೇಯ ನಾಯನಾರರೆಂದು ಪೂಜಿಸುವುದು ಕಂಡು ಬರುತ್ತದೆ. ಈ ಶೈವ ಭಕ್ತರ ಕಥೆಗಳು ಜನಸಾಮಾನ್ಯರ ಹೃದಯದಲ್ಲಿ ನೆಲೆಸಿರುವವರೆಗೂ ಈ ಇಬ್ಬರು ಕವಿಗಳು ತಮ್ಮ ಕಾವ್ಯ ಪ್ರತಿಭೆಯಿಂದ ಜಗದ್ವಂದ್ಯರಾಗಿ ಮೆರೆಯುವುದರಲ್ಲಿ ಸಂದೇಹವಿಲ್ಲ. ದಕ್ಷಿಣ ಭಾರತದಲ್ಲಿ ಮೊಟ್ಟಮೊದಲಿಗೆ ಶೈವಚಳವಳಿ ಆರಂಭವಾಗಿದ್ದು ತಮಿಳುನಾಡಿನಲ್ಲಿ, ಎಂಬುದು ಈಗಾಗಲೇ ಗೊತ್ತಿರುವ ಸಂಗತಿ, ಹರಿಹರ ನಾಯನಾರರು ಮತ್ತು ಅಳ್ವಾರರ ಪ್ರಭಾವಕ್ಕೊಳಗಾಗಿ ತ್ರಿಷಷ್ಟಿ ಶಲಕ ಪುರಾತನರ ರಗಳೆಗಳನ್ನು

ರಚಿಸಿ ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡಿದ್ದಾನೆ. ಜತೆಗೆ ಕನ್ನಡ ನಾಡಿನ ಶಿವಭಕ್ತರ ಚರಿತ್ರೆಗಳನ್ನು ಕಾವ್ಯದ ಮೂಲಕ ಕಟ್ಟಿಕೊಟ್ಟ ಮೊದಲ ಕವಿ ಈತ. ಮೂಲತಃ ಶೈವಕವಿಯಾಗಿದ್ದರೂ ಬಸವಾದಿ ಶರಣರ ಪ್ರಭಾವಕ್ಕೊಳಗಾಗಿ ವೀರಶೈವ ಧರ್ಮಕ್ಕೆ ಪರಿವರ್ತನೆಯಾಗುತ್ತಾನೆ. ಅಲ್ಲದೆ ೧೨ನೇ ಶತಮಾನದ ಅಂತ್ಯದಲ್ಲಿದ್ದ ವಚನಕಾರರ ಜೀವನ ಚರಿತ್ರೆ ಹಾಗೂ ಕೆಲವರನ್ನು ನೋಡಿ ಅವರ ವಿಚಾರ ತಿಳಿದುಕೊಂಡಿದ್ದ ಹರಿಹರ ಅಕ್ಕ, ಅಲ್ಲಮ, ಬಸವಣ್ಣ ಸೇರಿದಂತೆ, ದಲಿತ, ಹಿಂದುಳಿದ ವರ್ಗದ ಶರಣ ಕಾವ್ಯಗಳನ್ನು ರಚಿಸಿ ಅವರನ್ನು ದೈವಾಂಶ ಸಂಭೂತರ ಮಟ್ಟಕ್ಕೇರಿಸುತ್ತಾನೆ.

೬೩ ಜನ ಶಿವಶರಣರು ತಮಿಳುನಾಡಿನಲ್ಲಿ ಮಹಾನ್ ಭಕ್ತಿ, ಕಾಯಕ ವೃತ್ತಿ ಕೈಗೊಂಡು ತಮಿಳು ಅರಸರ ವಿರುದ್ಧ ಬಂಡೆದ್ದಿದ್ದರು ಎಂದು ಉಚ್ಛ್ರಾಯ ಸ್ಥಿತಿಯಲ್ಲಿದ್ದ ವೈಷ್ಣವ ಧರ್ಮ, ಜೈನಧರ್ಮ, ಬೌದ್ಧ ಧರ್ಮದ ವಿರುದ್ಧ ಹೋರಾಡಬೇಕಿತ್ತು. ಪ್ರಬಲವಾಗಿದ್ದ ವೈಷ್ಣವರು, ದೇವಾಲಯ, ಮಠ, ಮಂದಿರಗಳನ್ನು ಕಟ್ಟಿ ಧರ್ಮ ಪ್ರಸಾರ ಕಾರ್ಯದಲ್ಲಿ ತೊಡಗಿದ್ದರು. ಆದರೆ ಈ ಧರ್ಮ ವೈದಿಕರಿಗೆ ಸೀಮಿತವಾಗಿದ್ದರಿಂದ ಬೇಸತ್ತ ಶೈವರು ತಮ್ಮ ಧರ್ಮವನ್ನು ಬೆಳೆಸಲು ಯತ್ನಿಸಿದರು. ಆ ಸಂದರ್ಭದಲ್ಲಿದ್ದ ಶೈವಭಕ್ತರು ತಮ್ಮ ವೃತ್ತಿ, ಕಾಯಕಗಳ ಮೂಲಕ ಧರ್ಮ ಗಟ್ಟಿಗೊಳಿಸಿ ಒಂದು ಹೊಸ ರೂಪ ನೀಡಿದರು ಎಂಬ ಅಭಿಪ್ರಾಯವನ್ನೆ ಹಲವಾರು ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಶೈವ ಕವಿಯಾದ ಹರಿಹರ ಬಸವಾದಿ ಶರಣರ ಧ್ಯೇಯ, ಆದರ್ಶಗಳನ್ನು ಒಪ್ಪಿಕೊಂಡು ಸ್ಥಾವರ ಕಲ್ಪನೆಯಿಂದ ಜಂಗಮ ಕಲ್ಪನೆ ಕಡೆ ಗಮನಹರಿಸಿ ಲಿಂಗಪೂಜೆಗೆ ಬರುವ ಸ್ಥಿತಿಯನ್ನು ಹರಿಹರನ ರಗಳೆಗಳಲ್ಲಿ ಕಾಣಬಹುದು. ವ್ಯಕ್ತಿ, ಸಮಾಜ ಜಂಗಮವಾಗಬೇಕು, ಸ್ಥಾವರವಾಗಬಾರದು, ಗುಡಿ, ಲಿಂಗ, ಪೂಜೆ ಅಂತ ಶರಣರು ಧರ್ಮ ಪ್ರಸಾರ ಮಾಡಿದರು. ಬಸವಣ್ಣ ಕಟ್ಟಿದ ಧರ್ಮ ಲಿಂಗಾಯತ ಧರ್ಮ ದುಡಿಮೆದಾರರ ಧರ್ಮವೇ ಹೊರತು ಅದೊಂದು (ಲಿಂಗಾಯತ) ಜಾತಿಗೆ ಸೀಮಿತವಾಗಿಲ್ಲ, ಎಲ್ಲ ವರ್ಗದವರನ್ನು ಒಂದೆಡೆ ಸೇರಿಸಿ ಭಕ್ತಿಪಥ ರಚಿಸಿದ ಹರಿಹರ ಹದಿನೆಂಟು ಜಾತಿಗೆ ಸೇರಿದ ಲಿಂಗಾಯತರು ಬ್ರಾಹ್ಮಣರು ಮೊದಲ್ಗೊಂದು ಶ್ವಪಚ ಕಡೆಯಾಗಿ ಲಿಂಗಧಾರಣೆ ಮಾಡುವವರು ಭಕ್ತರು ಉಳಿದವರು ಭವಿಗಳು ಎಂದು ರಗಳೆಗಳಲ್ಲಿ ಹರಿಹರ ವಿವರಿಸಿದ್ದಾನೆ.

**ಭಕ್ತರಲ್ಲಿ ಎರಡು ವರ್ಗ**

೧.ಭಕ್ತ, ೨. ಭವಿ, ಉದಾ: ಭವಿಯಾಗಿದ್ದ ಬಸವಣ್ಣನ ಆದರ್ಶಗಳ ಹಿನ್ನೆಲೆಯನ್ನಿಟ್ಟುಕೊಂಡು ಬಸವರಾಜ ದೇವರ ರಗಳೆ, ಅಕ್ಕನ ಗುಪ್ತ ಭಕ್ತಿ ಆಧರಿಸಿ ಅಕ್ಕಮಹಾದೇವಿಗಳೆ ರಚಿಸಿ ಮಹಾನ್

ಭಕ್ತರನ್ನಾಗಿ ಪರಿವರ್ತಿಸಿ ಕೈಲಾಸ ಗಣಕ್ಕೆ ಸೇರಿಸುವ ಕೆಲಸವನ್ನು ಹರಿಹರ ರಗಳೆಗಳಲ್ಲಿ ಮಾಡುತ್ತಾನೆ. ಬಸವರಾಜ ದೇವರ ರಗಳೆಯಲ್ಲಿ ದುಡಿಮೆಗಾರರ ವರ್ಗವನ್ನು ಒಗ್ಗೂಡಿಸಿ ಬಿಜ್ಜಳನ ಸಂಪತ್ತನ್ನೆಲ್ಲ ಹಂಚುವುದು, ಹರಳಯ್ಯ, ಮಧುವರಸರ ಮಗಳ ಮದುವೆ ಮಾಡಿಸುವುದು, ಹೊಲೆಯರ ಮನೆಯಲ್ಲಿ ಊಟ ಮಾಡಿ ಆಳುವ ದೊರೆ ಬಿಜ್ಜಳನ ಕೆಂಗಣ್ಣಿಗೆ ಗುರಿಯಾಗುವುದು. ನಂತರ ಬಸವಣ್ಣ ಕೈಗೊಳ್ಳುವ ಕಾರ್ಯಗಳಿಂದ ಕಲ್ಯಾಣ ರಾಜ್ಯದಲ್ಲಿ ಸಂಕ್ರಮಣ ಸ್ಥಿತಿ ಉಂಟಾಗಿ ಇತ್ತ ಅರಸನಿಗೂ ಬೇಡವಾಗಿ ಬಸವಣ್ಣ ಕೂಡಲ ಸಂಗಮದಲ್ಲಿ ಐಕ್ಯನಾಗುತ್ತಾನೆ.

ಅದೇ ರೀತಿ ಹರಿಹರ ಮಹಾಕವಿ ಕೂಡ ಹೊಯ್ಸಳ ಅರಸ ಬಲ್ಲಾಳನ ಆಡಳಿತಕ್ಕೆ ಬೇಸತ್ತು. ನಾನು ಸಾವವರ ಮೇಲೆ, ಮನುಜರ ಮೇಲೆ ಕಾವ್ಯ ಬರೆಯುವುದಿಲ್ಲ. ಏನಿದ್ದರೂ ಶಿವಭಕ್ತರ ಚರಿತ್ರೆ ಆಧರಿಸಿದ ಕಾವ್ಯಗಳನ್ನು ರಚಿಸಿ ವಿರೂಪಾಕ್ಷನಿಗೆ ಒಪ್ಪಿಸುತ್ತೇನೆ ಎಂದು ಆ ಸ್ಥಾನಕ್ಕೆ, ಪಂಡಿತ ವರ್ಗಕ್ಕೆ ಸೀಮಿತವಾಗಿದ್ದ ಕಾವ್ಯವನ್ನು ಜನಸಾಮಾನ್ಯರ ಬಳಿ ತಂದ ಹರಿಹರನ ನಿಲುವು, ಬಸವಣ್ಣನ ನಿಲುವು ಒಂದೇ ಎಂದು ವಿಶ್ಲೇಷಿಸಬಹುದು. ಇಂತಹ ಅನೇಕ ಉದಾಹರಣೆಗಳನ್ನು ಕೊಡಬಹುದು. ಇದೇ ರೀತಿ ತಮಿಳುನಾಡಿನಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದ ಶೈವ ಚಳವಳಿ ಕೋಲಾಹಲ ಸೃಷ್ಟಿಸಿತ್ತು.ಆಗ ಅಲ್ಲಿನ ಶಿವಭಕ್ತರ ಚರಿತ್ರೆಗಳನ್ನು ರಚಿಸಿದ್ದ ಶಕ್ಕೀಳಾರ್ ಎಂಬ ಮಹಾಕವಿಯ ಪ್ರಭಾವಕ್ಕೆ ಒಳಗಾದ ಹರಿಹರ ತಮಿಳುನಾಡಿನಲ್ಲಿ ಸಂಚರಿಸಿ. ಮಾಹಿತಿ ಕಲೆಹಾಕಿದ. ಅಲ್ಲದೆ ಶೇಕ್ಕಿಳಾರ್ ರಚಿಸಿದ ಅರವತ್ತು ಮೂವರ ಪುರಾತನರ ಚರಿತ್ರೆಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿ, ಕನ್ನಡ ಹಾಗೂ ತಮಿಳು ಶೈವ ಭಕ್ತರು ಸೇರಿ ಒಟ್ಟು ೧೦೬ ರಗಳೆಗಳನ್ನು ರಚಿಸಿದ್ದಾನೆಂಬ ವಿವರಗಳು ಕಾವ್ಯಗಳು, ಸಂಶೋಧನೆ, ತಾಳೆಗರಿ ಮುಂತಾದವುಗಳಿಂದ ತಿಳಿದು ಬರುತ್ತದೆ.

ತಮಿಳುನಾಡಿನಲ್ಲಿ ಉಂಟಾದ ವರ್ಣ ಸಂಕರದಿಂದಾಗಿ ಅಲ್ಲಿದ್ದ ಶಿವಭಕ್ತರು ಬೇರೆಡೆ ವಲಸೆ ಹೋಗಿದ್ದರು. ಜೈನಧರ್ಮದ ಪ್ರಭಾವಕ್ಕೆ ಒಳಗಾಗಿ ದೇವಾಲಯಗಳನ್ನು ಕೆಡವಿ ಮೂರ್ತಿಗಳನ್ನು ನಾಶಮಾಡಿ ದೇವಳಗಳಲ್ಲಿ ಜಿ ನಮೂರ್ತಿಗಳನ್ನು ಸ್ಥಾಪಿಸಲಾಗಿತ್ತು. ಉದಾಹರಣೆ: ಸೌರಾಷ್ಟ್ರದ ಆದಯ್ಯ. ಮಾರುಡಿಗೆ ನಾಚಿ ತಂದೆ, ಏಕಾಂತ ರಾಮಯ್ಯ ರಗಳೆಗಳನ್ನು ನೋಡಬಹುದು. ಹೀಗೆ ಶೈವ ಚಳವಳಿ ಮತ್ತು ಹರಿಹರ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಅಡಿಟಿಪ್ಪಣಿ

೧. ರಹಮತ್ ತರೀಕೆರೆ, ಧರ್ಮ ವಿಶ್ವಕೋಶ-೨, ಪುಟ – ೨೬೨ – ೨೬೩

೨. ಆರ್.ಕೆ.ಮಣಿಪಾಲ, ಸಾಮಾಜಿಕ ಚಳವಳಿಗಳು, ಪುಟ – ೧೬

೩. ಕಾಶೀನಾಥ ಅಂಬಲಗಿ, ಕಬೀರ್‌ದಾಸ್, ಪುಟ – ೧೯ –೨೦

೪. ವರದರಾಜ ರಾವ್, ಪುರಂದರದಾಸರು, ಪುಟ – ೧೬ –೧೭

೫. ಗಂಗಾಧರ ಮೊದಲಿಯಾರ್, ನಂದನಾರ್, ಪುಟ – ೮

೬. ಚಿದಾನಂದ ಮೂರ್ತಿ ಎಂ., ವಚನ ಸಾಹಿತ್ಯ, ಪುಟ – ೧೮

೭. ನಾರಾಯಣ ಪಿ.ವಿ., ವಚನ ಚಳವಳಿ, ಪುಟ – ೩೦

೮. ಹಿರೇಮಠ ಆರ್.ಸಿ. (ಸಂ) ತ್ರಿಷಷ್ಠಿ ಪುರಾತನರ ಚಾರಿತ್ರ್ಯಂ ಪು – ೧೬

೯. ಮೀನಾಕ್ಷಿ ಸುಂದರಂ ಟಿ.ಪಿ., A Histroy of Tamil litera ture ಪುಟ – ೬೫

೧೦. ಮೀನಾಕ್ಷಿ ಸುಂದರಂ ಟಿ.ಪಿ., ಪೂರ್ವೋಕ್ತ, ಪುಟ – ೬೭ – ೬೮

೧೧. ಕೃಷ್ಣರಾಯ ಅ.ನ. (ಸಂ), ಭಾರತೀಯ ಸಂಸ್ಕೃತಿದರ್ಶನ, ಪುಟ – ೪೦೦

೧೨. ಹಿರೇಮಠ ಆರ್.ಸಿ. (ಸಂ), ಪೂರ್ವೋಕ್ತ, ಪುಟ – ೪೩

೧೩. ಕೃಷ್ಣರಾಯ ಅ.ನ.(ಸಂ), ಪೂರ್ವೋಕ್ತ, ಪು – ೪೦೦

೧೪. Philips G.E., The Christiam Gollege Magazine Madors, ಪುಟ – ೪

೧೫. ಕೃಷ್ಣರಾಯ ಅ.ನ. (ಸಂ), ಪುರ್ವೋಕ್ತ, ಪು – ೪೦೧

೧೬. ಸಾಖರೆ ಎಂ.ಆರ್. (ಸಂ), ಲಿಂಗಧಾರಣ ಚಂದ್ರಿಕೆ ಪುಟ – ೨೧೩–೨೧೪

೧೭. ಮೀನಾಕ್ಷಿ ಸುಂದರ ಟಿ.ಪಿ., ಪೂರ್ವೋಕ್ತ, ಪುಟ – ೧೩೦

೧೮. ಸೋಮಸುಂದರಂ ಪಿಳ್ಳೆ, ವೀರಶೈವ ತತ್ವ, ಪುಟ – ೨೪೩

೧೯. ಯುಗ ಯಾತ್ರಿ ಭಾರತೀಯ ಸಂಸ್ಕೃತಿ, ಸಂಪುಟ – ೧, ಪುಟ – ೧೪೪

೨೦. ಹಿರೇಮಠ ಆರ್. ಸಿ. (ಸಂ), ಪೂರ್ವೋಕ್ತ, ಪುಟ – ೪೯

೨೧. ಮೀನಾಕ್ಷಿ ಸುಂದರಂ ಟಿ.ಪಿ., ಪೂರ್ವೋಕ್ತ, ಪುಟ – ೧೨೨

೨೨. ಹಿರೇಮಠ ಆರ್.ಸಿ. (ಸಂ), ಪೂರ್ವೋಕ್ತ, ಪುಟ–೪೯

೨೩. ಹಿರೇಮಠ ಆರ್.ಸಿ. (ಸಂ), ಪೂರ್ವೋಕ್ತ, ಪದ್ಯ – ೪೩, ಪುಟ–೪೯

೨೪. ಶಿವಮೂರ್ತಿ ಶಾಸ್ತ್ರೀ ಬಿ. (ಸಂ), ಪುರಾತನರ ತ್ರಿವಿಧಿ, ಪುಟ–೯

೨೫. ಶಿವಮೂರ್ತಿ ಶಾಸ್ತ್ರೀ ಟಿ. (ಸಂ), ಪೂರ್ವೋಕ್ತ, ಪುಟ–೧೦

೨೬. ಹಿರೇಮಠ ಆರ್.ಸಿ. (ಸಂ). ಪೂರ್ವೋಕ್ತ, ಪುಟ–೪೦

೨೭. ಹಿರೇಮಠ ಆರ್.ಸಿ. (ಸಂ). ಪೂರ್ವೋಕ್ತ, ಪುಟ–೫೧–೫೨

೨೮. ಕರ್ನಾಟಕ ವಿವಿ; ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು ವಚನ ಸಂಖ್ಯೆ– ೧೭೧ ಪುಟ – ೧೦೬೨–೧೦೯೪

೨೯. ಕರ್ನಾಟಕ ವಿವಿ ಪೂರ್ವೋಕ್ತ ವಚನ ಸಂಖ್ಯೆ –೫೬೩ ಪುಟ –೧೦೬೨– ೧೦೯೪.

೩೦. ಕರ್ನಾಟಕ ವಿವಿ ಪುರ್ವೋಕ್ತ, ವಚನ ಸಂಖ್ಯೆ–೨೯೦ ಪುಟ–೧೦೬೨– ೧೦೯೪.

೩೧. ಕರ್ನಾಟಕ ವಿವಿ ಪೂರ್ವೋಕ್ತ, ವಚನ ಸಂಖ್ಯೆ – ೪೩೫ ಪುಟ –೧೦೬೨–೧೦೯೪.

೩೨. ಬಸವನಾಳ ಶಿ.ಶಿ.(ಸಂ), ಬಸವಣ್ಣನವರ ಷಟ್‌ಸ್ಥಲ ವಚನಗಳು, ವಚನ–೬೨೧

೩೩. ಪರಂಜ್ಯೋತಿ ಬಿ., ಶೈವ ಸಿದ್ಧಾಂತ, ಪುಟ –೬

೩೪. ಭಂಡಾರ್ಕರ್ ಆರ್.ಜಿ., Vaishnavisam saivism, ಪುಟ – ೨೮

೩೫. ರಾಜಮಾಣಿಕ್ಕವಾರ್ ಎಂ., ಪೆರಿಯಾ ಪುರಾಣ ಆದಾಯ್ಚಿ, ಪುಟ – ೧೨

೩೬. ಹಿರೇಮಠ ಆರ್.ಸಿ., ಹರಿಹರನ ಪುರಾತನ ರಗಳೆಗಳು, ಪುಟ – ೧೮

೩೭. ಬಸವರಾಧ್ಯ ಎನ್., ಹರಿಹರದೇವ, ಪುಟ – ೧೯

೩೮. ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ–೧, ಪುಟ–೬

೩೯. ಹಿರೇಮಲ್ಲೂರು ಈಶ್ವರನ್, ಹರಿಹರನ ಕೃತಿಗಳು ಒಂದು ಸಂಖ್ಯಾನಿರ್ಣಯ,ಪುಟ–೨೬

೪೦. ಗುಂಡಪ್ಪ ಎಲ್., ಪೆರಿಯ ಪುರಾಣ, ಪುಟ – ೧೭

೪೧. ಸದಾನಂದ ಕನವಳ್ಳಿ, ವೀರಶೈವ ಸಾಹಿತ್ಯ ಸಮೀಕ್ಷೆ, ಪುಟ – ೨೪

೪೨. ದೇವಿರಪ್ಪ ಎಚ್., ಶರಣ ಚರಿತಮಾನಸಂ – ಪು – ಪೀಠಿಕೆ

೪೩. ಶಾಜಿಮೊಪಾವುಗಳ್, ಪೆರಿಯ ಪುರಾಣಂ, ಪುಟ – ೭೪

೪೪. ಮೀನಾಕ್ಷಿ ಸುಂದರಂ ಟಿ.ಪಿ., ಪೂರ್ವೋಕ್ತ, ಪುಟ– ೯೫

೪೫. ಸುಂಕಾಪುರ ಎಂ.ಎಸ್., ಹಂಪೆ ಹರಿಹರದೇವನ ನೂತನ ಪುರಾತನರ ರಗಳೆಗಳು ಪುಟ–೩೦

೪೬. ನರಸಿಂಹಚಾರ್ ಡಿ.ಎಲ್., ಹರಿಹರ, ಪುಟ – ೫೨

೪೭. ಸೀತಾರಾಮಯ್ಯ ವಿ., ಹರಿಹರದೇವಪುರ, ಪುಟ – ೧೭೯

ಅಧ್ಯಾಯ – ೪

# ಹರಿಹರನ ರಗಳೆಗಳಲ್ಲಿ ಸಾಮಾಜಿಕ, ಧಾರ್ಮಿಕ, ಪ್ರಭುತ್ವದ ಸಂಘರ್ಷ

ಹರಿಹರನ ರಗಳೆಗಳ ಕಾಲದ ಸಾಮಾಜಿಕ, ಧಾರ್ಮಿಕ, ಪ್ರಭುತ್ವ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಜಾತಿ, ವರ್ಣ, ಸಂಸ್ಕಾರ, ಗುಲಾಮ ಪದ್ಧತಿ, ಶಿವಶರಣರ ಆದರ್ಶ ಮುಂತಾದ ವಿಷಯಗಳ ಬಗ್ಗೆ ಚರ್ಚೆ ಮಾಡಲಾಗಿದೆ. ನಮ್ಮ ಸಮಾಜ ವ್ಯವಸ್ಥೆಯ ಬಹುಮುಖ್ಯ ಅಂಶವಾದ ಜಾತಿಗಳ ಚರ್ಚೆಯು ವಿಸ್ತಾರವಾಗಿಯೇ ಇರುವುದನ್ನು ಗಮನಿಸಬಹುದು. ಇದಕ್ಕೆ ಕಾರಣ ರಗಳೆಗಳಲ್ಲಿ ಈ ವಿಷಯದ ಬಗ್ಗೆ ದೊರೆಯುವ ಸಾಮಗ್ರಿ ವೈಫಲ್ಯದ ಜತೆಗೆ ಜಾತಿ ಪದ್ಧತಿಯ ವಿಕಾಸ ಕ್ರಮವನ್ನು ಗುರುತಿಸುವುದಲ್ಲದೆ ಶರಣರು ಜಾತಿ ಪದ್ಧತಿ ಬಗ್ಗೆ ತೋರಿಸಿದ ಮನೋಭಾವದ ವಿವರಣೆಯಿತ್ತಿರುವುದೂ ಸಹ ಕಾರಣವಾಗಿದೆ.

"ಜಾತಿಯಿಂದ ಆರ್ಥಿಕ ಕಾರ್ಯ ಸಾಮರ್ಥ್ಯ ಉತ್ತಮವಾಗುವುದಿಲ್ಲ, ಜಾತಿ, ಜನಾಂಗವನ್ನು ಉತ್ತಮಗೊಳಿಸಿಲ್ಲ, ಉತ್ತಮಗೊಳಿಸಲು ಅದಕ್ಕೆ ಸಾಧ್ಯವೂ ಇಲ್ಲ. ಆದರೆ, ಅದು ಒಂದನ್ನು ಮಾತ್ರ ಸಾಧಿಸಿದೆ. ಜಾತಿಯು ಹಿಂದೂಗಳನ್ನು ಪ್ರತ್ಯೇಕ ಗುಂಪುಗಳಾಗಿ ವಿಂಗಡಿಸಿ ನೀತಿಗೆಡಿಸಿದೆ"[೧] 'ಜಾತಿ' ಭಾರತವು ಎದುರಿಸುತ್ತಿರುವ ಬಹುಕಾಲದ ಕಲಂಕಃ ವಿಚಿತ್ರ ರೋಗ, ಅದರ ಉಗಮ, ವಿಕಾಸ, ವ್ಯಾಪಕತೆ ಬಗ್ಗೆ ಅಧ್ಯಯನಗಳ ಮೇಲೆ ಅಧ್ಯಯನಗಳಾಗಿವೆ. ಚರ್ಚೆಗಳು ಎಡೆಬಿಡದೆ ನಡೆದಿವೆ; ಆದರೂ ಅದರ ಸ್ವರೂಪ ವಿಚಾರವಾಗಿ ಖಚಿತವಾದ ಏಕಾಭಿಪ್ರಾಯಕ್ಕೆ ಬರಲಾಗಿಲ್ಲ. ಇದು ಅದರ ದೈತ್ಯ ಶಕ್ತಿ, ಸಂಕೀರ್ಣತೆಯನ್ನು ಎತ್ತಿ ತೋರುತ್ತದೆ.

ಬುದ್ಧನಿಂದ ಮೊದಲ್ಗೊಂಡು, ಆಧುನಿಕ ಕಾಲದ ಫುಲೆ, ಗಾಂಧಿ, ಪೆರಿಯಾರ್, ಅಂಬೇಡ್ಕರ್, ಲೋಹಿಯಾರಂತಹ ವಿಚಾರವಾದಿಗಳು 'ಜಾತಿ'ಯ ಅನಾಹುತ, ಅಪಾಯಗಳನ್ನು ಎತ್ತಿ ತೋರಿದ್ದಾರೆ. ಸರಳವಾಗಿ ಹೇಳುವುದಾದರೆ ಜಾತಿಯು ಮನುಷ್ಯ ಮನುಷ್ಯನ ನಡುವೆ

ಒಂದು ಕಂದಕ ನಿರ್ಮಿಸುತ್ತದೆ. ಅದು ಅಸಮಾನತೆ ಮತ್ತು ಶೋಷಣೆಗಳಿಗೆ ಕಾರಣವಾಗುತ್ತದೆ. ಈ ಪ್ರತ್ಯೇಕತೆ ಅದೃಶ್ಯವಾದ ಗೋಡೆ ನಿರ್ಮಿಸಿ, ಕೆಲವರಿಗೆ ಮಾತ್ರ ಅನುಕೂಲತೆಯನ್ನು ಬಹುಜನರಿಗೆ ಅನಾನುಕೂಲವನ್ನು ಉಂಟುಮಾಡುತ್ತದೆ.

ಶತಮಾನಗಳ ಕಾಲ ಸಾವಿರಾರು ಮಾನವ ಪ್ರತಿಭೆಗಳನ್ನು ಹೊಸಕಿ ಹಾಕಿದ ಮತ್ತು ಅನೇಕರ ಕ್ರಿಯಾಶೀಲತೆ– ಸಾಹಸಗಳನ್ನು ಬಗ್ಗು ಬಡಿದ ಶ್ರೇಯಸ್ಸು ಜಾತಿ ಭೇದಕ್ಕೆ ಸಲ್ಲಬೇಕು. ಒಟ್ಟು ಮನುಷ್ಯ ಚೈತನ್ಯಕ್ಕೆ ಇದರಿಂದ ಗರಹಿಡಿದು ಮನಸ್ಸುಗಳು ಜಡಗೊಂಡಿವೆ. ಭೇದ ಭಾವಗಳ ವಿಷವರ್ತುಲದಿಂದಾಗಿ ಮನುಷ್ಯನ ಸಹಬಾಳ್ವೆಯ ಅಪನಂಬಿಕೆ ಪಿತೂರಿಗಳಿಗೆ ಈಡಾಗಿದೆ. ಸಂಪನ್ಮೂಲಗಳ ಹಂಚಿಕೆ ಅಸಮರ್ಪಕವಾಗಿ ಅಮಾಯಕರ ಕನಸುಗಳು ನಲುಗಿ ಹೋಗಿವೆ. ಹಾಗಾಗಿ "ಭಾರತೀಯರು ಜಗತ್ತಿನಲ್ಲಿಯೇ ಅತ್ಯಂತ ಹತಶರಾದ ಜನ. ಹಾಗಾಗಲು ಕಾರಣ ಅವರು ಕಡು ಬಡವರಷ್ಟೆ ಅಲ್ಲ.. .. ಅಲ್ಲ__.. .. .. ತುಂಬಾ ರೋಗಪೀಡಿತರು .. .. .. .. .. ಚೇತನದ ಈ ಅಧೋಗತಿಗೆ ಜಾತಿ, ಸ್ತ್ರೀಯರ ಕುರಿತ ಭೇದ ಭಾವವೇ ಮೂಲ ಕಾರಣವಾಗಿದೆ ಎಂದು ಲೋಹಿಯಾ ಅವರು ನುಡಿದಿರುವುದು ಸರಿಯಾಗಿಯೇ ಇದೆ.

ಸರಿ ಸುಮಾರಾಗಿ ಒಂದು ಸಾವಿರ ವರ್ಷಗಳ ಹಿಂದೆ ಕರ್ನಾಟಕವು ಇಂತಹ ಜಾತಿ ಭೇದದಲ್ಲಿ ಮುಳುಗಿ ಹೋಗಿತ್ತು. ಧರ್ಮ ಎಲ್ಲಕ್ಕೂ ಪ್ರಭಾವಿಯಾಗಿತ್ತು; ರಾಜಪ್ರಭುತ್ವವೂ ಅದರೆದುರು ತಲೆಬಾಗುತ್ತಿತ್ತು. ಎಂಬುದು ಚಾಲುಕ್ಯ ಅರಸರು ಒಳ್ಳೆಯ ಆಡಳಿತ ನೀಡಿದರೂ, ಅಗ್ರಹಾರಗಳ ಪ್ರಾಬಲ್ಯದಿಂದಾಗಿ ಒಳಗೊಳಗೆ ಸಾಮಾಜಿಕ ವಿಷಮತೆ ತುಂಬಿಕೊಂಡಿತ್ತು. ಚಾಲುಕ್ಯರ ಆ ವೈಭವದಲ್ಲಿಯೇ ಮುಂದೆ ಕಾಣಿಸಿಕೊಂಡ ಪ್ರತಿಭಟನೆಯ ಬೀಜಗಳು ಹುದಗಿದ್ದವು"[೨] ಎಂಬ ಅಭಿಪ್ರಾಯ ಸಾಧಾರವಾಗಿದೆ. ಇದರೊಂದಿಗೆ ಸೇರಿಕೊಂಡಿದ್ದ ಬಲಿಪೂಜೆ, ಯಜ್ಞಯಾಗಗಳ ಭರಾಟೆ, ಶೂದ್ರ–ಶ್ವಪಚ ಚಾಂಡಲರಿಗೆ ನೀಡಿದ ಬಹಿಷ್ಕಾರ, ಅವಮಾನಗಳ ಅಧಿಕ್ಯದಿಂದಾಗಿ ಅಂದಿನ ಸಾಮಾಜಿಕ ಚಿತ್ರಣ ವಿಕಾರಗೊಂಡಿದ್ದಿತು. ಜಾತಿ ಭೇದವನ್ನು ಸೃಷ್ಟಿಸಿದ ಇಂತ ಬಿಕ್ಕಟ್ಟನ್ನು ನಿವಾರಿಸುವುದು ವಚನಕಾರರ ಮೊದಲ ಆದ್ಯತೆಯಾಯಿತು. '೧೨ನೇ ಶತಮಾನದ ಚಳವಳಿ ಕೇವಲ ಧಾರ್ಮಿಕವಲ್ಲ; ಅದು ಸಾಮಾಜೋಧಾರ್ಮಿಕ, ಆರ್ಥಿಕವೂ ಆಗಿತ್ತು. ಎಲ್ಲ ಬಗೆಯ ಅಸಮಾನತೆಗಳನ್ನು, ಭೇದ, ಭಾವಗಳನ್ನು ತೊಲಗಿಸಿ ಎಲ್ಲರೂ ಸಮಾನರು ಎಂಬ ತತ್ವಾಧರಿಸಿ ಮತ್ತು ಯಾರೇ ಆಗಿರಲಿ ದುಡಿದು ಸಂಪಾದಿಸಿದ ಅನ್ನದ ಮೇಲೆ ಬದುಕಬೇಕೆಂಬ ನೀತಿಯಾಧರಿಸಿ ಬಸವಾದಿ ಶರಣರು ಹೊಸ ವ್ಯವಸ್ಥೆಗಾಗಿ ಪ್ರಯತ್ನಪಟ್ಟಿದು. ಇಂತಹ ಸಮಾನತೆಯ ಸಾಮಾಜಿಕ ವ್ಯವಸ್ಥೆಯೊಂದರ ಆರೋಗ್ಯ ಪೂರ್ಣ ಸೃಷ್ಟಿಗಾಗಿ ಅವರೆಲ್ಲರೂ ಬದ್ಧರಾಗಿದ್ದರು. ಭಕ್ತಿ ಮೂಲಕ

ಆಧ್ಯಾತ್ಮಿಕ ಸಾಧನೆ ನಡೆಸಲು ಪ್ರತಿಯೊಬ್ಬನು ಸರ್ವ ಸ್ವತಂತ್ರನಾಗಿದ್ದಾನೆ. ಆದರೆ, ಶರಣರು ಪ್ರತಿಪಾದಿಸುವ ಭಕ್ತಿಯ ಏಳ್ಗೆಯ ದಾರಿಯಲ್ಲ; ಅದು ವ್ಯಾಪಕವಾಗಿ ಸಮಷ್ಠಿಯ ಹಿತ ಸಾಧಿಸುವಂತಹದ್ದು, ಶರಣರು ಈ ಕಾರಣದಿಂದ ಎಲ್ಲ ಅಸಮಾನತೆಗಳ ತಾಯಿ ಬೇರಾದ ಜಾತಿ ಭೇದವನ್ನು ಖಂಡಿಸಿದರು".

ಶಿವಶರಣರು ಅಸಮಾನತೆ ನಿವಾರಣೆಗಾಗಿ ಅಹರ್ನಿಶಿ ದುಡಿದರು. 'ಜಾತಿವಿಡಿದು ಸೂತಕವನರಸುವ' ಮತ್ತು ಇವನಾರವ ಇವನಾರವ ಎಂದು ತಾರತಮ್ಯ ಮಾಡುವವರನ್ನು ಅವರು ಎದುರಿಸಿ ಪ್ರತಿಭಟಿಸಿದರು. ಶೋಷಿತರು, ಕೆಳಸ್ತರದವರು, ದುಡಿಮೆಗಾರರು, ಗೌರವದ ಕಾಯಕ ಜೀವಿಗಳಾಗಿ ಸಹಭೋಜನ, ಸಹಪಂಕ್ತಿಗಳಲ್ಲಿ ಕಾಣಿಸಿಕೊಂಡರು. ಮೊದಲ ಸಲ ಆ ಜನರು ತಮ್ಮ ಚಿಂತನೆ, ಅನುಭವಗಳಿಂದ ನೀತಿ, ತತ್ವ, ಅನುಭಾವ ಕುರಿತು ಅಭಿವ್ಯಕ್ತಿಯ ಮಾಧ್ಯಮ ಕಂಡುಕೊಂಡರು. ಮಾದರರು, ಮೇದಾರರು, ನೇಕಾರರು, ಅಂಬಿಗರು, ಡೋಹಾರರು, ಢಕ್ಕೆಯವರು, ಹಡಪದರು, ನಟರು, ಕೂಲಿಗಳು, ಕಾರ್ಮಿಕರು, ಸ್ವಾಭಿಮಾನದಿಂದ, ಆತ್ಮಗೌರವದಿಂದ ದುಡಿದು ಬದುಕಿದರು. ಆಳವಾಗಿ ಚಿಂತಿಸಿ ನಿತ್ಯ ಸತ್ಯಗಳನ್ನು ನೂತನ ಗೀತಗಳಲ್ಲಿ ಹಾಡಿದರು.

ತಮ್ಮ ಅನ್ನವನ್ನು ತಾವೇ ಸಂಪಾದಿಸುತ್ತ ಅನುಭಾವಗೋಷ್ಠಿ, ಮಾಡುತ್ತ, ವರ್ಗ, ವರ್ಣ, ಲಿಂಗ, ಪ್ರದೇಶ, ಪ್ರತಿಷ್ಠೆ, ಕಾಯಕ, ಭೇದಗಳನ್ನು ಮೀರಿನಿಂತರು; ಅಂತಹ ಭೇದಗಳ ವಿರುದ್ಧ ಧ್ವನಿಯೆತ್ತಿದರು. ಇದು ಸಾಮಾನ್ಯ ಜನರು ಒಂದಾಗಿ, ಜನತೆಯ ಒಳಿತಿಗಾಗಿ ರೂಪಿಸಿದ್ದ ಒಂದು ಸಾಮೂಹಿಕ ಚಳವಳಿಯಾಗಿತ್ತು. ಅನೇಕ, ಸವಾಲು, ಅಡೆತಡೆಗಳ ನಡುವೆಯೂ ತುಂಬ ಶಕ್ತಿಶಾಲಿ ಹೋರಾಟವಾಗಿತ್ತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ನಾಡಿನ ಚರಿತ್ರೆಯಲ್ಲಿ ಇಂತಹ ಒಂದು ಅದ್ಭುತ ಮತ್ತು ಅಪರೂಪದ ಚಳವಳಿ ನಡೆದು ಹೋದ ಮೇಲೆ ಅದರ ಪರಿಣಾಮಗಳು ಕ್ರಿಯೆ, ಪ್ರತಿಕ್ರಿಯೆಗಳು ಬಹುಕಾಲ ಉಳಿಯುತ್ತವೆ. ಇದಕ್ಕೆ ನಿದರ್ಶನ ವೆಂಬಂತೆ, ಬಸವಯುಗದ ಚಳವಳಿಯ ತಾತ್ವಿಕತೆಗೆ ಒಂದು ಪ್ರಬಲ ದನಿಯಾಗಿ, ಕೊರಳಾಗಿ ಬಂದವನು ಹರಿಹರ ಕವಿ.

"ಹರಿಹರನು ಬಸವಯುಗದ ಶಿವಭಕ್ತರ ಚರಿತ್ರೆಗಳನ್ನು ಮಾತ್ರ ತನ್ನ ರಗಳೆಗಳಲ್ಲಿ ಕಟ್ಟಿ ಕೊಡಲಿಲ್ಲ. ಅದರೊಂದಿಗೆ ಆ ಯುಗದ ಆದರ್ಶ ಅಭೀಪ್ಸೆಗಳನ್ನು ತನ್ನ ಕಾಲಕ್ಕೆ ಪ್ರಚುರ ಪಡಿಸಿದನು. ಮುಂದಿನ ಕಾಲಕ್ಕೆ ಅವುಗಳನ್ನು ಗಟ್ಟಿಗೊಳಿಸಿದನು. ಆತ ಕಾವ್ಯ ನಿರ್ಮಿತಿಯಲ್ಲಿ, ಛಂದಸ್ಸು, ನಿರೂಪಣೆಯಲ್ಲಿ, ವಸ್ತು ವಿಷಯಗಳಲ್ಲಿ ಹೊಸ ದಿಕ್ಕು, ಹೊಸ ದಾರಿ ತೋರಿ ಕನ್ನಡ ಸಾಹಿತ್ಯದ ಸಾಧ್ಯತೆಗಳನ್ನು ವಿಸ್ತರಿಸಿದನು."[೩]

ಹರಿಹರನ ರಗಳೆಗಳಲ್ಲಿ ಮೊಟ್ಟ ಮೊದಲ ಸಲ ಭಕ್ತರ ಚರಿತ್ರೆಗಳು ಕಾವ್ಯ ಶಿಲ್ಪದ ಗದ್ದುಗೆ ಏರಿ ವಿರಾಜಿಸಿದವು. ಹಾಗಾಗಿ ಜನಸಾಮಾನ್ಯರಲ್ಲಿ ಸಾಮಾನ್ಯರಾದವರು ನಗಣ್ಯರಾದವರು. ಕಾವ್ಯನಾಯಕರಾದುದು ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಅಭೂತ ಪೂರ್ವ. ಆ ಸಾಮಾನ್ಯರೆಲ್ಲ ಕೆಳಸ್ತರದಿಂದ ಅಲಕ್ಷಿತ ವರ್ಗಗಳಿಂದ ಬಂದವರು; ಅದರಲ್ಲಿ ಕೆಲವರಂತೂ ತುಂಬ ದೀನರು, ದರಿದ್ರರು ತಮಿಳು ಭಕ್ತರ ಕಥೆಗಳನ್ನು ಕಂಡರೆ, ಒಂದೆಡೆ ಸೇದಿರಾಜ, ಚೇರಮ ನಾಯನಾರ, ವರಕೃತಾಂತ, ಕೊಲ್ಪುಲಿಯಾಂಡರಂತಹ ರಾಜನು ಸೇನಾಧಿಪತಿಗಳಿದ್ದಾರೆ. ಇನ್ನೊಂದೆಡೆಗೆ ಅವರಿಗೆ ಸರಿಸಮಾನವಾಗಿ ರೈತನಾದ ಇಳೆಯಾಂಡ ಗುಡಿಮಾರ, ಕೃಷಿ ಕೂಲಿ ಅರಿವಾಳ್ತಾಂಡ, ಮೀನುಗಾರ ಅತಿಭಕ್ತ, ನೇಯ್ಗೆಯ ನೇಶನ್ನೈನಾರರು ಬರುತ್ತಾರೆ.

ಆದರೆ, ಇವರೆಲ್ಲ ಕವಿಗೆ ರಾಜರಾಗಿ, ಸಾಧಾರಣ ವ್ಯಕ್ತಿಗಳಾಗಿ ಕವಿಗೆ ಮುಖ್ಯರಲ್ಲ. ಅವರೆಲ್ಲ ಶಿವನ ಭಕ್ತರೆಂದು ಪ್ರಮುಖರು ಅಂದಿನ ದಿನಗಳಲ್ಲಿ ಈ ಜನರೆಲ್ಲರೂ ಅಪ್ರತಿಷ್ಠಿತರು, ಅಲಕ್ಷಿತರು ಹರಿಹರನ ಕವಿ ಅವರ ಕಾಯಕಗಳನ್ನು ಗೌರವಿಸಿ, ಅವರ ಭಕ್ತಿ ಶೀಲ ಚಾರಿತ್ರ್ಯಗಳನ್ನು ಎತ್ತಿಹಿಡಿದಿದ್ದಾನೆ. ರೂಢಿಗತ ಮೌಲ್ಯಗಳಿಗೆ ಭಿನ್ನವಾದ ಹೊಸ ಮೌಲ್ಯಗಳನ್ನು ಕಟ್ಟಿಕೊಟ್ಟಿದ್ದಾನೆ. ಇದರೊಂದಿಗೆ ಗಮನಿಸಬೇಕಾದ ಬಹುಮುಖ್ಯ ಸಂಗತಿ ಎಂದರೆ ದ್ರಾವಿಡ ಜೀವನ ಶೈಲಿ, ಸಂಸ್ಕೃತಿಯನ್ನು ಎತ್ತಿಹಿಡಿಯುವ ಮೊದಲ ಕವಿ ಹರಿಹರನೆಂಬುದು ರಾಮಾಯಣ, ಮಹಾಭಾರತಗಳನ್ನು ಹಾಗೂ ಶಿವಭಕ್ತರ ಕಥೆಗಳನ್ನು ನಿರಾಕರಿಸಿ ಶಿವಭಕ್ತರ ಕಥೆಗಳನ್ನು ಸೃಷ್ಟಿಸಿದ್ದು, ಈ ದೃಷ್ಟಿಯಿಂದಾಗಿಯೇ ರಗಳೆಗಳಲ್ಲಿಯ ಜೀವನ ವಿವರಗಳ ಸಂಘರ್ಷದ ನೋಟಗಳು ದ್ರಾವಿಡ ಬದುಕನ್ನು ಚಿತ್ರಿಸುವಂತಿವೆ.

ಪೂಜೆ, ಆರಾಧನೆ, ವಿಧಿ-ವಿಧಾನಗಳಲೆಲ್ಲ ಪರಂಪರಾಗತ ರೂಢಿಗೆ ಭಿನ್ನವಾಗಿ ಭಕ್ತರು ನಡೆದುದೇ ದಾರಿಯಾಗುತ್ತದೆ. ರಗಳೆಗಳಲ್ಲಿ ಬರುವ ಭಕ್ತಿಯೂ ಶಾಸ್ತ್ರೋಕ್ತವಾದುದಲ್ಲ. ಅಲ್ಲಿಯ ಪೂಜೆ, ಆಗಮಗಳು ವಿಧಿಸಿದುದಲ್ಲ. ಆದು ನಿಸರ್ಗ ಸಹಜವಾದುದು ಮತ್ತು ಅಂತರಂಗದಿಂದ ಮುಕ್ತವಾಗಿ ಬರುವಂತಹದು. ವೈದಿಕ ಮೌಲ್ಯಗಳಿಗೆ ಪ್ರತಿಮೌಲ್ಯಗಳೆನ್ನೆಲ್ಲ ರೂಪಿಸಲಾಗಿದೆ. ತಮಿಳು ಭಕ್ತರ, ಕನ್ನಡ ನಾಡಿನ ರಗಳೆ ಮತ್ತು ಇತರ ರಗಳೆಗಳಲ್ಲಿ ಎದ್ದು ಕಾಣುವ ಆದರ್ಶ ಮತ್ತು ದರ್ಶನಗಳು ಕಾಲಾತೀತವಾಗಿ ನಿಲ್ಲಬಲ್ಲವು. ಅದರಲ್ಲಿಯೂ ಅಸಮಾನತೆ ಮತ್ತು ಶೋಷಣೆಗಳಿಗೆ ಕಾರಣವಾಗುವ ಮನುಷ್ಯ ನಿರ್ಮಿತ ಮೂರು ಭೇದಗಳನ್ನು ಹರಿಹರ ಕವಿ ಪ್ರಶ್ನಿಸುವ, ನಿರಾಕರಿಸುವ, ಮೆಟ್ಟಿ ನಿಲ್ಲುವ ಧೈರ್ಯ ಧೋರಣೆಗಳನ್ನು ತಾಳುವುದು ತುಂಬ ಮಹತ್ವದ್ದಾಗಿದೆ.

೧). ವರ್ಗಭೇದ.

೨). ವರ್ಣಭೇದ (ಜಾತಿಭೇದ)

೩). ಲಿಂಗಭೇದ,

ಹರಿಹರನ ಹಲವು ರಗಳೆಗಳಲ್ಲಿ ಭೇದ ನಿರಸನವು ದೊಡ್ಡ ಹೋರಾಟವಾಗಿ ತುಂಬಿಕೊಂಡಿದೆ. ಹಾಗಾಗಿ ಹರಿಹರ ಕವಿ ಮಾತನಾಡ ತೊಡಗಿದರೆ ಅಲ್ಲಿ ಸ್ಥೂಲವಾಗಿ ದಕ್ಷಿಣ ಭಾರತೀಯ ಭಕ್ತಿ ಪಂಥದ ಒಳಸತ್ವ ಎದ್ದು ನಿಲ್ಲುತ್ತದೆ. ಹೆಜ್ಜೆ ಹೆಜ್ಜೆಗೆ ಬಸವಾದಿ ಶಿವಶರಣರ ಮೌಲ್ಯಗಳು ಎದ್ದು ನಡೆಯುತ್ತವೆ. ಹೀಗೆ ಪುರಾತನ ಶರಣರ ಚರಿತ್ರೆಗಳನ್ನು ಕಾವ್ಯಗೊಳಿಸುವುದೆಂದರೆ ಅವರ ಮೌಲ್ಯಗಳನ್ನು ಕಾವ್ಯಗೊಳಿಸುವುದಾಗಿದೆ. ಈ ಕೆಲಸವನ್ನು ಸಾಧಿಸುವುದಕ್ಕಾಗಿ ಹರಿಹರ ವಚನ ಮೌಲ್ಯಗಳಾದ ವರ್ಗ, ವರ್ಣಭೇದ, ಲಿಂಗಭೇದ ನಿರಾಕರಣೆಗಳಿಗೆ ತನ್ನ ಕೃತಿಗಳನ್ನು ನೆಲೆಯಾಗಿಸಿದನು. ವೈದಿಕರ ಈ ಭೇದ ಮೌಲ್ಯಗಳನ್ನು ಕೆಡಹುವ ರೀತಿ, ಶರಣರ ಅಭೇದ ಮೌಲ್ಯಗಳನ್ನು ಕಟ್ಟುವ ಬಗೆ ರಗಳೆಗಳಲ್ಲಿ ಅನನ್ಯ ರೀತಿಯಲ್ಲಿ ಮೂಡಿದೆ."[೪] ಎಂಬ ಡಾ.ಎಂ.ಎಂ. ಕಲಬುರ್ಗಿಯವರ ಹೇಳಿಕೆ ಹರಿಹರನ ರಗಳೆಗಳಿಗೆ ಚೆನ್ನಾಗಿ ಅನ್ವಯವಾಗುತ್ತದೆ.

ಹರಿಹರನ ರಗಳೆಗಳಲ್ಲಿಯ ಈ ಬಗೆಯ ಸಂಘರ್ಷವನ್ನು ಗುರುತಿಸುವುದೆಂದರೆ ನಮ್ಮ ಚರಿತ್ರೆಯ ಸರಿಯಾದ ಗ್ರಹಿಕೆಗೆ ಒಂದು ದಾರಿಯನ್ನು ಗುರುತಿಸಿದಂತೆಯೇ ಆಗುತ್ತದೆ. ಇದು ಸಾಹಿತ್ಯಕವಾಗಿ ಮಾತ್ರವಲ್ಲ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿಯೂ ಮಹತ್ವವಾದುದಾಗಿದೆ. ಮಹಾಕವಿಯೊಬ್ಬ ಜಾತಿ ವ್ಯವಸ್ಥೆಯ ಉಕ್ಕಿನ ಹಿಡಿತದ ದಿನಗಳಲ್ಲಿ ಪುರೋಹಿತ ಶಾಹಿಯ ಅನುಕೂಲ ಸಿಂಧೂ ಧರ್ಮಾಚರಣೆಯ ಸಮಯದಲ್ಲಿ, ಅದಕ್ಕೆ ಪ್ರತಿ ಏಟು ನೀಡುವ ಹಾಗೆ ಸೃಷ್ಟಿಸಿದ ಈ ರಗಳೆಗಳು ಅತ್ಯಂತ ಸಾಂಕೇತಿಕವಾಗಿದ್ದು, ಸಂಘರ್ಷದ ಅಮೂಲ್ಯ ದಾಖಲೆಗಳೆನಿಸುತ್ತವೆ ಎಂದು ಹೇಳಬಹುದು.

"ವಚನಗಳಲ್ಲಿ ನಾಲ್ಕು ವರ್ಣ ಮತ್ತು ಹದಿನೆಂಟು ಜಾತಿಗಳ ಉಲ್ಲೇಖವಿದೆ. ಶಿವಶರಣರು ವರ್ಣವನ್ನು ಒಪ್ಪುವುದಿಲ್ಲ, ಜಾತಿಗಳನ್ನು ವೃತ್ತಿ ಅರ್ಥದಲ್ಲಿ ಒಪ್ಪುತ್ತಾರೆ. ಋಗ್ವೇದದ ಪುರುಷ ಸೂಕ್ತದಲ್ಲಿ ಹೇಳಿದಂತೆ ವಚನಕಾರರು ಜಾತಿಗಳನ್ನು (ಸಮಾಜ) ಪುರುಷನ ನಾನಾ ಅಂಗಗಳೆಂಬಂತೆ ಚಿತ್ರಿಸಿರುವ ಸ್ವಾರಸ್ಯದ ಬಗ್ಗೆ ಗಮನಿಸಬೇಕು. ಸೊಡ್ಡಳಿ ಬಾಚರಸನು ಒಂದು ವಚನದಲ್ಲಿ ಹೀಗೆ ಹೇಳುತ್ತಾನೆ "" ಶಿವ ಬ್ರಾಹ್ಮಣ, ನಯನ ಕ್ಷತ್ರಿಯ, ನಾಸಿಕ ಬಣಜಿಗ, ಅಧರ ಒಕ್ಕಲಿಗ, ಕರ್ಣಗೊಲ್ಲ,

ಕೊರಳು ಕುಂಬಾರ, ಬಾಹು ಪಂಚಾಳ, ಅಂಗೈ ಉಪ್ಪಾರ, ನಖನಾಯಿದ, ಒಡಲು ಡೊಂಬ, ಬೆನ್ನು ಅಗಸ, ಚರ್ಮ ಜಾಡ, ಪ್ರಷ್ಠಸ್ಥಾನ, ಕಬ್ಬಲಿಗ, ಒಳದೊಡೆ ಹೊಲೆಯ, ಮೊಳಕಾಲು ಈಡಿಗ, ಕಣಕಾಲು ಸಮ್ಮಗಾರ, ಮೇಗಾಲು ಮಚ್ಚಿಗ, ಚಲಪಾದವೆಂಬ ಅಂಗಾಲು ಶುದ್ಧಮಾದಿಗ ಕಾಣಿರೋ"[೬] ವಚನಕಾರರ ಕಾಲದಲ್ಲಿ ಎದ್ದು ಕಾಣುವ ಈ ಹದಿನೆಂಟು ಜಾತಿಗಳು ವೃತ್ತಿಯ ಹಿನ್ನೆಲೆಯಲ್ಲಿ ಸೂಚಿತವಾಗಿವೆ. ಜತೆಗೆ ಪುರುಷ ಸೂಕ್ತಕ್ಕೆ ಪ್ರತಿಭಟನೆಯೆಂಬಂತೆ ಬಾಚರಸನು ಈ ವಚನ ನೀಡಿದ್ದಾನೆ. ಈಗಲೂ ಕೂಡ ವೀರಶೈವ ಪರಂಪರೆಯಲ್ಲಿ ಹೊಲೆಯ ಹದಿನೆಂಟು ಜಾತಿಗಳು ಎಂಬ ಮಾತು ರೂಢಿಯಲ್ಲಿದೆ. ಈ ಹದಿನೆಂಟು ಜಾತಿಗಳು ವೃತ್ತಿಯ ಹಿನ್ನೆಲೆಯಲ್ಲಿ ಸೂಚಿತವಾಗಿವೆ. ಜತೆಗೆ ಪುರುಷ ಸೂಕ್ತಕ್ಕೆ ಪ್ರತಿಭಟನೆಯೆಂಬಂತೆ ಬಾಚರಸನು ಈ ವಚನ ನೀಡಿದ್ದಾನೆ. ಈಗಲೂ ಕೂಡ ವೀರಶೈವ ಪರಂಪರೆಯಲ್ಲಿ ಹೊಲೆಯ ಹದಿನೆಂಟು ಜಾತಿಗಳು ಎಂಬ ಮಾತು ರೂಢಿಯಲ್ಲಿದೆ. ಈ ಹದಿನೆಂಟು ವೃತ್ತಿಗಳ ಜನಸಮುದಾಯವನ್ನು ವಚನಕಾರರು ಭಕ್ತ-ಭವಿ ಎಂದು ಎರಡು ಗುಂಪುಗಳಾಗಿ ವರ್ಗೀಕರಿಸುತ್ತಾರೆ. ವೈಯಕ್ತಿಕವಾಗಿ ಲಿಂಗಸ್ವರೂಪಿಯೂ, ಸಾಮಾಜಿಕವಾಗಿ ವರ್ಣ, ವರ್ಗ ತಾರತಮ್ಯಗಳನ್ನು ನಿರಾಕರಿಸುವವನೂ ಭಕ್ತ; ಇದಕ್ಕೆ ವಿರೋಧಿಯಾದವನು ಭವಿ ಎಂಬ ನಿಲುವನ್ನು ವಚನಗಳಲ್ಲಿ ಕಾಣಬಹುದು.

"ಹರಿಹರನ ನಿಲುವು ಇದೇ ಆಗಿದೆ. ವರ್ಣ ವ್ಯವಸ್ಥೆ ಹರಿಹರನ ಕಾಲಾವಧಿಯಲ್ಲಿಯೂ ಜೀವಂತವಿತ್ತು. ವೈಷ್ಣವರು, ವಿಪ್ರರು, ಛಂದರಸರು, ವೇದಾಧ್ಯಯನಿಗಳು ಎಂಬ ಹೆಸರಿನಿಂದ ಬ್ರಾಹ್ಮಣ ವರ್ಣವ್ಯವಸ್ಥೆ ಗಟ್ಟಿಗೊಂಡಿತ್ತು. ವೇದಶಾಸ್ತ್ರ, ಪುರಾಣ. ಆಗಮ ಯಜ್ಞ ವಿಧಿಯಿಂದ ನಡೆಯುವವರು ಬ್ರಾಹ್ಮಣರೆಂದೂ ಇದಕ್ಕೆ ವಿರೋಧವಾದವರೆಲ್ಲ ವರ್ಣವ್ಯವಸ್ಥೆಯನ್ನು ಪಲ್ಲಟಿಸುವವರೆಂದೂ ಅರಸುಸಹಿತ ಬ್ರಾಹ್ಮಣ ವರ್ಗ ಬಲವಾಗಿ ನಂಬುತ್ತಿತ್ತು."[೭] ಮತ್ತು ಅದನ್ನು ಉಳಿಸಿಕೊಳ್ಳಲು ಹೆಣಗುತ್ತಿತ್ತು. ಈ ಬ್ರಾಹ್ಮಣ ಸಾಮಾಜಿಕ ವ್ಯವಸ್ಥೆಯನ್ನು ಟೀಕಿಸುವವರು ಪ್ರಗತಿಪರ ಶಿವಭಕ್ತರಾಗಿದ್ದರು. ಟೀಕೆಗೊಳಗಾಗುವವರು. ಭವಿಗಳಾಗಿದ್ದರು. ಆದರೆ, ಗೆಲುವು ಮಾತ್ರ ಪೂರ್ಣ ವ್ಯವಸ್ಥೆಯ ಪೋಷಕರದೇ ಆಗಿರುತ್ತಿತ್ತು. ವ್ಯಾಪಾರ ವಿನಿಮಯದ ವೈಶ್ಯವರ್ಗದ ಮಾಹಿತಿ ರಗಳೆಗಳಲ್ಲಿ ಇಲ್ಲ. ಬ್ರಾಹ್ಮಣ ಶೂದ್ರ ಸಂಘರ್ಷದಲ್ಲಿ ಕ್ಷತ್ರಿಯರ ಸಂಧಾನ, ನ್ಯಾಯದಾನ ನಡೆಸುತ್ತಿದ್ದರೂ ಅವರು ಕೊನೆಗೆ ಬ್ರಾಹ್ಮಣಪರ ಏಕಮುಖಿ ನಿರ್ಣಯ ಕೈಗೊಳ್ಳುತ್ತಿದ್ದರು.

ಕೆಂಭಾವಿ ಭೋಗಣ್ಣನ ರಗಳೆಯ ಚಂದಿಮರಸು, ಬಸವೇಶ್ವರ ದೇವರ ರಗಳೆಯ ಬಿಜ್ಜಳ, ಪೆರ್ಮಾಡಿರಾಯ ಅರಸು ಇಂಥವರು ಉದಾಹರಣೆಯಾಗಿದ್ದಾರೆ. ರಾಜ್ಯಭಾರ ಮಾಡುವ ಕ್ಷತ್ರಿಯರು ಯಾವ ಧರ್ಮಿಯರೂ ಆಗಿರುತ್ತಿದ್ದರು. ಆದರೆ, ಈ ಭುಜಬಲದವರ ಸಲಹೆಗಾರರಾಗಿ, ಮಂತ್ರಿಗಳಾಗಿ

ದೊಡ್ಡ ಸ್ಥಾನದಲ್ಲಿ ಬ್ರಾಹ್ಮಣ ವರ್ಣೀಯರು ಇರುತ್ತಿದ್ದ ಮಾಹಿತಿ ರಗಳೆಗಳಲ್ಲಿ ದೊರೆಯುತ್ತದೆ. "ಬಿಜ್ಜಳನಿಗೆ ಗುರುವಾಗಿ ನಾರಣಕ್ರಮಿತರಿದ್ದರು. ಅವನ ಆಪ್ತ ಸಲಹೆಗಾರರಂತೆ ಕೃಷ್ಣಪೆದ್ದಿ, ವಿಷ್ಣು ಭಟ್ಟ, ಕೇಶವಭಟ್ಟ, ವಿಷ್ಣು ಸೇನಭಟ್ಟ, ಮುರಾರಿಕ್ರಮಿತ, ಸೌರಿಪೆದ್ದಿ, ಮುಕುಂದ ಭಟ್ಟ, ಪದುಮನಾಭಕ್ರಮಿತ, ಗೋವಿಂದ ಪಂಡಿತ (ಘಯಿಸ) ಧರಣೀಂಧರ ಭಟ್ಟ, ವೈಕುಂಠಪೆದ್ದಿ ಮುಂತಾದವರೆಲ್ಲ ವಿಪ್ರಕುಲಜರಾಗಿ ವರ್ಣ ವ್ಯವಸ್ಥೆಯನ್ನು ಕಾಪಾಡುತ್ತಿದ್ದ ಅಂಶ ಬಸವೇಶ್ವರ ದೇವರ ರಗಳೆಯಲ್ಲಿ ಬಂದಿದೆ"[೮]

ಸಂಬೋಳಿ ನಾಗಿದೇವನ ಮನೆಯಲ್ಲಿ ಬಸವಣ್ಣ ಉಂಡನೆಂದು ವೈಷ್ಣವರ ಬೇಹಿನವನು ವಿಪ್ರರಿಗೆ ಅರಹುತ್ತಾನೆ. ಬಸವಣ್ಣ ಹೊಲಗೇರಿಗೆ ಹೋಗಿದ್ದೆ ಅಪರಾಧ; ಇನ್ನು ಹೊಲೆಯನ ಮನೆಯಲ್ಲಿಂಡುದು ಮಹಾಪರಾಧ ವೆಂಬಂತೆ ಅವರು ಅರಸನಿಗೆ ಸೂಚಿಸುತ್ತಾರೆ. ಅರಸು ಅವರ ಅಭಿಪ್ರಾಯಕ್ಕೆ ಮಣಿದು ರಾಜಾಂಗಣವು ಅಪವಿತ್ರವಾಗುವುದೆಂದು ಬಯಲು ಒಡ್ಡೋಲಗ ನಡೆಸಿ ಬಸವಣ್ಣನನ್ನು ವಿಚಾರಣೆಗೆ ಕರೆಸುತ್ತಾನೆ. ಶೂದ್ರವರ್ಗವನ್ನು ಶೂದ್ರೇತರರು ಕಾಣುವ ನಿಕೃಷ್ಟತೆಯೊಂದಿಗೆ ಬಸವಣ್ಣನಂಥ ಉನ್ನತ ಕುಲಜನನ್ನು 'ಧರ್ಮದ್ರೋಹಿ' ಅಸ್ಪೃಶ್ಯವೆಂಬಂತೆ ಬ್ರಾಹ್ಮಣ ಕ್ಷತ್ರಿಯ ವರ್ಗವು ಕಾಣುವುದನ್ನು ಇಲ್ಲಿ ಗಮನಿಸಬೇಕು.

ಬ್ರಾಹ್ಮಣ ಸಮುದಾಯವು ನಿಂದೆಯ ಸಂದರ್ಭದಲ್ಲಿ 'ಹೊಲಗೇರಿ' 'ಹೊಲೆಯ' ಹೊಲೆಗಲಸು' ಎಂಬ ಪದಗಳನ್ನು ಅತ್ಯಂತ ಸಹಜವೆಂಬಂತೆ ಬಳಸುತ್ತಿದ್ದರು. ಹರಭಕ್ತರು ಮಾತ್ರ ಹಿರಿಯ ಕೇರಿ, ಹಿರಿಯ ಮಾಹೇಶ್ವರರ ಕೇರಿ ಎಂದು ಅಸ್ಪೃಶ್ಯ ಸಮುದಾಯವನ್ನು ಗೌರವ ಪೂರ್ವಕವಾಗಿ ಕರೆಯುತ್ತಿದ್ದರು. ಮೇಲಿನ ನಾಗಿದೇವನ ಪ್ರಕರಣದಲ್ಲಿ ಬಿಜ್ಜಳ ಅರಸು ಬಸವಣ್ಣನಿಗೆ ವಿಪ್ರಕುಲಕ್ಕೆ ಅನುಕೂಲವಪ್ಪ ಶಿವಭಕ್ತಿ ಇರುವಾಗ, ವಿಪ್ರರು ಬಹಿಷ್ಕರಿಸುವ ಹೊಲೆಯರ ಸಂಘ ನಿನಗೇಕೆ"?[೯] ಎನ್ನುತ್ತಾನೆ. ಇದರಿಂದ ಅಂದು ಶಿವಸಮಯವನ್ನಚರಿಸಿಯೂ ವಿಪ್ರರಂತೆ ಬದುಕಬಹುದಾಗಿತ್ತು. ವರ್ಣ ವ್ಯವಸ್ಥೆಯನ್ನು ಶಿವಭಕ್ತರೂ ಪೋಷಿಸಬಹುದಿತ್ತು. ಅಂದರೆ ಹಿಂದಿನಿಂದ ಬೆಳೆದುಕೊಂಡು ಬಂದ ವೃತ್ತಿಗಳನ್ನು, ವೃತ್ತಿ ಹಿನ್ನೆಲೆಯಲ್ಲಿರುವ ಸಾಮಾಜಿಕ ತಾರತಮ್ಯಗಳನ್ನು ಒಂದಿಷ್ಟು ಬದಲಿಸದೆ ಕಾಪಾಡಿಕೊಂಡು ಬರುವುದೇ ಆ ಮಾತಿನಲ್ಲಡಗಿದ ಧ್ವನಿಯಾಗಿದೆ. ಇದುವೇ ವರ್ಣ ವ್ಯವಸ್ಥೆಯ ಜಾಯಮಾನ. ಕೆಂಭಾವಿ ಭೋಗಣ್ಣನ ಮನೆಯಲ್ಲಿ ಅಸ್ಪೃಶ್ಯನು ಪೂಜೆ, ಅರೋಗಣೆ ಮಾಡಿದನೆಂದು ಚಂದಿಮರಸನು ಭೋಗಣ್ಣನಿಗೆ ಬಹಿಷ್ಕಾರದ ಆದೇಶ ನೀಡುವುದನ್ನು ನೋಡಬೇಕು."[೧೦] ಬಸವಣ್ಣನು ಹೊಲೆಯರ ಮನೆಯಲ್ಲಿ ಊಟ ಮಾಡುವಷ್ಟು, ಬೋಗಣ್ಣನ ಮನೆಯಲ್ಲಿ ಹೊಲೆಯನು ಊಟ ಮಾಡುವಷ್ಟು ತೋರಿದ ಇವರೆಲ್ಲರ ಸಾಮರ್ಥ್ಯವೇ ಸಾಮರ್ಥ್ಯ;

ಮತ್ತು ಓಲಗ ನಡೆಸಿ ಬಸವಣ್ಣನನ್ನು ಅಪಮಾನಿಸುವಾಗ, ಭೋಗಣ್ಣನನ್ನು ಊರು ಬಿಟ್ಟು ಕಳಿಸುವಾಗ ಅವರು ತೋರಿದ ಸ್ಥೈರ್ಯ ಕೂಡ ಆದರ್ಶನೀಯ, ಇಂತಹ ತಾಕತ್ತು, ದೃಢ ಚಿತ್ತವಿದ್ದುದರಿಂದಲೇ ವರ್ಣ ವ್ಯವಸ್ಥೆಯನ್ನು ಎದುರು ಹಾಕಿಕೊಳ್ಳಲು ಸಾಧ್ಯವಾದುದು. ಸಾಮಾನ್ಯವಾಗಿ ಭೋಜನ, ವಿವಾಹವಾದಿ ಸಂದರ್ಭಗಳಲ್ಲಿ ಉನ್ನತ ವರ್ಣೀಯರ ಸಂದರ್ಭದಲ್ಲಿ ಈ ವರ್ಣ ವ್ಯವಸ್ಥೆಯು ವಿಶೇಷ ಪಾತ್ರವಹಿಸಿತ್ತು. ಸಾಮಾನ್ಯ ಜನರಿಗೆ ಭೋಜನ ಮತ್ತು ವಿವಾಹದಿಗಳ ವಿಷಯದಲ್ಲಿ ಮೇಲಿನ ಕಟ್ಟುನಿಟ್ಟು ನಿಯಮಗಳು ಅನ್ವಯವಾಗುತ್ತಿರಲಿಲ್ಲ ಎಂಬುದನ್ನು ವೈಜಕವ್ವೆಯ ರಗಳೆ, ಮಹಾದೇವಿ ರಗಳೆ ಸೂಚಿಸುತ್ತವೆ. ಹೀಗೆ ವರ್ಣ ವ್ಯವಸ್ಥೆಯ ಪೋಷಕರಾದ ಬ್ರಾಹ್ಮಣ, ಕ್ಷತ್ರಿಯ ವರ್ಗವನ್ನು ಭವಿಗಳೆಂದು ಅವುಗಳಿಗೆ ವಿರೋಧ ಒಡ್ಡುವವರನ್ನು ಭಕ್ತರೆಂದು ಪರಿಗಣಿಸುವ ಮಾಹಿತಿ ಹರಿಹರನ ರಗಳೆಗಳಲ್ಲಿ ದೊರೆಯುತ್ತದೆ.

**ಜಾತಿ**

ವಿವಾಹ ಮತ್ತು ಭೋಜನ ಇಬ್ಬರು ವ್ಯಕ್ತಿಗಳ ಆತ್ಮೀಯ ಸಂಬಂಧಕ್ಕೆ ಮುಖ್ಯವಾದವು. ಜಾತಿಗಳು ಜೀವಂತವಾಗಿರಲು ಈ ಎರಡು ಅಂಶಗಳೇ ಪ್ರಮುಖ ಕಾರಣ, ಹರಿಹರನಲ್ಲಿ ಜಾತಿ ಸೂಚನೆಗಳು ಹೆಚ್ಚಾಗಿ ದೊರೆಯುವುದಿಲ್ಲ. ಜಾತಿಪದಕ್ಕೆ ಸಂಚಾರಿ ಎಂಬಂತೆ ಶೂಲ ಮತ್ತು ಗೋತ್ರ ಪದಗಳು ಹೆಚ್ಚಾಗಿ ಕೇಳಿಬರುತ್ತಿವೆ".[೧೧] ಸ್ವ–ಜಾತಿಗಳಲ್ಲಿ ಜಾತಿ–ಉಪಜಾತಿಗಳಲ್ಲಿ (ಜಾತಿ=ಕುಲ, ಗೋತ್ರ) ಅಂತರ ಜಾತಿಗಳಲ್ಲಿ ಮದುವೆ ಜರುಗಿದ ಉಲ್ಲೇಖಗಳು ರಗಳೆಗಳಲ್ಲಿವೆ. ಜೈನಮತ, ಶಿವಮತಸ್ಥ, ಕುಟುಂಬಗಳ ಮಧ್ಯೆ ವಿವಾಹ ಸಂಬಂಧಗಳು ಹರಿಹರನ ಕಾಲದಲ್ಲಿ ಪ್ರಚಲಿವಿದ್ದುದು ಕಂಡು ಬರುತ್ತದೆ. ಬಹುಶಃ ವಚನಕಾರರ ಪ್ರಭಾವಕ್ಕೊಳಗಾಗಿ ಶಿವಭಕ್ತರಾದ ಕೆಲವರು ಪರಿವರ್ತಿತರಾಗಿರದ ತಮ್ಮ ಸಂಬಂಧಿಗಳೊಡನೆ ರಕ್ತಸಂಬಂಧ ಉಳಿಸುವುದಕ್ಕಾಗಿ ಇಂಥ ಮದುವೆ ಮಾಡಿಕೊಳ್ಳುತ್ತಿರಬಹುದು ಅಥವಾ ಶಿವಭಕ್ತನಾದ(ಳಾದ) ಕುಟುಂಬ ಸದಸ್ಯನನ್ನು ಬಿಟ್ಟು ಕೊಡಬಾರದೆಂದು ಸ್ವಜಾತಿಯಲ್ಲಿ ಒತ್ತಾಯದಿಂದ ಮದುವೆ ಮಾಡುತ್ತಿರಬಹುದು.

ಬಿದಿರ ಕಾಯಕದ, ಎಣ್ಣೆಕಾಯಕದ, ಬೇಟೆಕಾಯಕದ, ಚಿನ್ನಕಾಯಕದಂತಹ ವೃತ್ತಿ ಸೂಚಿಸುವಾಗ ಅವು ಜಾತಿ ಎಂಬಂತೆ ನಾವು ಭಾವಿಸುತ್ತೇವೆಯೋ ಹೊರತು ಹರಿಹರ ಅಂತ ಸೂಚನೆ ಮಾಡುವುದಿಲ್ಲ".[೧೨] ವಿಪ್ರಕುಲ, ಶರಣಕುಲ, ಗಣಕುಲ, ಕಮ್ಮೆಕುಲ"[೧೩] ಎಂಬ ಶಬ್ದ ಬಳಕೆ ನೋಡಿದರೆ ವಂಶ, ಜಾತಿ, ಜನಾಂಗ, ಧರ್ಮ, ಭಕ್ತ ಸಮೂಹ, ಸೂಚಕವಾಗಿ ಕುಲ (GROVP) ಎಂಬ ಪದ ಬಳಕೆಯಾಗಿದೆಯೆನಿಸುತ್ತದೆ. ಇಲ್ಲಿ ಶಿವಭಕ್ತ ಸಮುದಾಯದ ವೃತ್ತಿಗಳನ್ನು

ಜಾತಿ ಹಿನ್ನೆಲೆಯಲ್ಲಿ ಕರೆಯದೆ 'ಕಾಯಕ' ಎಂಬ ವಚನಕಾರರ ಪದದ ಮೂಲಕ ಹರಿಹರ ಅಭಿವ್ಯಕ್ತಿಸುವುದನ್ನು ಗಮನಿಸಬೇಕು.

## ಲಿಂಗಧಾರಿ ಹೊಲೆಯರು

ಪ್ರಾಚೀನ ಕಾಲದಿಂದಲೂ ಶೂದ್ರರೆಂದು ಪರಿಗಣಿಸಲ್ಪಟ್ಟವರನ್ನು ಹೊಲೆಯರೆಂದು ಹರಿಹರನ ಕಾಲದಲ್ಲೂ ಕರೆಯಲಾಗುತಿತ್ತು. ಹೊಲೆಯ, ಹೊಲೆಗೆಡಿಸುವುದು ಇವು ಬೈಗುಳ ರೂಪವಾಗಿ, ಜಾತಿಸೂಚಕವಾಗಿ, ಅಪವಿತ್ರದ ನಂಬುಗೆಯಾಗಿ ಪ್ರಚಲಿತದಲ್ಲಿದ್ದವು"[೧೪] ೧೨ನೇ ಶತಮಾನದಲ್ಲಿ ಹೊಲೆಯರು ಲಿಂಗಧಾರಿಗಳಾಗುವ ಮೂಲಕ ಸಾಮಾಜಿಕ ಸ್ಥಾನಮಾನವನ್ನು ತಡೆಯುತ್ತಿದ್ದರು. ಆದರೆ, ಕೆಲವೊಮ್ಮೆ ವೃತ್ತಿ ಮುನ್ನಿನಂತೆಯೇ ಇರುತ್ತಿತ್ತು. ಹರಿಹರನು "ಜಾತಿ ಮಾದರ ಚನ್ನನೆಂಬ ನಾಮ.. .. .. .. .. ." ವೆನ್ನುತ್ತ ಮಾದರ ಚನ್ನಯ್ಯನ ಪರಿಚಯ ಮಾಡುವುದಕ್ಕಾಗಿ ಹರಿಹರ ಉದ್ದೇಶ ಪೂರ್ವಕವಾಗಿಯೇ ಚನ್ನಯ್ಯನ ಜಾತಿಯನ್ನು ಸೂಚಿಸಿದ್ದಾನೆ.

ಕೆಲಸಲ ಹುಟ್ಟಿನಿಂದಾಗುವ ಅಪಮಾನ, ಶರಣದೀಕ್ಷೆಯಿಂದ ಕಡಿಮೆಯಾಗಿದ್ದರೂ ಉನ್ನತ ವರ್ಣೀಯರ ನಿಂದನೆಯ ರೂಢಿಯಿಂದಾಗಿ ಅಂತ್ಯಜರಿಗೆ ಜಾತಿಸೂಚಿ ಮಾತುಗಳ ಬಳಕೆ ಕಂಡುಬಂದಿದೆ. ಬಸವಾದಿಗಳು ಹೊಲೆಯರನ್ನು ಹಿರಿಯ ಮಾಹೇಶ್ವರರು, ಕಿರಿಯ ಮಾಹೇಶ್ವರರೆಂದು ಕರೆದು ರೂಢಿಗೊಳಿಸಿದುದನ್ನು ಹರಿಹರನ ಕಾಲದಲ್ಲೂ ಕಾಣುತ್ತೇವೆ."[೧೫] (ಗಾಂಧೀಜಿ ಹರಿಜನ ಪದ ರೂಢಿಗೊಳಿಸಿದಂತೆ) ಮಡಿ ಮೈಲಿಗೆಯಿಂದಾಗಿ ಊರ ಹೊರಗೆ ವಾಸಿಸುವ ಸ್ಥಿತಿ ಅವರದ್ದಾದ್ದರಿಂದ ಊರಂಚಿನಲ್ಲಿ, ಊರಿನಿಂದ ತುಸುದೂರದಲ್ಲಿ, ಬಹಿಷ್ಕೃತ ಜನಾಂಗವಾಗಿ ಹೊಲೆಯರಿರುತ್ತಿದ್ದರು. ಅವರಿರುವ ಸ್ಥಳವನ್ನು ಊರಿನ ಒಂದು ಭಾಗವಾಗಿ 'ಹೊಲಗೇರಿ' ಎಂದು ಶಿವಭಕ್ತೇತರರು ಎಂದು ಕರೆದರೆ 'ಹಿರಿಯಕೇರಿ' ಎಂದು ಶಿವಭಕ್ತರು ಕರೆಯುತ್ತಿದ್ದರು."[೧೬] ಎಂಬ ಮಾಹಿತಿ ಇದೆ.

ಕೈಯಲ್ಲಿ ಕೋಲೊಂದನ್ನು ಹಿಡಿದು ದಾರಿಯಲ್ಲಿ ಕುಟ್ಟುತ್ತ ಬರುವ ಮೂಲಕ ತಮ್ಮ ಅಸ್ಪೃಶ್ಯತೆಯನ್ನು ತಾವೇ ಸೂಚಿಸುವ ಪದ್ಧತಿ ಇತ್ತು. ಇದಕ್ಕೆ 'ಸಂಬಳಿಗೋಲು, ಹಿಡಿಗೋಲು, ಕಂಕರಿಗೋಲು ಎನ್ನುತ್ತಿದ್ದರು. ರಾಘವಾಂಕನ ಹರಿಶ್ಚಂದ್ರ ಕಾವ್ಯವು 'ಸಂಬೋಳಿ' ಎಂದು ಕೂಗುತ್ತ ಬೀದಿಯಲ್ಲಿ ಬರುತ್ತಲಿದ್ದ ಅಸ್ಪೃಶ್ಯನ ಮಾಹಿತಿ ಕೊಡುತ್ತದೆ. ಅಸ್ಪೃಶ್ಯನಾದ ತಾನು ಬರುತ್ತಿದ್ದೆನೆಂಬುದರ ಸಂಕೇತವಾಗಿ ಹೀಗೆ ಅಂದು ಕೂಗಲಾಗುತ್ತಿತ್ತು. ಭೋಗಣ್ಣನನ್ನು ಪರೀಕ್ಷಿಸಿಸಲು ಬಂದ ಶಿವ ಪಿರಿಯ ಮಹೇಶ್ವರನಾಗಿ ಹೆಗಲಮಿಳ ಕೈ ಸಂಬಳ (ಕಂಕರಿ) ಗೋಲಿನಿಂದ ಸೊಗಸಾಗಿ ಕಂಡನೆಂದು

ಹರಿಹರ ವರ್ಣಿಸುತ್ತಾನೆ. ಹೊಲೆಯರ ವೇಷವು ಸಮಾಜದಲ್ಲಿ ಸ್ಪಷ್ಟವಾಗಿ ಗುರುತಿಸಲ್ಪಡಬೇಕೆಂಬುದು ಇಲ್ಲಿನ ಉದ್ದೇಶವಾಗಿದೆ. ಹೊಲೆಯರಿಗೆ ಹೆಸರೂ ಕೂಡ ಇರದಂತಹ ಸ್ಥಿತಿಯಿತ್ತು. ಇಂತಹ ಅನಾಮಿಕರನ್ನು ಮನೆಯೊಳಗೆ ಕರೆಯುವುದು ಪಾಪವೆಂಬ ಭೀತಿಯಿತ್ತು."[೧೭] ಬ್ರಾಹ್ಮಣರ ಕರ್ಮಗಳೇ ಶ್ರೇಷ್ಠವಾಗಿದ್ದರಿಂದ ಹೊಲೆಯನನ್ನು ಮನೆಯೊಳಗೆ ಕರೆಯುವಂತಿರಲಿಲ್ಲ. ಹಾಗೆ ಕರೆದದ್ದಾದರೆ ಬ್ರಾಹ್ಮಣರ ಕೋಪಕ್ಕೆ ಗುರಿಯಾಗುತ್ತಿದ್ದರು. ಹೊಲೆಯರು ಗೋಮಾಂಸ ತಿನ್ನುತ್ತಿದ್ದರಿಂದ ಅವರೊಡನೆ ಬಳಕೆ ಮಾಡುವುದು ಕುಲನಾಶವಾದಿತೆಂದು ಬ್ರಾಹ್ಮಣರು ಅರಸನಿಗೆ ಚಾಡಿ ಹೇಳಿದ ಪ್ರಕರಣಗಳು ಕಂಡು ಬರುತ್ತವೆ."[೧೮] ಹೊಲೆಯರನ್ನು ಉತ್ತಮ ಸ್ಥಿತಿಗೆ ತರಬೇಕೆನ್ನುವ ಹಂಬಲ ಶಿವಭಕ್ತರಲ್ಲಿತ್ತು. ಆ ಶಿವಭಕ್ತರ ಪ್ರಗತಿಪರ ವಿಚಾರಗಳನ್ನು ಹತ್ತಿಕ್ಕುವುದಕ್ಕಾಗಿ. ಅರಸನವರೆಗೂ ದೂರು ಹೋಗುವುದು ಅಷ್ಟೇ ಸಹಜವಾಗಿತ್ತು.

ಇದರ ತದ್ವಿರುದ್ಧವಾಗಿ ಹೊಲೆಯ ಎಂದು ಯಾರಾದರೂ ಬೈದರೆ ಬಸವಣ್ಣ ಅಂಥ ನಿಂದಕರನ್ನು ಕೊಲ್ಲಿಸುತ್ತಿದ್ದ, ಉಗ್ರ ಶಿಕ್ಷೆಯ ವ್ಯವಸ್ಥೆ ಮಾಡಿದ್ದನು."[೧೯] ಅಂತಹ ಶಿವಭಕ್ತರನ್ನು ಗಡಿಪಾರು ಮಾಡಿ ಕಳಿಸುವ ಆಜ್ಞೆ ಮಾಡುತ್ತಿದ್ದ, ಬ್ರಾಹ್ಮಣರು, ಉಳಿದ ಉನ್ನತ ಕುಲಜರು ಇಂತ ಆಜ್ಞೆಗೆ ಪ್ರೇರಕರಾಗುತ್ತಿದ್ದರು."[೧೯] ಸಂಬೋಳಿ ನಾಗಿದೇವನನ್ನು ಬಸವಣ್ಣನು ದಂಡಿಗೆಯಲ್ಲಿ ಕುಳ್ಳಿರಿಸಿ ಬಿಜ್ಜಳನಲ್ಲಿಗೆ ಕರೆದು ತಂದುದನ್ನು, ವಿಪ್ರರನ್ನು ಅಪಮಾನಿಸಲು ನಾಗಿದೇವನ ಉಂಗುಟದಿಂದ ಹಾಲು ಸುರಿದು ಪವಾಡ ಮಾಡಿಸಿದುದನ್ನು, ಹಾಗೆಯೇ ಕರಿಕಾಲ ಚೋಳನು ಮಾದರ ಚೆನ್ನನ ಗೌರವದಿಂದ ಕಂಡಿದ್ದನ್ನು ಗಮನಿಸಿದಾಗ"[೨೦] ಲಿಂಗಧಾರಿ ಶಿವಭಕ್ತರು ಮಾತ್ರ ಹೊಲೆಯರಿಗೆ, ಕೆಳ ವರ್ಗದವರಿಗೆ ಗೌರವ ಕೊಡುತ್ತಿದ್ದರೆಂಬುದು ತಿಳಿದು ಬರುತ್ತದೆ. ಎಷ್ಟೋ ಸಲ ಕೆಳವರ್ಗದ ಭಕ್ತರು ಗುಪ್ತವಾಗಿ ಶಿವಭಕ್ತಿಯಾಚರಣೆ ಮಾಡುತ್ತಿದ್ದರು. ಭಕ್ತಿ ಪ್ರಕಟ ಪಡಿಸುವ ವಸ್ತುವಲ್ಲವೆಂಬ ಅಭಿಪ್ರಾಯದೊಂದಿಗೆ ಬಹುಶಃ ಉನ್ನತ ಕುಲಜರ ಕಾಕದೃಷ್ಟಿಗೆ ತಾವು ಬೀಳಬಾರದೆಂಬ ದೂರದೃಷ್ಟಿ ಇಲ್ಲಿರಬಹುದು.

### ಅಸ್ಪೃಶ್ಯ ಬ್ರಾಹ್ಮಣರು

ಶಿವಭಕ್ತರು ಅನ್ಯಮತೀಯ ಜನಸಮುದಾಯವನ್ನು ತಮ್ಮ ಮತಕ್ಕೆ ಪರಿವರ್ತಿಸುತ್ತಿದ್ದರು. ಕೆಳವರ್ಗದ ಶೂದ್ರರು ತಮ್ಮದೇ ಆದ ವೃತ್ತಿ-ಪ್ರವೃತ್ತಿ ಸಂಸ್ಕೃತಿಯನ್ನೊಳಗೊಂಡು ಬದುಕು ಸವೆಸುತ್ತಿದ್ದರೆ ಅವರ ಉನ್ನತಿಯನ್ನು ಬ್ರಾಹ್ಮಣ ಮೊದಲಾದ ಶಿವಭಕ್ತೇತರರು ಸಹಿಸುತ್ತಿರಲಿಲ್ಲ. ಆದರೆ, ಶಿವಭಕ್ತರು ಪವಾಡದಂತಹ ಕ್ರಮಗಳ ಮೂಲಕ ಕೆಳವರ್ಗದ ಜನತೆಯನ್ನು

ಚತುರ್ವರ್ಣಾತೀತರನ್ನಾಗಿಸುತ್ತಿದ್ದರು. ಎಷ್ಟೋ ಸಲ ಅಸ್ಪೃಶ್ಯತೆ ಆಚರಿಸುವ ಶ್ರೇಷ್ಠರನ್ನು ಭಂಗಿಸಲು ಭಕ್ತವರ್ಗವು ಅವರನ್ನೇ ಅಸ್ಪೃಶ್ಯರೆಂಬಂತೆ ವರ್ತಿಸಿದುದೂ ಉಂಟು. ವರ್ಣೀಯರ ಶ್ರೇಷ್ಠತೆಯನ್ನು ನಿರಾಕರಿಸಲು ತಾವು ಶ್ರೇಷ್ಠರೆಂದು ಸಾಧಿಸಲು ಬ್ರಾಹ್ಮಣರ ವಿಷಯದಲ್ಲಿ ಶರಣರು ಅಸ್ಪೃಶ್ಯತೆ ಆಚರಿಸಿದ ಅಪರೂಪದ ಘಟನೆಯೊಂದು ಕಲ್ಲಯ್ಯನ ರಗಳೆಯಲ್ಲಿ ಕಾಣಿಸುತ್ತದೆ.

**ಉದಾ:** "ಹಾವಿನಾಳ ಕಲ್ಲಯ್ಯನ ಮಗಳು ಕಲ್ಲವ್ವೆ ಬ್ರಾಹ್ಮಣ ಸೋಮಯಾಜಿಗಳು ತನ್ನನ್ನು ಮುಟ್ಟಿದರೆಂದು ಬ್ರಾಹ್ಮಶಿರಕರ ಎಂದು ಊಳಿಡುತ್ತಾಳೆ. ಅವರು ಮುಟ್ಟಿದ ಕೊಡವನ್ನು ಒಡೆಯುತ್ತಾಳೆ. ಹೀಗೇಮಾಡಿ ಸೋಮಾಯಾಜಿಗಳು ಅಸ್ಪೃಶ್ಯರು ಎಂಬುದನ್ನು ಮನಗಾಣಿಸುತ್ತಾಳೆ. ಸಾಲದ್ದಕ್ಕೆ ಶಿವಭಕ್ತನ ಮನೆಯ ನಾಯಿಗಿಂತಲೂ ಬ್ರಾಹ್ಮಣರು ಹೀನರೆಂಬ ಕುಯುಕ್ತಿ ಈ ಪ್ರಕರಣದಲ್ಲಿ ಕೇಳಿ ಬರುತ್ತದೆ"[೨೧] ಅದನ್ನು ಸಮರ್ಥಿಸಲು ವ್ಯಂಗ್ಯದ ಪರಮಾವಧಿಯೆಂಬಂತೆ ಬೇಟೆಯ ನಾಯಿಯೊಂದ ರಿಂದ ಯಜುರ್ವೇದದ ಸಾಲುಗಳನ್ನು ಕಲ್ಲವ್ವೆಯ ತಂದೆ ಕಲ್ಲಯ್ಯ ಹೇಳಿಸುತ್ತಾನೆ. ಆ ಮೂಲಕ ವೇದಪ್ರಿಯರನ್ನು ಭಂಗಿಸುತ್ತಾನೆ,"[೨೩] ನಾಯಿಗೆ ಸಮನಾಗಿ ಅನ್ಯರನ್ನು ಕಾಣುವ ಬ್ರಾಹ್ಮಣ ವರ್ಣೀಯರ ಮೌಲ್ಯ ಈ ಮೂಲಕ ಕುಸಿಯುವಂತೆ ಮಾಡುವುದು ಶಿವಭಕ್ತರ ಉದ್ದೇಶವೆಂಬುದು ತಿಳಿದು ಬರುತ್ತದೆ.

ಸಂಬೋಳಿನಾಗಿದೇವನು ಶರಣರನ್ನಲ್ಲದೆ ಭವಿಗಳನ್ನು ಮುಟ್ಟಲಾರೆನೆಂಬ ಅಸ್ಪೃಶ್ಯತಾಚರಣೆಯನ್ನು ಪ್ರತಿಜ್ಞೆಯನ್ನಾಗಿ ಮಾಡಿಕೊಂಡಿರುತ್ತಾನೆ. ಇದಕ್ಕಾಗಿ ಶಿವಭಕ್ತರಿಟ್ಟುಕೊಂಡ ಸೂತ್ರ ದೇವನೊಲಿದವನ ಕುಲಸತ್ಕುಲ; ದೇವನೊಲಿದವನ ಜಾತಿಯೇ ಜಾತಿ' ಎಂಬುದು.[೨೪] ಸಾಮಾಜಿಕ ನಡವಳಿಕೆಗಳನ್ನು ಒಪ್ಪಿ ಅವಮಾನಿತರಾಗಿ ಬಾಳುವ ಹೊಲೆಯಾದಿ ಕೆಳವರ್ಗಗಳ ಶೋಷಣೆ ತಪ್ಪಿಸಲು ಸಮಾಜೋ-ಧಾರ್ಮಿಕ ಬದಲಾವಣೆ ಮಾಡಿದ ಶಿವಶರಣರ ಪ್ರಯೋಗಗಳ ಉದಾಹರಣೆಯನ್ನು ಹರಿಹರ ನೀಡುವ ಮೂಲಕ ಆತನ ಕಾಲದಲ್ಲಿ ಇಂತಹ ಚಟುವಟಿಕೆಗಳು ನಡೆದಿರಬೇಕೆಂಬ ನಂಬುಗೆ ಹುಟ್ಟಿಸುತ್ತಾನೆ.

ವರ್ಣಭೇದಕ್ಕೆ ಸಂಬಂಧಿಸಿದ ಹುಟ್ಟು, ವೃತ್ತಿಯಂತಹ ಮುಖ್ಯ ನೆಲೆಗಳನ್ನು ಛಿದ್ರಗೊಳಿಸಿ, ಸಹಭೋಜನ, ವೃತ್ತಿಗೌರವ, ಹೊಸದಾಗಿ ಇಟ್ಟ ಹೆಸರು, ಲಿಂಗಧಾರಣೆಯಂತಹ ಕ್ರಮಗಳಿಂದ ಶಿವಭಕ್ತರು ಅಸ್ಪೃಶ್ಯತೆಯನ್ನು ನಿರ್ಮೂಲನೆಗೊಳಿಸಲು ಇಲ್ಲಿ ಪ್ರಯತ್ನಿಸಿದ್ದಾರೆ. ಘಟನೆಗೆ ಪ್ರತಿಭಟನೆ, ಮೌಲ್ಯಕ್ಕೆ ಪ್ರತಿಮೌಲ್ಯ, ನಿರ್ಮಾಣ ಮಾಡಿ ಕೆಲವು ಸಲ ನೇರವಾಗಿ ಹಾಗೂ ಪರೋಕ್ಷವಾಗಿ ಶಿವಭಕ್ತರು ಮತ್ತು ಕೆಳವರ್ಗದ ಜನರು ವರ್ಣ ಸಮಸ್ಯೆಯನ್ನು ನಿರ್ಮೂಲನೆ ಮಾಡಲು ಯತ್ನಿಸಿದ್ದಾರೆ.

ಜೈನ ಪಂಪನಿಂದ ಆರಂಭಗೊಂಡ ಕುಲ, ಜಾತಿಗಳ ವಿವೇಚನೆ, ವೀರಶೈವ ವಚನಕಾರರಲ್ಲಿ ಇನ್ನಷ್ಟು ಸ್ಫೋಟಗೊಂಡು ಹರಿಹರ, ರಾಘವಾಂಕರಲ್ಲಿ ಮುಂದುವರಿದು ಬಂದುದನ್ನು ಅವರ ಸಾಹಿತ್ಯದಲ್ಲಿ ನಿರೂಪಿಸಿದಂತೆ ಕಾಣುತ್ತೇವೆ.

**ಸಂಸ್ಕಾರಗಳು**

ಸಾಮಾಜಿಕ ಜೀವನದಲ್ಲಿ ವ್ಯಕ್ತಿಯ ಅಂತರಂಗ ಮತ್ತು ಬಹಿರಂಗ ಶುದ್ಧಿಯ ಹೆಸರಿನಲ್ಲಿ ಹುಟ್ಟು ಹಾಕಿಕೊಂಡ ನಿಯಮಾಚರಣೆಗಳು ಸಂಸ್ಕಾರಗಳೆನಿಸುತ್ತವೆ. ನಿತ್ಯ ಜೀವನದಲ್ಲಿ ಧರ್ಮವು ಹಾಸು ಹೊಕ್ಕಾಗಿರುವುದರಿಂದ ಸಂಸ್ಕಾರಗಳು ಧಾರ್ಮಿಕ ವಲಯದಲ್ಲಿಯೇ ಹೆಚ್ಚು ಕಂಡು ಬರುತ್ತವೆ. ವ್ಯಕ್ತಿಯ ಜನನದೊಂದಿಗೆ ಆರಂಭವಾಗುವ ಇವು ಮರಣದ ನಂತರವೂ ಆಚರಿಸಲ್ಪಡುತ್ತವೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಇಲ್ಲಿ ದೇಶಿ ಸಂಸ್ಕಾರಗಳೊಂದಿಗೆ ವೈದಿಕ ಸಂಸ್ಕಾರಗಳು ಸೇರಿಕೊಂಡಿವೆ. ಶಿವಶರಣರು ಶೋಷಣೆ ರೂಪದ, ಅನ್ಯಾಯ ಮೂಲದ ಅನೇಕ ಸಂಸ್ಕಾರಗಳಿಗೆ ಪ್ರತಿಭಟನೆಯೊಡ್ಡಿ ಬದುಕಿನ ವಾಸ್ತವತೆಯನ್ನು ಅಪ್ಪಿಕೊಂಡಿದ್ದಾರೆ. ಹೀಗಿದ್ದೂ ಕೆಲವು ಸಂಸ್ಕಾರಗಳು ಸೇರಿಕೊಂಡಿವೆ ಎಂಬುದು ನಮ್ಮ ಗಮನಕ್ಕೆ ಬರುತ್ತದೆ.

ಹರಿಹರನ ಕಾಲಾವಧಿಯಲ್ಲಿ ಇವುಗಳ ಸ್ವೀಕಾರ ಮತ್ತು ನಿರಾಕಾರ ಎರಡನ್ನೂ ನೋಡಬಹುದಾಗಿದೆ."[೨೫] ಸಾಮಾನ್ಯವಾಗಿ ಗರ್ಭದಾನ, ಪುಂಸವನ, ಸಿಮೋಂತೋನ್ನಯನ, ಜಾತಕರ್ಮ ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರಣ, ಕರ್ಣಭೇದ, (ಕರಣವೇಧ) ವಿದ್ಯಾರಂಭ, ಉಪನಯನ, ವೇದಾರಂಭ, ಕೇಶಾಂತ, ಸಮಾವರ್ತನ, ವಿವಾಹ ಮತ್ತು ಅಂತ್ಯೇಷ್ಠಿಗಳೆಂಬ ಷೋಡಶ ಸಂಸ್ಕಾರಗಳು ಉಂಟು ಸಾಮಾನ್ಯ ಜನಕ್ಕೆ ಸ್ಪಂದಿಸುವ ಹರಿಹರ ಅಗತ್ಯವಿದ್ದವುಗಳಷ್ಟನ್ನೇ ಕಥಾನಕಗಳಲ್ಲಿ ನಿರೂಪಿಸಿದ್ದಾನೆ. ಮುಖ್ಯವಾಗಿ ಜನನ, ಮದುವೆ ಮತ್ತು ಪುರಾಣಕ್ಕೆ ಸಂಬಂಧಿಸಿದ ಹರಿಹರನ ನಿರೂಪಣೆಯನ್ನು ಗಮನಿಸಬೇಕು. ಇಲ್ಲಿಯೂ ಕೂಡ ಕೆಲವೊಮ್ಮೆ ವೈದಿಕ ಸಂಸ್ಕಾರಗಳನ್ನು ಕೈಬಿಟ್ಟು ಶಿವಸಂಸ್ಕಾರಗಳ (ಶೈವಾಗಮಗಳ ಪ್ರಕಾರ) ಹೊಸ ವ್ಯವಸ್ಥೆ ರೂಪಗೊಂಡಿರುವುದು ಕಂಡುಬರುತ್ತದೆ. ಹೊಸ ವ್ಯವಸ್ಥೆಯ ಆಚರಣೆಯೇ ವೀರಶೈವದ ವೈಶಿಷ್ಟ್ಯ ಎಂಬುದು ಇದರ ತಾತ್ಪರ್ಯವಾಗಿದೆ.

**ಜಾತಕರ್ಮ-ನಾಮಕರಣ**

ಕೈಲಾಸದಿಂದ ಬಂದ ಜೀವ ಭೂಮಿಯಲ್ಲಿ ಜನ್ಮ ತಾಳುತ್ತದೆಯೆಂಬ ನಂಬುಗೆ ಹರಿಹರನ

ರಗಳೆಗಳ ಶಿವಭಕ್ತರಲ್ಲಿದೆ. ರಗಳೆಗಳ ಹಿನ್ನೆಲೆಯಲ್ಲಿ ಜೀವಗಳು ಜನಿಸುತ್ತಿವೆ. ಹುಟ್ಟುವ ಜೀವಗಳಿಗಾಗಿ ಮುಹೂರ್ತಗಳು ಕಾಯುತ್ತಿರುತ್ತವೆ ಎಂದು ಕವಿ ಬರೆಯುತ್ತಾನೆ. ಮುಹೂರ್ತಗಳು 'ಜನಿಯಿಸುವ ಸಮಯಂ ಪಾರ್ದಿರುತ್ತರಲ್'[೨೬] ಎಂದು ಹೇಳುವ ಮೂಲಕ ಅವನು ಮುಹೂರ್ತಗಳ ಮಹತ್ವವನ್ನು ಕಡಿಮೆ ಮಾಡುತ್ತಾನೆ. ಹುಟ್ಟಿದ್ದೇ ಮುಹೂರ್ತವೆಂಬ ವಚನಕಾರರ ಮೌಲ್ಯ (ಬಸವ ಮೌಲ್ಯ) ಹರಿಹರನ ಕಾಲದಲ್ಲಿ ಜೀವಂತವಾಗಿದೆ ಎಂಬ ಉದಾಹರಣೆ ಕಂಡು ಬರುತ್ತದೆ. ಮೊದಲ ಸಲ ಗರ್ಭಿಣಿಯಾದ ಹೆಣ್ಣು ಮಗಳಿಗೆ ಸೀರೆ ಮಾಡುವ ಅಥವಾ ಕುಪ್ಪಸ ಮಾಡುವ ಇಂದಿನ ಸೀಮಂತ ಕಾರ್ಯ ಹರಿಹರನ ರಗಳೆಗಳಲ್ಲಿ ಕಂಡು ಕಂಡುಬಂದಿಲ್ಲ. ಗರ್ಭವತಿಯ ಲಾವಣ್ಯ ವರ್ಣನೆ ಮಾಡುತ್ತ ಶಿಶುಜನನಕ್ಕೆ ಸಾಂದರ್ಭಿಕ ವಿಶೇಷ ವಿಧಿಗಳನ್ನು ಸಲ್ಪದರಲ್ಲಿ ಹರಿಹರ ಮಾಡಿಕೊಡುತ್ತಾನೆ. ಕೂಸು ಹುಟ್ಟಿದಾಗ ಅದನ್ನು ಮೊರದಲ್ಲಿ ಹಾಕುತ್ತಿದ್ದರು."[೨೭] ಇಂತ ಜಾತಕರ್ಮದ ಆಚರಣೆಗೆ ಶಿವಭಕ್ತ ಸಮೂಹವನ್ನು ಬರಮಾಡಿಕೊಂಡು ತಾಯ್ತಂದೆಯದುರು ಆರಾಧಿಸುತ್ತಿದ್ದರು."[೨೮] ಬಂಧುಬಳಗಕ್ಕೆ ಉಡುಗೆ, ತೊಡುಗೆ ಕಾಣಿಕೆ ನೀಡುತ್ತಿದ್ದರು. ಬೇಡಿದವರಿಗೆ ದಾನ ಮಾಡುತ್ತಿದ್ದರು. ನೆರೆದ ಸರ್ವ ಜನಕ್ಕೂ ಊಟ ಬಡಿಸಿ ಕೂಸಿಗೂ ಪಾದೋಧಕಗಳಿಂದ ಕೂಸಿನ ಮಜ್ಜನವಾಗುತ್ತಿತ್ತು.

ಮಂಗಳಾರತಿಯ ಕುಡಿಗಪ್ಪಿನಿಂದ ತಯಾರಿಸಿದ ಅಂಜನವನ್ನು, ಭಸ್ಮದ ತಿಲಕವನ್ನು ಕೊನೆಗೆ ಹಚ್ಚಿ ಶಿವಭಕ್ತರ ಪಾದಗಳಿಗೆ ಎರಗಿಸುತ್ತಿದ್ದರು. ಶಿವ ಪ್ರಸಾದವೆಂದು ಬಾಯಣ್ಣೆಯನ್ನು ಕೂಸಿಗಾಕ್ಕಿದೆ."[೨೯] ಹಲವಾರು ಉದಾಹರಣೆಗಳನ್ನು ನೋಡಿದರೆ ಇದು ವಿಶೇಷವೆನಿಸುತ್ತದೆ. "ಗೊಗ್ಗೇಶ್ವರ ಪ್ರಸಾದದ ಬಾಯ್ವೆಣ್ಣೆ"[೩೦] ಪಂಚಾಕ್ಷರಿಯ ಬಾಯ್ವೆಣ್ಣೆ".[೩೧] ಭಕ್ತಿವೆರಸಿ ಬಾಯ್ವೆಣ್ಣೆಯನಿಕ್ಕಿ"[೩೨] ಕಲ್ಲಿನಾಥನ ಪ್ರಸಾದದ ಬೆಣ್ಣೆಯಂ ತಂದು"[೩೩] ಹೀಗೆ ಬಾಯ್ವೆಣ್ಣೆಯನ್ನು ಕೂಸಿಗಿಕ್ಕಿದ ಅನೇಕ ಉದಾಹರಣೆಗಳಿವೆ. ಶಿವಪ್ರಸಾದದ ಪ್ರಾರಂಭವೇ ಶಿವಭಕ್ತ ಜೀವನ ಪ್ರಾರಂಭವೆನ್ನುವುದರ ಹಿನ್ನೆಲೆ ಇಲ್ಲಿದೆ. ಬಳಿಕ ಕೂಸಿಗೆ ಹೆಸರಿಟ್ಟು ತೊಟ್ಟಿಲೊಳಗೆ ಹಾಕಿ ಪುರಾತನರ ಗೀತಗಳನ್ನು ಜೋಗುಳ ಹಾಡನ್ನಾಗಿ ಹಾಡುತ್ತಿದ್ದರು".[೩೪] ದೇವರಿಗೆ ಹರಕೆ ಹೊತ್ತು ಹೆತ್ತ ಮಗುವಾಗಿದ್ದರೆ ದೇವರ ಹೆಸರನ್ನು ಇಡುತ್ತಿದ್ದರು.

ಉದಾಹರಣೆಗೆ ಮಹಾದೇವಿಯನ್ನು ಅವಳ ತಾಯ್ತಂದೆಯದುರು ಪಾರ್ವತಿಯು ಆರಾಧನೆ ಮಾಡಿ ಪಡೆದಿದ್ದಕ್ಕೆ ಪಾರ್ವತಿಯ ಹೆಸರಾದ 'ಮಹಾದೇವಿ' ಎಂಬ ನಾಮಕರಣ ಮಾಡಿದ್ದರು"[೩೫] ಕಲ್ಲಿನಾಥ ದೇವರ ಹೆಸರನ್ನು ಹಾವಿನಾಳ ಕಲ್ಲಯ್ಯನಿಗೆ ಇಟ್ಟಿದ್ದರು."[೩೬] ಇಂದಿನಂತೆ ನಾಮಕರಣ ಸಂದರ್ಭದಲ್ಲಿ ಕೂಸಿನ ಕಿವಿಗಳಲ್ಲಿ ಮೂರು ಸಲ ಇಡಬೇಕಾದ ಹೆಸರನ್ನು ಕೂಗುತ್ತಿದ್ದರು. ಆರಾಧಿಸುವ

ದೇವರ ಹೆಸರನ್ನು ಇಟ್ಟಂತೆ ತೀರಿಹೋದ ಹಿರಿಯರ ಹೆಸರಿನ್ನಿಡುವುದು ಎಂದಿನಿಂದಲೂ ಬಂದಿದ್ದು, ಸಿದ್ಧ ದಂಡಾಧಿಪ ಮಡಿದ ನಂತರ ಆತನ ಸ್ಮರಣಾರ್ಥವಾಗಿ ಬಸವಣ್ಣನ ಮಗನಿಗೆ ಸಿದ್ಧರಸನೆಂಬ ಹೆಸರಿಟ್ಟಿದ್ದು ಈ ಹಿನ್ನೆಲೆಯಲ್ಲಿ ಕೆಲವೊಮ್ಮೆ ಮುಖ್ಯ ಹೆಸರುಗಳ ಜತೆಗೆ ಅರಸ (ಸಿದ್ಧರಸ) ಗೌಡ (ಮುದ್ದುಗೌಡ), ಸಿದ್ಧ (ರೇವಣಸಿದ್ಧ) ಇತ್ಯಾದಿ ಉಪನಾಮಗಳನ್ನು ಜೋಡಿಸುತ್ತಿದ್ದು.

ರಗಳೆಗಳ ಬಹುಭಾಗದಲ್ಲಿ ಬಸುರಿಯ ವರ್ಣನೆ ಮಾಡಿ ತೀರ ಸಂಕ್ಷೇಪವಾಗಿ "ಜಾತಕರ್ಮ ಮಾಡಿ ಶುಭಲಗ್ನವೆಂದು ಮುಹೂರ್ತಿಕರ್ ಕೊಂಡಾಡಿದ್ದಾರೆ, ನಾಮಕರಣಮಂ ಮಾಡಿ" ಎಂಬ ವಿವರ ಬರುವುದೇ ಹೊರತು ದೀರ್ಘ ವಿವರಣೆ ಇಲ್ಲಿಲ್ಲವೆಂಬುದನ್ನು ಗಮನಿಸಬೇಕು. ಆಚರಣೆಯ ಸಂದರ್ಭದಲ್ಲಿ ತಿಥಿ, ಮುಹೂರ್ತ ಹೇಳುವವರು, ಹೆಸರಿಡುವವರು ಇರುತ್ತಿದ್ದರು. ಈ ವೃತ್ತಿಯವರು ಯಾರೆಂಬುದು ಸ್ಪಷ್ಟವಾಗುವುದಿಲ್ಲ. ಶಿವಭಕ್ತ ಸಮೂಹವಂತೂ ನೆರೆದಿರುತ್ತಿತ್ತು. ಪಾದೋಧಕ' ಮಜ್ಜನ ಮಾಡುತ್ತಿದ್ದರೆಂಬ ಮಾತನ್ನು ಗಮನಿಸಿದರೆ ಅದು ಜಂಗಮ ಪಾದೋಧಕ ಇರಬೇಕೆನಿಸುತ್ತದೆ. ಹೀಗಾಗಿ ಮುಹೂರ್ತಿಕರೆಂದರೆ ಜಂಗಮರೇ ಆಗಿದ್ದರು. ಭಕ್ತವರ್ಗಕ್ಕೆ ಗುರುಗಳೆನ್ನಿಸುವವರೇ ಈ ಜಂಗಮರು. ಕೆಲವು ಸಲ ತಂದೆಯೇ ಕೂಸಿನ ಜಾತಕರ್ಮಾದಿ ಸಂಸ್ಕಾರಗಳನ್ನು ನಡೆಸಿದ ಉದಾಹರಣೆಗಳಿವೆ. ಅವು ಹಾವಿನಾಳ ಕಲ್ಲಯ್ಯ, ರೇವಣಸಿದ್ಧನ ರಗಳೆಯಲ್ಲಿ ಪ್ರಸ್ತಾಪವಾಗಿವೆ[೪೦] ಈ ಕಾಲದವರೆಗೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದ ಹಿಂದಿನ ಆಚರಣೆಗೆ ಇಂಥವುಗಳ ಮೂಲಕ ಪ್ರತಿಭಟನೆ ವ್ಯಕ್ತವಾಗಿದೆ ಎನ್ನಬೇಕು."

## ಮುಂಜಿವೆ, ಉಪನಯನ, ದೀಕ್ಷೆ

ಬ್ರಾಹ್ಮಣರು ತಮ್ಮನ್ನು ತಾವು ದ್ವಿಜರೆಂದು ಕರೆದುಕೊಂಡು ಸಹಜ ಹುಟ್ಟಿವಿಕೆಯೊಡನೆ ಮುಂಜಿವೆಯಂಥ ಧಾರ್ಮಿಕ ಆಚರಣೆಯನ್ನು ಬೆಸೆದರು. ಅದು ಸಮಾಜ ಮತ್ತು ಧರ್ಮ ಸಂಬಂಧಿಯಾಗುವಂತೆ ಮಾಡಿದ್ದಾರೆ. ಮುಂಜಿವೆ, ದೀಕ್ಷೆ, ಲಿಂಗದೀಕ್ಷೆ ಇತ್ಯಾದಿ ಪಾರಿಭಾಷಿಕ ಪದಗಳೊಂದಿಗೆ ಈ ಕ್ರಿಯೆ ಆರಂಭವಾಗಿದೆ.

ಬ್ರಾಹ್ಮಣ ವರ್ಗದ ಸಾಂಪ್ರದಾಯಿಕ ಆಚರಣೆಗಳೂ, ಅವುಗಳನ್ನು ಪ್ರತಿಭಟಿಸಿ ಹುಟ್ಟುಹಾಕಿದ ಶಿವಭಕ್ತರ ಆಚರಣೆಗಳೂ ಈ ಮೇಲಿನ ಧಾರ್ಮಿಕ ಆಚರಣೆಗಳಲ್ಲಿ ಕಂಡು ಬರುವುದನ್ನು ಕಾಣಬಹುದು. ವಚನಕಾರರರು ಅಂತಹ ಪುರೋಹಿತ ಶಾಹಿ ಆಚಾರ, ವಿಚಾರಗಳನ್ನು ಪ್ರತಿಭಟಿಸಿ ಹೊಸ ಆಚರಣೆಯನ್ನು ತಂದ ಸಾಹಸ ತೋರಿದ್ದರು. ಅವರ ಪ್ರಯೋಗಗಳು ಹರಿಹರನ ಕಾಲದಲ್ಲಿ ದಿಕ್ಸೂಚಿಯಂತೆ ಕೆಲಸ ಮಾಡುತ್ತಿದ್ದವೆಂದರೆ ತಪ್ಪಾಗಲಾರದು. ಹೀಗಾಗಿ ಹರಿಹರ ಕವಿಯು

ಶಿರೋಭಾರವೆನಿಸುವ ಬಸವಪೂರ್ವ ಆಚರಣೆಗಳ ಉಲ್ಲೇಖ ಮಾಡುವುದಿಲ್ಲ. ಬಸವ ಪ್ರತಿಭಟನೆಯ ಪ್ರಗತಿಪರ ಆಚರಣೆಗಳ ಮೇಲುನೋಟವೊಂದಕ್ಕೆ ಹರಿಹರ ಸೀಮಿತಗೊಳ್ಳುತ್ತಾನೆ.

ಪುರೋಹಿತರು ಮಾಡುವ ಧಾರ್ಮಿಕ ಆಚರಣೆಗಳನ್ನು ಶಿವಭಕ್ತರು ತಾವೇ ಮಾಡಿದ ಉಲ್ಲೇಖ ರಗಳೆಗಳಲ್ಲಿವೆ. ಶಂಕರ ದಾಸಿಮಯ್ಯನು ತನ್ನಮಗ ಸದ್ಯೋಜಾತನಿಗೆ ಉಪನಯನ ಸಂಸ್ಕಾರ ಮಾಡಿದ ವಿವರ ರಗಳೆಯಲ್ಲಿದೆ"[೪೧] ರೇವಣಸಿದ್ಧನು ಮಗ ರುದ್ರಮುನಿಗೆ ತಾನೇ ಶೈವೋಪದೇಶ ಮಾಡುತ್ತಾನೆ"[೪೨] ಜಂಗಮ ಪ್ರಕರಂಗಳ ದ್ವಿಜರಿಗೆಣೆಯಾಗಿ ಉಪದೇಶಮಾಯ್ತು ತಂದೆಯ ಕೈಯ್ಯತಾಂಗೆ"[೪೩] ಎಂಬ ಹರಿಹರೋಕ್ತಿ ಆ ಕಾಲದಲ್ಲಿ ಬ್ರಾಹ್ಮಣರಾಚರಣೆಗಳಿಗೆ ಮತ್ತು ಪುರೋಹಿತರಿಗೆ ಒಡ್ಡಿದ ಪ್ರತಿಭಟನೆಯಂತೆ ತೋರುತ್ತದೆ. ೧೨ನೇ ಶತಮಾನದಲ್ಲಿ ದೇವಾಲಯ ನಿರಾಕರಣೆಯ ಮೂಲಕ ಪುರೋಹಿತಶಾಹಿಗೆ ಹೇಗೆ ಆಘಾತ ಉಂಟಾಗಿತ್ತೋ ಹಾಗೆಯೇ ಧರ್ಮಾಚರಣೆಯ ಸಂಸ್ಕಾರಗಳನ್ನು ಶಿವಭಕ್ತರು ತಾವೇ ಮಾಡುವುದರ ಮೂಲಕ ಪುರೋಹಿತ ವರ್ಗಕ್ಕೆ ಆಘಾತವನ್ನುಂಟು ಮಾಡಿರಬೇಕು. ಧಾರ್ಮಿಕ ಆಚರಣೆಗಳನ್ನು ಪುರೋಹಿತರ ಗುತ್ತಿಗೆಯಿಂದ ಬಿಡಿಸಿಕೊಳ್ಳುವುದನ್ನು ಹರಿಹರನ ಕಾಲದಲ್ಲಿ ವ್ಯಾಪಕವಾಗಿ ಕಾಣಬಹುದಾಗಿದೆ.

ದೀಕ್ಷಾಬದ್ಧನಾದ ವ್ಯಕ್ತಿಯೇ ಸ್ವಯಂ ಪ್ರತಿಭಟಿಸಿದ ಉಲ್ಲೇಖಗಳು ದೊರೆಯುತ್ತವೆ. ಕರ್ಮಲತೆಯಂತಿದ್ದ ಜನ್ನಿವಾರವನ್ನು ಬಿಸಾಡಿದ, ಹೋತಿನ ಗಂಟಲನ್ನು ಬಿಗಿದಂತಿದ್ದ ಮೌಂಜಿಯನ್ನು ಹರಿದು ಹಾಕಿದ, ಲಾಂಛನ ಸ್ವರೂಪದ ವಸ್ತ್ರವನ್ನು ಬದಿಗೆ ಸರಿಸಿ ದಿವ್ಯಾಸ್ತ್ರವನ್ನು ಹೊದೆದು ಲೌಕಿಕಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದ ಘಟನೆಯೊಂದು ಬಸವೇಶ್ವರ ದೇವರ ರಗಳೆಯಲ್ಲಿ ಬಂದಿದೆ"[೪೪] ಈ ಕಾರ್ಯ ವೆಸಗಿದವನು ಬಸವಣ್ಣ ಅಗ್ರಹಾರಕ್ಕೆ ಅಧಿಪತಿಯಾದವನ ಮನೆಯಲ್ಲಿ ಇಂಥದೊಂದು ಘಟನೆ ನಡೆಯುವುದು ಬಲುದೊಡ್ಡ ಘಟನೆಯಾಗಿ ಎದ್ದು ಕಾಣುತ್ತದೆ. ಸಂಕೋಲೆಗಳಂತಿರುವ ಹಳೆಯ ಆಚರಣೆಗಳನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುವ ಪ್ರಕ್ರಿಯೆಯನ್ನು ಈ ಘಟನೆಯಲ್ಲಿ ಕಾಣಬಹುದು. ಪ್ರಗತಿಪರ ನಿಲುವಿನ ಆಚರಣೆಗಳು ಹರಿಹರ ಕಾಲಾವಧಿಯಲ್ಲಿ ಪ್ರಸಾರವಾಗಿದ್ದವೆಂಬುದಕ್ಕೆ ಮೇಲಿನ ಸಂಗತಿ ಸೂಚಿಸುತ್ತದೆ.

ಶಿವಭಕ್ತ ಸಮೂಹದಲ್ಲಿ ವಿಶೇಷ ಮಹತ್ವ ಪಡೆದ ಲಿಂಗದೀಕ್ಷೆಯ "ಶರಣಸತಿ ಲಿಂಗಪತಿ" ಎಂಬ ತತ್ವಕ್ಕನುಗುಣವಾಗಿ ನಡೆಯುತ್ತಿತ್ತು. ಶೈವಸಂಪ್ರದಾಯದ ಮದುವೆಯ ವಿಧಿವಿಧಾನಗಳೇ ಲಿಂಗದೀಕ್ಷೆಯಲ್ಲಿ ಅಡಕಗೊಂಡಿದ್ದವು"[೪೫] ಇಲ್ಲಿ ಲಿಂಗದೀಕ್ಷೆ ಎನ್ನುವುದು ಲಿಂಗಕ್ಕೆ ನಿಷ್ಠೆ ತೋರುವ, ಲಿಂಗದೊಡನೆ ಮದುವೆಯಾಗುವ, ಬದುಕನ್ನು ಲಿಂಗಾರ್ಪಿತ ಮಾಡಿಕೊಳ್ಳುವ ಅರ್ಥವನ್ನು

ವ್ಯಕ್ತಪಡಿಸುತ್ತದೆ. ಮದುವೆಯ ಮುನ್ನ ನಡೆಯುವ ಈ ಲಿಂಗದೀಕ್ಷೆ ನಿಜಕ್ಕೂ ಲಿಂಗಪತಿ ಶರಣಸತಿ, ತತ್ವದ ಪ್ರಾಯೋಗಿಕ ಆಚರಣೆಯಾಗಿದೆ. ಉಪನಯನಗಳು ಏಳು ಎಂಟು ವರ್ಷದ ಪ್ರಾಯದಲ್ಲಿ ನಡೆದ ವಿವರಗಳು ರಗಳೆಯಲ್ಲಿ ಬಂದಿವೆ."[೪೬] ಇವು ವಿವಾಹ ಪೂರ್ವದಲ್ಲಿ ನಡೆಯುವ ಸಂಸ್ಕಾರಗಳಾಗಿದ್ದವು.

## ಮದುವೆ ಸಂಪ್ರದಾಯ

ಪ್ರಾಚೀನ ಕಾಲದಿಂದ ಪ್ರಚಲಿತವಿರುವ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಾಶ್ರಮಗಳಲ್ಲಿ ಗೃಹಸ್ಥಾಶ್ರಮವು ತುಂಬಾ ಪ್ರಮುಖವಾದುದು. ಗೃಹಸ್ಥಾಶ್ರಮವು ಸಮಾಜವನ್ನು ನಿರ್ಮಾಣ ಮಾಡುತ್ತದೆ. ಸಮಾಜವು ಕುಟುಂಬಗಳಿಂದ ಕೂಡಿರುತ್ತದೆ. ಅಂಥ ಕುಟುಂಬವು ಪ್ರತಿಜ್ಞಾಬದ್ಧರನ್ನಾಗಿಸುವುದು ಸರ್ವಶ್ರುತ. ರಗಳೆಗಳಲ್ಲಿ ವಿವಾಹದ ಪ್ರಕಾರಗಳಾಗಲಿ, ಬೇರೆ ಬೇರೆ ತೆರನಾಗಿ ನಡೆದ ಮಾಹಿತಿಯಾಗಲಿ ದೊರೆಯುವುದಿಲ್ಲ, ಪ್ರಾಚೀನ ಪರಂಪರೆಯ 'ಸ್ವಯಂವರ' ಮದುವೆಯ ಉದಾಹರಣೆ ರಗಳೆಗಳಲ್ಲಿ ಕಂಡು ಬರುವುದಿಲ್ಲ. ಆದರೆ, ಕವಿಯ ಹಳೆ ನೆನಪುಗಳಂತೆ ಭಕ್ತಿ ಸ್ವಯಂವರ" ಮುಕ್ತಿ ಸ್ವಯಂವರ' ಎಂಬ ಪದಗುಚ್ಛ ಬಳಸಿದ್ದಾನೆ."[೪೭] ಹಿರಿಯರಿಂದ ನಿರ್ಧರಿಸಲ್ಪಟ್ಟ ತಂದೆ, ತಾಯಿ ಒಪ್ಪಿಗೆ ನೀಡಿದ ಮದುವೆಗಳು ಪ್ರಚಲಿತವಿದ್ದವು.

ಕುಲಗೋತ್ರಕ್ಕನುಗುಣವಾಗಿ ಬಹುಶಃ ಪರಂಪರಗತ ತಮ್ಮ ವೈಶಿಷ್ಟ್ಯ ಉಳಿಸಿಕೊಳ್ಳುವ ಹಿನ್ನೆಲೆಯಲ್ಲಿ ಕುಲ ಮತ್ತು ಗೋತ್ರಕ್ಕೆ ಹೊಂದಾಣಿಕೆ ಮಾಡಿಕೊಂಡು ಮದುವೆ ನಡೆಸುತ್ತಿದ್ದರು. ಬಸವಣ್ಣನು ಕುಲಗೋತ್ರ ಒಂದಾಗಿರುವಂತಹ ಅದರಲ್ಲೂ ಸುಶೀಲೆಯರಾದ ಗಂಗಾದೇವಿ, ಮಾಯದೇವಿಯರನ್ನು ಮದುವೆಯಾದನೆಂಬ"[೪೮] ಹರಿಹರೋಕ್ತಿಯನ್ನು ಗಮನಿಸಿದರೆ ಶಿವಭಕ್ತರು ಮದುವೆ ವಿಷಯಕ್ಕೆ ತುಂಬ ಕಟ್ಟುನಿಟ್ಟಾದ ವ್ಯವಸ್ಥೆ ಮಾಡಿಕೊಂಡಿದ್ದರೆಂಬ ಪದ್ಧತಿ ಇತ್ತೆನಿಸುತ್ತದೆ. ಈ ಕಟ್ಟುನಿಟ್ಟಿನ ವ್ಯವಸ್ಥೆ ಶಿವಭಕ್ತರೇತರರಲ್ಲಿ ಇದ್ದಿರಲಿಲ್ಲ. ವೈಜಕವ್ವೆ, ಹೇರೂರು ಹೆಂಗೂಸಿನ ರಗಳೆಗಳಲ್ಲಿ ಕಂಡುಬಂದಂತೆ ಸ್ವಜಾತಿಗಳಲ್ಲಿ, ಜಾತಿ, ಉಪಜಾತಿಗಳಲ್ಲಿ, ಅಂತರ್ ಜಾತಿಗಳಲ್ಲಿ ಮದುವೆ ಜರುಗಿದ ಉಲ್ಲೇಖ ನೋಡಿದರೆ ಶಿವಭಕ್ತರನ್ನು ಹೊರತುಪಡಿಸಿ ಉಳಿದವರಲ್ಲಿ ಈ ಬಗೆಯ ವಿವಾಹ ಜರುಗುವುದು ಸಾಮಾನ್ಯವಾಗಿತ್ತು. ಬಹುಶಃ ವರ್ಣ ವ್ಯವಸ್ಥೆಯ ತೆಕ್ಕೆಯಿಂದ ವಚನಕಾರರ ಕಾಲಕ್ಕೆ ಜಾತಿ ವ್ಯವಸ್ಥೆ ಬಿಡಿಸಿಕೊಂಡಿದ್ದು, ಇದಕ್ಕೆ ಕಾರಣವಾಗಿದೆ. ಶಿವಭಕ್ತರು ಮಾತ್ರ ಲಿಂಗಧಾರಣೆಯನ್ನು ಪ್ರಮುಖ ಮೌಲ್ಯವನ್ನಾಗಿಸಿಕೊಂಡು ಲಿಂಗಧಾರಿಗಳೊಡನೆ ವಿವಾಹ ಸಂಬಂಧವಿಟ್ಟುಕೊಳ್ಳುತ್ತಿದ್ದರು. ಪ್ರಾಸಂಗಿಕ ಹಾಗೂ ರೂಪಕವಾಗಿ ಮದುವೆಯ ವಿಧಿ, ವಿಧಾನಗಳು

ರಗಳೆಗಳಲ್ಲಿ ನಿರೂಪಗೊಂಡಿವೆ. ಮದುವೆಯು ಹದಿನಾರು ವಯಸ್ಸಿಗೆ ಜರುಗುತ್ತಿತ್ತು"[೪೯] ವಿವಾಹ ವಯಸ್ಸಿಗೆ ಸಂಬಂಧಿಸಿದ ಪದಿನಾರಬ್ಧಂ ಎಂಬ ಹರಿಹರೋಕ್ತಿಯನ್ನು ಇಲ್ಲಿ ಗಮನಿಸಬೇಕು. ಸೋಮದೇವನ 'ಯಶಸ್ತಿಲಕವು ಹದಿನಾರರ ಯುವಕ ಹನ್ನೆರಡರ ಯುವತಿಯ ಪ್ರೇಮವು ಸ್ವರ್ಗ ಸದೃಶವೆಂದು ವರ್ಣಿಸುತ್ತದೆ. ಸಾಮಾನ್ಯವಾಗಿ ಹರಿಹರನ ಕಾಲಾವಧಿಯಲ್ಲಿ ಬಾಲ್ಯ ವಿವಾಹವು ಸಹಜ ಪದ್ಧತಿಯಾಗಿತ್ತು.

ಪ್ರಾಚೀನ ಕಾಲದಿಂದ ಒಳಸಂಬಂಧಗಳ ಮದುವೆ ನಿರಂತರವಾಗಿ ಬೆಳೆದು ಬಂದಿದೆ. ಸಂಬಂಧಿಗಳ ನಡುವಿನ ಸಾಮರಸ್ಯ ಹೆಚ್ಚಿಸುವ ಮತ್ತು ಕಂದಕಗಳನ್ನು ಮುಚ್ಚುವ ಉದ್ದೇಶಗಳಿಂದ ಈ ಮದುವೆಗಳು ಉಳಿದುಕೊಂಡು ಬಂದಿವೆ. ತವರುಮನೆಯ ಬಾಂಧವ್ಯ ಪ್ರೀತಿಯನ್ನು ನಿರಂತರ ಉಳಿಸುವುದಕ್ಕಾಗಿ ಹೆಣ್ಣು ಮಕ್ಕಳು ಹಾತೊರೆಯುವುದು, ಇಂಥ ಮದುವೆಗಳು ಮುಖ್ಯ ಕಾರಣಗಳಲ್ಲಿ ಒಂದು. ವೈಜಕವ್ವೆಯ ರಗಳೆಯಲ್ಲಿ ಸೋದರತ್ತೆ ತನ್ನ ಮಗನಿಗಾಗಿ ಅಣ್ಣನ ಬಳಿ ಹೆಣ್ಣು ಕೇಳುವ ಸಂದರ್ಭ ಬಂದಿದೆ. ಈ ಒಳ ಸಂಬಂಧದ ಮದುವೆಯನ್ನು ಅವರ ದೇವತಾರಾಧನೆಯನ್ನು ಮೀರಿ ಕೆಲಸ ಮಾಡುತ್ತಿದ್ದವು. ಉದಾ: ವೈಜಕವ್ವೆಯ ತಂದೆಯದು ಶಿವಭಕ್ತಿ ಪರಿಸರ, ವೈಜಕವ್ವೆ ಸೋದರತ್ತೆಯದು ಜೈನ ಪರಿಸರವಾಗಿತ್ತು. ಒಂದು ಕಾಲಕ್ಕೆ ಆ ಅಣ್ಣ, ತಂಗಿ ಜೈನ ಪರಂಪರೆಯಲ್ಲಿದ್ದವರೇ, ಮುಂದೆ ಅಣ್ಣ ಶಿವಮತದ ಒಕ್ಕಲಾಗಿರಬೇಕು. ತಂಗಿಯನ್ನು ಈ ಮೊದಲೇ ಜೈನ ಕುಟುಂಬಕ್ಕೆ ಕೊಟ್ಟಿದ್ದರಿಂದ ಅವಳೊಡನೆ ಈಗ ಸಂಬಂಧ ಬೆಳೆಸಲು ಹಿಂದೇಟು ಹಾಕುವ ಚಿತ್ರಣ ಈ ರಗಳೆಯಲ್ಲಿ ಬಂದಿದೆ. ಮುಂದೆ ರಕ್ತ ಸಂಬಂಧವನ್ನು ಬಿಟ್ಟು ಕೊಡಲಾರದ್ದಕ್ಕೆ ಅವರವರ ಬಲವಂತಕ್ಕೆ ಈ ಎರಡು ಒಕ್ಕಲಿನವರು ಬೀಗತನ ಮಾಡಿಕೊಂಡ ಪ್ರಸಂಗ ಬರುತ್ತದೆ. ಇಂತಹ ಮದುವೆಯನ್ನು ಭಕ್ತ-ಭವಿ ಸಂಬಂಧವೆಂದು ಕರೆಯುತ್ತಿದ್ದರು.

ಕ್ಷತ್ರಿಯ ವರ್ಣಿಯರಿಗೆ ಕುಲ, ಜಾತಿಗಳ ನಂಟು ತೀರ ಕಡಿಮೆ, ತಮ್ಮ ಮನಸೊಪ್ಪಿದ ಕನ್ಯೆಯನ್ನು ಮದುವೆಯಾಗುವುದು ಸಹಜವಾಗಿತ್ತು. ರಾಜಮಹಾರಾಜರು ತಮಗೆ ಬೇಕೆನಿಸಿದ ಕನ್ಯೆಯನ್ನು ನಯದಿಂದ, ಸೊಕ್ಕಿನಿಂದ, ಬಲವಂತದಿಂದ ಮದುವೆಯಾಗುತ್ತಿದ್ದರು. ತೃಪ್ತಿಯೋ, ಅತೃಪ್ತಿಯೋ ಸ್ತ್ರೀಯು ಅಬಲೆಯಾಗಿ ರಾಜ-ಮಹಾರಾಜರ ಸಂಗಾತಿಯಾಗಿರಬೇಕಾಗುತ್ತಿತ್ತು. ಅರಸು ಕೌಶಿಕನು ಮಹಾದೇವಿಯನ್ನು ಮದುವೆಯಾದುದು ಇಂಥ ಬಲವಂತದಿಂದಲೇ, ಸಂಪತ್ತಿನಾಸೆ ತೋರಿಸಿ ಅದಕ್ಕೆ ಮಣಿಯದೆ ಹೋದರೆ ದಬ್ಬಾಳಿಕೆಯಿಂದ ರಾಜಾಜ್ಞೆಹೇರಿ ಮದುವೆಯಾಗುವ ಕೌಶಿಕನ ಚಿತ್ರಣ ಮಹಾದೇವಿ ರಗಳೆಯಲ್ಲಿ ಬಂದಿದೆ,"[೫೦] ತಾಯ್ತಂದೆಯರು ಹಣದಾಸೆಗಾಗಿಯೂ ತಮ್ಮ ಮಗಳನ್ನು ಬಲವಂತದಿಂದ ಮದುವೆಗೆ ಒಪ್ಪಿಸುತ್ತಿದ್ದರೆಂದು ಈ ರಗಳೆ ಧ್ವನಿಸುತ್ತದೆ. ಕನ್ಯೆ

ಶಿವಭಕ್ತಳಾಗಿದ್ದು, ಭವಿಯೊಡನೆ ಬೆರಸಿದಲ್ಕೆ ಅರ್ಪಣೆ"?[೫೨] ಎಂಬ ಕಳವಳ ವ್ಯಕ್ತಪಡಿಸಿದರೆ ಅದಕ್ಕೆ ಕರುಣೆ-ದೋರುವವರೂ ಇದ್ದಿರಲಿಲ್ಲ. ಮಹಾದೇವಿ, ಹೇರೂರು ಹೆಣ್ಣು, ಪದ್ಮಾವತಿ, ವೈಜಕವ್ವೆಯರು ಭಕ್ತ-ಭವಿ ಸಂಬಂಧದ ಉದಾಹರಣೆಯಾಗಿ ಕಂಡು ಬರುತ್ತಾರೆ. ಇವು ಬಲವಂತದ ಮದುವೆ ಹಳೆ ರಕ್ತ ಸಂಬಂಧದ ಮದುವೆ; ಅಂತರ್ ಮತೀಯ ಭಕ್ತ-ಭವಿ ಮದುವೆಗಳ ಉಲ್ಲೇಖಗಳಾಗಿವೆ.

ಅಳಿಯತನದ ಪದ್ಧತಿಗಳು ಇದ್ದವಿವರ ಪ್ರಭುದೇವರ ರಗಳೆ ಮೂಲಕ ತಿಳಿದು ಬರುತ್ತದೆ. ಅಲ್ಲಮಪ್ರಭುವು ಕಾಮಲತೆಯೊಂದಿಗೆ ಅವಳ ಮನೆಯಲ್ಲಿಯೇ ಉಳಿದುಕೊಂಡಿದ್ದನೆಂದು ರಗಳೆ ತಿಳಿಸುತ್ತದೆ.[೫೩] ಸಿದ್ಧ ದಂಡಾಧಿಪನು ಅಪುತ್ರಕನಾಗಿ ಸ್ವರ್ಗಸ್ಥನಾದಾಗ ಬಸವಣ್ಣನೇ ಸರ್ವಸ್ವವಾಗಿ ಅವನ ಮನೆಯಲ್ಲಿ ಉಳಿಯುತ್ತಾನೆ."[೫೪] ಇದು ಅಳಿಯತನವನ್ನು ಸೂಚಿಸದಿದ್ದರೂ ಅಪುತ್ರಕ'ನೆಂಬ ಮಾತು 'ಅಳಿಯತನ' ಪದ್ಧತಿಗೆ ಪುಷ್ಟಿ ನೀಡುತ್ತದೆ. ಏಕಪತ್ನಿ ವ್ರತಸ್ಥನೆನ್ನುವುದು ಪುರುಷನ ಶ್ರೇಷ್ಠತೆಗೆ ಕುರುಹಾಗಿದ್ದಿತು. ರಗಳೆಗಳಲ್ಲಿ ಅಂಥವರಲ್ಲದೆ ಬಹುವಲ್ಲಭೆಯರನ್ನಾಳುವವರೂ ಕಂಡು ಬರುತ್ತಾರೆ."[೫೫] ಕೋವೋರ ಬೊಮ್ಮಿತಂದೆಗೆ ಹನ್ನೆರಡು ಜನ ಮಡದಿಯರಿದ್ದರೆ ಬಸವಣ್ಣನಿಗೆ ಇಬ್ಬರು ಮಡದಿಯರಿದ್ದರು"[೫೬] ಹರಿಹರ ಸೂಚಿಸುವ ಬಸವಸತಿಯರು ಗಂಗಾದೇವಿ, ಮಾಯಿದೇವಿ, ಇವರಲ್ಲಿ ಮಾಯಿದೇವಿ ಹೆಸರು ಕಡಿಮೆಯಾಗಿ ನೀಲಲೋಚನೆ ಎಂಬ ಹೆಸರು ಯಾವಾಗಿನಿಂದ ಬಳಕೆಯಲ್ಲಿ ಬಂದಿದೆಯೋ ತಿಳಿಯದು.

ಮದುವೆ ಸಂದರ್ಭದಲ್ಲಿ ಹೆಂಡತಿಯ ಹೆಸರನ್ನು ಬದಲಿಸುತ್ತಿದ್ದರೆಂಬುದಕ್ಕೆ ಇದು ಉದಾಹರಣೆಯಾಗಬಹುದು. ಅವಳ ಬಿಜ್ಜಳನ ತಂಗಿ ಇಲ್ಲವೆ ಸಾಕು ತಂಗಿಯೆಂದು ಕಾವ್ಯಗಳಿಂದ ತಿಳಿದು ಬರುತ್ತದೆ. ಕುಲಜಾತಿಗಳ ಅನ್ಯಾಯ ಹತ್ತಿಕ್ಕಲು ಬಸವಣ್ಣ ಅನ್ಯಕುಲದವಳನ್ನು ಮದುವೆಯಾಗಿರಬೇಕೆಂದು ಊಹಿಸಲು ಸಾಧ್ಯವಿದೆ. ಉನ್ನತ ಸ್ಥಾನದಲ್ಲಿದ್ದ ಬಸವಣ್ಣ ಅನ್ಯಮತೀಯ ಶಿವಭಕ್ತಳನ್ನು ಮದುವೆಯಾಗುವುದರ ಮೂಲಕ ಅಂತರ್ ಜಾತಿಯ ವಿವಾಹಗಳಿಗೆ ಮೊದಲ ಆದರ್ಶನಾಗಿರಬೇಕೆಂಬ ಅಭಿಪ್ರಾಯವನ್ನು ಡಾ॥ ಎಂ.ಎಂ.ಕಲಬುರ್ಗಿಯವರು ವ್ಯಕ್ತಪಡಿಸುತ್ತಾರೆ. ಸತಿಪತಿಗಳೊಂದಾದ ಭಕ್ತಿ ದಾಂಪತ್ಯ ಜೀವನದ ಮಾಧುರ್ಯಕ್ಕೆ ಮೆರಗು ನೀಡುವುದೆಂಬ ವಚನಕಾರರ ವ್ಯಾಖ್ಯಾನದಂತೆ ಹರಿಹರನ ಕಾಲದ ಶಿವಭಕ್ತರಿದ್ದರೆಂಬುದನ್ನು ಅನೇಕ ರಗಳೆಗಳು ತಿಳಿಸುವುದನ್ನು ಗಮನಿಸಬೇಕು. ವರದಕ್ಷಿಣೆಯ ಉಲ್ಲೇಖಗಳು ರಗಳೆಗಳಲ್ಲಿ ಕಂಡುಬರುವುದಿಲ್ಲ. ವರನಿಗೆ ಸಾಕಷ್ಟು ಸಂಪತ್ತನ್ನು ಖುಷಿಯಿಂದ ನೀಡಿದ ವಿವರಗಳು ಬಂದಿವೆ. ಮಗಳನ್ನು ಕೊಟ್ಟು ರಾಜ ಮಹಾರಾಜರಾದವರು ಆನೆ, ಕುದುರೆ ಬಳುವಳಿ ನೀಡಿ ವೈಭವದ ಮದುವೆ ಮಾಡಿದ ವಿವರ ರೇವಣಸಿದ್ದೇಶ್ವರ ರಗಳೆಯಲ್ಲಿ ನಿರೂಪಗೊಂಡಿದೆ"[೫೭] ತೆಲ್ಲಂಟಿ, ಭಂಡಾರ ನೀಡಿದ ವಿವರ ಹರಿಹರ

ಪೂರ್ವದ ಶಾಸನಗಳಲ್ಲಿ ಬಂದಿರುವುದನ್ನು ಇಲ್ಲಿ ನೆನೆಯಬೇಕು."[೨೮] ಕನ್ಯೆಯನ್ನು ಪಡೆಯಲು ಕನ್ಯೆಯ ತಾಯೆಂತ್ತದೆಗೆ ಹೇರಳವಾಗಿ ಹೊನ್ನು, ಆಭರಣ, ರತ್ನಾದಿಗಳನ್ನು ನೀಡಿದ ವಿವರ ಮಹಾದೇವಿ ರಗಳೆಯಲ್ಲಿ ಬಂದಿದೆ"[೨೯] ಚಿರಪರಿಚಿತ 'ತೆರವು' ಪದ್ಧತಿಯ ಉಲ್ಲೇಖ ರಗಳೆಗಳಲ್ಲಿ ದೊರೆಯುವುದಿಲ್ಲ, ದುರ್ಲಭ ಕನ್ಯೆಯನ್ನು ಪಡೆಯುವುದಕ್ಕಾಗಿ ಸಂಪತ್ತನ್ನು ಸುರಿದಿದ್ದೇ ತೆರವು (ತೆರ, ತೆರಿಗೆ, ತೆರಕಾರ) ಪದ್ಧತಿಯಾಗಿ ಉಳಿದು ಬಂದಿರಬೇಕು.

### ಧರ್ಮ ಸೂತ್ರದ ಪ್ರಕಾರ ಮದುವೆ

ಈ ಪದ್ಧತಿಯನ್ವಯ

೧. ವಾಗ್ದಾನ

೨. ವರುವರಣ

೩. ಕನ್ಯಾದಾನ

೪. ವಿವಾಹ ಹೋಮ

೫. ಪಾಣಿಗ್ರಹಣ

೬. ಹೃದಯಸ್ಪರ್ಶ

೭. ಸಪ್ತಪದಿ

೮. ಆತ್ಮಶೋಷಣ

೯. ಸೂರ್ಯಾವಲೋಕನ

೧೦. ಧೃವದರ್ಶನ

೧೧. ತ್ರಿರಾತ್ರವೃತ

೧೨. ಚತುರ್ಥಿ ಕರ್ಮ

ಎಂಬ ಪದ್ಧತಿಗಳನ್ನೊಳಗೊಂಡ ವಿವರವನ್ನು ಡಾ.ಪಿ.ವಿ. ನಾರಾಯಣ ಅವರು ನೀಡುತ್ತಾರೆ."[೩೦]

ಇದರಲ್ಲಿ ಹರಿಹರನು ಚತುರ್ಥಿ ಕರ್ಮವನ್ನು ಹೇರೂರು ಹೆಣ್ಣಿನ ರಗಳೆ ಮೊದಲಾದವುಗಳಲ್ಲಿ ಉಲ್ಲೇಖಿಸಿದುದು ಕಂಡು ಬರುತ್ತದೆ. ಜೋಯಿಸರಂಥ ಪುರೋಹಿತ ವರ್ಗದವರು ತಿಥಿ, ಮುಹೂರ್ತ ಹೇಳಿ ಮದುವೆ ಮಾಡಿಸುತ್ತಿದ್ದರು. ಅದಕ್ಕಾಗಿ ಅವರು ದಕ್ಷಿಣೆಯನ್ನು ಪಡೆಯುತ್ತಿದ್ದರು.

ಬಂದ ಜೋಯಿಸಂಗೆ ದಕ್ಷಿಣೆಗಳನ್ನಿತ್ತು ಮದುವೆ ಮಾಡಿಸುತ್ತಿದ್ದರು ಎಂದು ವೈಜಕವ್ವೆಯ ರಗಳೆ ಹೇಳುತ್ತದೆ"[೬೧] ಅಂತರ್ ಮತೀಯ ಮದುವೆ ವಿಷಯಕ್ಕೂ ಈ ತಿಥಿ ಮುಹೂರ್ತಗಳು ಅನ್ವಯವಾಗುತ್ತಿದ್ದವು. ಕನ್ಯೆಯ ಮಾತಾಪಿತರು ವರನಲ್ಲಿಗೆ ಹೋಗಿ (ಇಂದಿನ ಬ್ರಾಹ್ಮಣ ಪರಂಪರೆಯಂತೆ) ತಮ್ಮ ಕನ್ಯೆಯರ ವಿವಾಹ ನಿಶ್ಚಯಿಸಿದ ವಿವರ ರಗಳೆಗಳಲ್ಲಿ ಸಿಗುವುದಿಲ್ಲ. ಇದಕ್ಕೆ ಪ್ರತಿಯಾಗಿ 'ಗಿರಿಜಾ ಕಲ್ಯಾಣ' ಕೃತಿಯಲ್ಲಿ ಗಿರಿರಾಜನಲ್ಲಿಗೆ ಹೋಗಿ ಹೆಣ್ಣು ಕೇಳುವ ಪ್ರಸಂಗವಿರುವುದನ್ನು ನೆನಪಿಸಿಕೊಳ್ಳಬೇಕು. ವೈಜಕವ್ವೆಯ ಪ್ರಸಂಗವು ಇದೇ ಮಾದರಿಯದು. ವಚನಕಾರರು ಶುಭಲಗ್ನ ಮುಹೂರ್ತಾಧಿಗಳನ್ನು ತಿರಸ್ಕರಿಸಿದ್ದರೆ ಹರಿಹರನಲ್ಲಿ ಅವು ಸ್ಥಿರಗೊಂಡಿದ್ದನ್ನು ಕಾಣುತ್ತೇವೆ.

ಲಿಂಗದೀಕ್ಷೆಯ ಸಮಾರಂಭದ ಆಚಾರ, ವಿಧಿಗಳನ್ನು ಹರಿಹರನು ವಿವಾಹ ವಿಧಿ ರೂಪಕದಲ್ಲಿ ವರ್ಣಿಸಿದುದನ್ನು ಗಮನಿಸಿದರೆ ಅಲ್ಲಿ ಸೂಚಿತವಾದ ತೆರೆ ಹಿಡಿಯುವುದು; ಜೀರಗೆ-ಬೆಲ್ಲ ನೀಡುವುದು- ಇವು ಶೈವ ಸಂಪ್ರದಾಯದ ವಿವಾಹವಾಗಿರುವುದನ್ನು ತಿಳಿಸುತ್ತವೆ"[೬೨] ಗಿರಿಜಾ ಕಲ್ಯಾಣದಲ್ಲಿ ಶಿವ-ಪಾರ್ವತಿಯ ಮದುವೆ ಸಂದರ್ಭವೂ ಇದೇ ಬಗೆಯಲ್ಲಿದೆ. ಮಹಾದೇವಿ- ಕೌಶಿಕರ ಮದುವೆಯ ವಿವರವೂ ಇದೇ ತೆರನಾಗಿದೆ. ಈಗಲೂ ವೀರಶೈವೇತರ ಮದುವೆಗಳಲ್ಲಿ ತೆರ ಹಿಡಿಯುವ, ಜೀರಗೆ-ಬೆಲ್ಲೆ ಸುರಿಯುವ ಪದ್ಧತಿ ಕಾಣದೊರೆಯುತ್ತದೆ. ಆದರೆ, ಲಿಂಗವಂತರ ಮದುವೆಗಳಲ್ಲಿ ಈಗ ಇವು ಕಂಡುಬರುವುದಿಲ್ಲ.

**ವಿವಾಹ ನಿಶ್ಚಯ ಕಾರ್ಯ**

ಇದು ಪ್ರಾಚೀನ ಕಾಲದಿಂದ ಉಳಿದು ಬಂದ ಪದ್ಧತಿಯಾಗಿದೆ. ಪ್ರೇಮದ ಸಂಕೇತವಾಗಿ, ಮದುವೆ ನಿಶ್ಚಯದ ಗುರುತಾಗಿ ವಿಶೇಷವಾಗಿ ಗಾಂಧರ್ವ ವಿವಾಹದ ಗುರುತಿಗಾಗಿ ಉಂಗುರವನ್ನು ಮದುವೆಗೆ ನೀಡುವುದು ಪ್ರಾಚೀನ ಕಾಲದ ವೈಶಿಷ್ಟ್ಯವಾಗಿತ್ತು. ದುಷ್ಯಂತ ಶಕುಂತಲೆಯರ ಗಾಂಧರ್ವ ವಿವಾಹ ಉಂಗುರದಿಂದಲೇ ಆರಂಭವಾಗಿ, ಉಂಗುರದಿಂದಲೇ ದುರಂತಕ್ಕೆ ತಿರುಗಿ, ಕೊನೆಗೆ ಉಂಗುರದಿಂದಲೇ ದಂಪತಿಗಳೊಂದಾದ ಕತೆ ಚಿರಪರಿಚಿತವಿದೆ. ಭಾವಿ ಪತ್ನಿಗೆ ವರನು ಉಂಗುರವಿಟ್ಟು ವಿವಾಹವನ್ನು ಗಟ್ಟಿಗೊಳಿಸುವ ಕ್ರಿಯೆ ಈ ಉಂಗುರುಡಿಕೆಯಲ್ಲಿದೆ. ಇದನ್ನು ಈಗ ನಿಶ್ಚಯ ಕಾರ್ಯ ಎಂದು ಕರೆಯುತ್ತಾರೆ. ವೀಳ್ಯ, ಹೂವೀಳ್ಯ, ಹೂದಂಬುಲವೆಂದೂ ಕರೆಯುತ್ತಾರೆ"[೬೩]

ಕೌಶಿಕನೊಡನೆ ಮಹಾದೇವಿಯ ಮದುವೆ ನಿಶ್ಚಯಗೊಂಡಾಗ ಈ ಉಂಗುರುಡಿಕೆಯ ಪ್ರಸ್ತಾಪವನ್ನು ಹರಿಹರ ಮಾಡಿದ್ದಾನೆ. ಉಂಗುರುಡಿಕೆಗೆ ಭವಿಗಳೇಕೆ ಬಂದರೆಂದು ಮಹಾದೇವಿ ಸಿಡಿಮಿಡಿಗೊಂಡಳೆಂದು ಕವಿ ಬರೆಯುತ್ತಾನೆ."[೬೪] ಮದುವೆ ವಿಷಯದಲ್ಲಿ ಈ ಉಂಗುರದ ಮಹತ್ವ ಸಾಕಷ್ಟಿತ್ತೆಂಬುದು ಇಲ್ಲಿ ಮನವರಿಕೆಯಾಗುತ್ತದೆ. ಮದುವೆಗೆ ನೀಡುವ ಈ ಉಂಗುರವನ್ನು ನಿರಾಕರಿಸುವ ಮೂಲಕ ವಿವಾಹವು ನಿಂತು ಹೋಗುತ್ತಿತ್ತು. ಹಿರಿಯರೊಪ್ಪಿದ್ದರೂ ವಧುವಿಗೆ 'ಉಂಗುರುಡಿಕೆ' ತಿರಸ್ಕರಿಸುವ ಸ್ವಾತಂತ್ರ್ಯವಿರುವುದನ್ನು ಗಮನಿಸಬೇಕು. ಮಹಾದೇವಿ ಉಂಗುರುಡಿಕೆಗೆ ಭವಿಗಳು ಬಂದುದಕ್ಕೆ ಸಿಡಿಮಿಡಿಗೊಂಡಳೇ ಹೊರತು 'ಉಂಗುರುಡಿಕೆ'ಯ ಆಚರಣೆಗಲ್ಲ.

ವಧು ಮತ್ತು ವರನ ಮಧ್ಯೆ ಹಿಡಿದಿರುವ ಪರದೆಯೋ 'ತೆರೆ' ಮುಹೂರ್ತಿಕರು ಸೂಚಿಸಿದ 'ಲಗ್ನ' ಸಮಯಕ್ಕೆ 'ಪುಣ್ಯಾವಹ' ಎಂಬ ಮಂತ್ರೋಚ್ಚಾರಣೆಯಾಗುತ್ತಿತ್ತು. ಈ ಮಂತ್ರದೊಂದಿಗೆ ವಧುವರನ ಮಧ್ಯದ ತೆರೆ ಸರಿಯುತ್ತಿತ್ತು."[೬೫] ಈ ಸಮಯಕ್ಕೆ ಮೃದಂಗ ಪಟದಂತ ಮಂಗಳವಾದ್ಯಗಳು ನಾದಗೈಯ್ಯುತ್ತಿದ್ದವು. ತೆರೆ ಸರಿದೊಡನೆ ಮದುಮಕ್ಕಳು ಜೀರಿಗೆ–ಬೆಲ್ಲಗಳನ್ನು ಪರಸ್ಪರ ತಲೆಯ ಮೇಲೆ ಹಾಕುತ್ತಿದ್ದರು."[೬೬] ಲಗ್ನ ಮುಹೂರ್ತ ಗುರುತಿಸಲು 'ಘಳಿಗೆ ಬಟ್ಟಲು'ಗಳಿದ್ದವು.

ಘಳಿಗೆ ಬಟ್ಟಲು ಸೂಚಿಸುವ ಮುಹೂರ್ತಕ್ಕನುಗುಣವಾಗಿ ಅಕ್ಷತೆಗಳು ಹಾಕಲ್ಪಡುತ್ತಿದ್ದವು. ಮೂಹೂರ್ತಿಕರು ಘಳಿಗೆ ಬಟ್ಟಲುಗಳನ್ನು ತಮ್ಮ ಬಳಿಯೇ ಇಟ್ಟುಕೊಂಡಿರುತ್ತಿದ್ದರು."[೬೭] ವಿವಾಹ ನಿಶ್ಚಯಕ್ಕೂ ಚಂದ್ರಬಲ ತಾರಾಬಲಗಳಂಥ ಗ್ರಹಕೂಟ ರಾಶಿಗಳನ್ನು ನೋಡಲು ಘಳಿಗೆ ಬಟ್ಟಲು ಬೇಕಾಗುತ್ತಿದ್ದವು. ತಾಳಿಯ ಕಲ್ಪನೆಯನ್ನು ಹರಿಹರ ಕೊಡುತ್ತಾನೆ, ಪಂಪನು ಆಯ್ಕೆ ಮಿನುಗು'[೬೮] ಎಂದರೆ ಹರಿಹರನು ಆಯ್ಕೆದಾಳಿ ಎನ್ನುತ್ತಾನೆ. ಆಯ್ಕೆ ದಾಳಿ ಮುತ್ತಿನೊತ್ತರಕ್ಕೆ ಬೆಳಗನೀಯದಿಯೋ'[೬೯] ಎಂಬ ಮಾತು ಚಿನ್ನ ಹಾಗೂ ಮುತ್ತುಗಳಿಂದ ಕೂಡಿದ ಹಾರ ಇಲ್ಲವೆ ಮದುವೆಯ ಮಂಗಳ ಸೂತ್ರವನ್ನು ಸೂಚಿಸಿರಬಹುದು. ಕಿವಿಯಲ್ಲಿ ಧರಿಸುವ 'ಮುತ್ತಿನೋಲೆ"[೭೦] ಯೂ ಇಲ್ಲಿ ಉಲ್ಲೇಖವಾಗಿದೆ.

### ಅಂತ್ಯ ಸಂಸ್ಕಾರ

ಈ ದೇಶದ ಪರಂಪರೆಯಲ್ಲಿ ಸತ್ತ ವ್ಯಕ್ತಿಯನ್ನು ಹೂಳುವುದು, ನೀರಿನಲ್ಲಿ ಎಸೆಯುವುದು, ಸುಡುವುದು ಪ್ರಚಲಿತವಿದ್ದ ಅಂತ್ಯಸಂಸ್ಕಾರದ ಪ್ರಕಾರಗಳಾಗಿವೆ. ಕೈಲಾಸದಿಂದ ಬಂದ ಜೀವ ಭೂಮಿಯಲ್ಲಿ ಬೆಳೆದು ಕೊನೆಗೆ ಕೈಲಾಸ ಸೇರಿದೆ ಎಂದು ಜನನ , ಮರಣವನ್ನು ಶಿವಭಕ್ತರು ಭಾವಿಸುತ್ತಾರೆ. ಮಣ್ಣಿನ ಕಾಯ ಮಣ್ಣಿಗೆ ಸೇರಿತು; ಪಂಚಭೂತಗಳ ಕಾಯ ಪಂಚಭೂತಗಳಲ್ಲಿ

ಹಂಚಿ ಹೋಯಿತೆಂದು ವ್ಯಾಖ್ಯಾನಿಸುತ್ತಾರೆ. ಹರಿಹರ ಕವಿಯ 'ಪುಷ್ಪಕ ವಿಮಾನ' ಕಲ್ಪನೆ ಕೊಡುತ್ತಾನೆ. ಪುಷ್ಪಕ ವಿಮಾನವೇರಿ ಕೈಲಾಸಕ್ಕೆ ತೆರಳುವ ಹರಿಹರನ ಶಿವಭಕ್ತರ ಉದಾಹರಣೆ ನೋಡಿದರೆ ಶವವನ್ನು ಸಾಗಿಸುವ ಸಾಧನೋಪಕರಣದ ನೆನಪು ಬರುತ್ತದೆ.

ವಚನಕಾರರು ಈ ಸಿದ್ದಿಗೆ ಅಥವಾ ಚಟ್ಟಕ್ಕೆ 'ವಿಮಾನ'ವೆಂದು 'ಮಾಡ'ವೆಂದೂ ಕರೆಯುವ ಮಾಹಿತಿಯನ್ನು ಡಾ.ಪಿ.ವಿ. ನಾರಾಯಣರು ನೀಡುತ್ತಾರೆ."[೨೦] ಹರಿಹರ ಕವಿಯ ವಿಮಾನವು ಪುಷ್ಪಗಳಿಂದಾವೃತವೆಂಬುದು ಸ್ಪಷ್ಟವಿದೆ. "ನಡೆಬಸವ ಕೈಲಾಸಗಿರಿಗೆ ಪುಷ್ಪಕದೊಳು"[೨೧] ಎಂದು ಹರಿಹರ ಹೇಳಿರುವನಾದರೂ ಪುಷ್ಪಕ ವಿಮಾನದ ಸ್ವರೂಪವನ್ನು ವಿವರಿಸುವುದಿಲ್ಲ. ಸುಡುವ ಸಂಸ್ಕಾರದ ಬಗ್ಗೆ ವಚನಕಾರರಲ್ಲಿ ಒಲವಿರಲಿಲ್ಲ. ಪಂಚಾಕ್ಷರಿಯಿಂದ ಸುಟ್ಟು ಹೋದವರನ್ನು ಪುನಃ ಸುಡುವುದೇಕೆಂದು ಪ್ರಶ್ನಿಸಿ, ಅವರು ಹೂಳುವ ಕ್ರಿಯೆಗೆ ಹೆಚ್ಚು ಪ್ರಚಾರ ನೀಡಿದ್ದಾರೆನಿಸುತ್ತದೆ."[೨೨] ಶವದ ತಲೆಯು ಸಿಡಿಯುವುದನ್ನು ಹರಿಹರನು ಕಪಾಲ ಮೋಕ್ಷವೆಂದು ಕರೆದಿದ್ದಾನೆ. ಇದು ಸುಡುವ ಸಂಸ್ಕಾರವನ್ನು"[೨೩] ಬ್ರಾಹ್ಮಣ ಪರಂಪರೆಯನ್ನು ಸೂಚಿಸುತ್ತದೆ.

ವಚನಕಾರರಲ್ಲಿ ದೊರೆಯುವ ವಿಭೂತಿ ವೀಳ್ಯೆಯ ಆಚರಣೆಯ ವಿವರ"[೨೪] ಹರಿಹರನ ರಗಳೆಯಲ್ಲಿ ಇಲ್ಲ. ಜೇಷ್ಠ ಪುತ್ರನಿಂದ ಶವಸಂಸ್ಕಾರ ಮಾಡುವುದು, ಹಿಂದಿನಿಂದ ಬೆಳೆದು ಬಂದ ಪದ್ಧತಿಯಾಗಿದೆ. ಸ್ತ್ರೀಯರು ಶವಸಂಸ್ಕಾರ ಮಾಡಿದ್ದು, ಕೇಳಬಾರದ ಸಂಗತಿ. ಆದರೆ ತಂದೆ ಸತ್ತಾಗ ತಂದೆಯ ಶವವನ್ನು ತಾನೇ ಸಂಸ್ಕಾರ ಮಾಡಿದ ನಿಂಬವ್ವೆಯು ವೃತ್ತಾಂತವನ್ನು ಹರಿಹರ ನಿರೂಪಿಸುತ್ತಾನೆ. ಇದು ಹರಿಹರನ ಕಾಲಾವಧಿಯಲ್ಲಿ ನಡೆದ ಅಚ್ಚರಿಯ ಸಂಗತಿಯೆನಿಸುತ್ತದೆ. ಸ್ತ್ರೀಯನ್ನು ಕೀಳಾಗಿ ಕಾಣುತ್ತಲಿದ್ದ ಕಾಲಕ್ಕೆ ಒಡ್ಡಿದ ಪ್ರತಿಭಟನೆಯಂತೆ ನಿಂಬವ್ವೆಯ ಈ ಸಂಗತಿ ಭಾಸವಾಗುತ್ತದೆ. 'ಮೂರ್ರೊಳು' 'ಶ್ರದ್ಧ' ದಾಚರಣೆ, ದಿನ ಮಾಡುವುದು' ಮುಂತಾದ ಕ್ರಿಯೆಗಳು ಇಂದು ರೂಢಿಯಲ್ಲಿವೆ. ಪಂಚಭಕ್ಷಂ ವಾಯಸಂಗಿಕ್ಕುವ ಎಂಬ ಹೋಲಿಕೆ ರಗಳೆಯಲ್ಲಿ ಬಂದಿದೆ."[೨೫] ಇದು ಶ್ರಾದ್ಧದ ಸೂಚನೆಯೆನಿಸುತ್ತದೆ.

**ರಗಳೆಗಳಲ್ಲಿ ಮದುವೆ ಸಮಾರಂಭ**

ರಗಳೆಗಳಲ್ಲಿ ಮದುವೆ ಸಮಾರಂಭಗಳು ವೈಭವದಿಂದಲೇ ವರ್ಣಿಸಲ್ಪಟ್ಟಿವೆ. ವಿಸ್ತಾರವಾಗಿರುವ ವಿವಾಹ ಮಂಟಪಗಳಿರುತ್ತಿದ್ದವು."[೨೬] ಅವಕ್ಕೆ ತಳಿರು-ತೋರಣಗಳು ಅಲಂಕೃತವಾಗಿರುತ್ತಿದ್ದವು. ಸಂಪತ್ತು, ಸೌಂದರ್ಯದ ಪ್ರತೀಕವೆಂಬಂತೆ ಮದುವೆ ಮಂಟಪಗಳು ನವೀನ ಮಂಟಪಗಳಾಗಿದ್ದವೆನ್ನುತ್ತಾರೆ ಕವಿ"[೨೭] ಊರೆಲ್ಲ ಸಿಂಗಾರವಾಗಿ ಗೀತವಾದ್ಯ, ನೃತ್ಯಗಳು, ರಾಜಮಹಾರಾಜರ ಮದುವೆಯಂಥ

ಸಮಯದಲ್ಲಿ ಜರುಗುತ್ತಿದ್ದವು. ಸುವಾಸಿನಿಯರು, ಮುತ್ತೈದೆಯರು, ನಂಟರು, ಬಂಧುಗಳು, ಕರಣಿಕರು, ಗಳಿಗೆ ಬಟ್ಟಲದ ಮುಹೂರ್ತಿಕರು, ಮಂಗಳ ಕಳಸಗಳು, ಕನ್ನಡಿಗಳಸ, ತಳಿರ್ಗ್ವಳಸ, ಮುಗ್ಧೆಯರು, ಉದ್ಯಮನಾಯಕರು, ವಿದಗ್ಧೆಯರು, ವಾರನಾರಿಯರು, ಶೃಂಗಾರ ಸಾಮಗ್ರಿ ಹೊತ್ತವರು, ಹಣ್ಣು ಹಂಪಲು ಹೊತ್ತವರು. ಇವರೆಲ್ಲ ಅರಸು ಕೌಶಿಕನ ಮದುವೆಗೆ ನೆರೆದಿದ್ದ ಚಿತ್ರಣ ರಗಳೆಯಲ್ಲಿದೆ. ಇಂಥ ಜನಸಮುದಾಯದಲ್ಲಿ ಮುತ್ತೈದೆಯರು ಮದುವೆಯಾದ ವಿವರ ಮಹಾದೇವೀರಗಳೆಯಲ್ಲಿ ಬಂದಿದೆ."[೭೮] ವಧುವರರು ಅರಿಷಿಣ ಪೂಸಿಕೊಂಡಿದ್ದುದು, ಹಳದಿವಸ್ತ್ರ ಹುಟ್ಟಿದುದು. ಇಂದಿಗೂ ಆ ಸಂಪ್ರದಾಯ ಉಳಿದುಕೊಂಡು ಬಂದಿದೆ.

ಮದುವೆ ಸಂಭ್ರಮದ ತುಂಬ ಹರಿಹರ ನೀಡುವ ಸ್ತ್ರೀ ಸಮುದಾಯ ಲಕ್ಷಿಸಿಸಬೇಕು. ಆರತಿ ಎತ್ತುವ ಸುವಾಸಿನಿಯರು, ಮಂಗಳ ಕಳಸ ಹಿಡಿದ ಸುವಾಸಿನಿಯರು ಇವರು ಮದುವೆಯಾದ ಸುಮಂಗಲೆಯರೇ ? ಸ್ಪಷ್ಟವಿಲ್ಲ ಇವರನ್ನು ಬಿಟ್ಟರೆ ಮುತ್ತೈದೆಯರು, ಮಧ್ಯಮ ನಾಯಕಿಯರು, ವಿದಗ್ಧೆಯರು, ವಾರನಾರಿಯರು, ಮುತ್ತೈದೆಯರು ಕಂಡು ಬರುತ್ತಿದ್ದು, ಇವರೆಲ್ಲ ಸಾಮಾಜಿಕವಾಗಿ ಬೇರೆ ಬೇರೆ ಸ್ಥಾನಮಾನಗಳನ್ನು ಹೊಂದಿದವರಾಗಿರಬೇಕೆನಿಸುತ್ತದೆ. ಹೀಗೆ ತೆರೆ ಕಟ್ಟುವುದು, ತೆರೆ ಸೇರಿಸುವುದು, ಹೆಣ್ಣೋಹ ಜಲದೊಳಗೆ ಬೆರೆವಂತೆ ತಂದೆ ಕೈ ನೀರೆರೆವುದು; ಸುಮಂಗಲೆಯರು ಆರತಿ ಎತ್ತುವುದು, ನಿಬ್ಬಣಿಗರು ಉದುರುಗೊಳ್ಳುವುದು; ಹೋಮದ ಮಣಿಯ ಮೇಲೆ ಕುಳ್ಳಿರಿಸುವುದು; ಎಡಭಾಗದಲ್ಲಿ ಕನ್ಯೆ ಕುಳಿತು ಮದುವೆಯಾಗುವುದು ಇತ್ಯಾದಿ ಚಿತ್ರಣ ರಗಳೆಗಳಲ್ಲಿವೆ"[೭೯]

ಮದುವೆಗಳು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ನಡೆಯುತ್ತಿದ್ದವು. ಕೌಶಿಕ ರಾಜ ಮತ್ತು ಮಹಾದೇವಿಯ ಮದುವೆಯು ಮಹಾದೇವಿಯ ಮನೆಯಲ್ಲಿ ನಡೆದ ಸಂಭ್ರಮದ ನಿರೂಪಣೆ ರಗಳೆಯಲ್ಲಿದೆ"[೮೦] ಅಷ್ಟಲ್ಲದೆ ಮಹಾದೇವಿಯ ತಂದೆ–ತಾಯಿಗಳಿಗೆ ಕೌಶಿಕನು ಹೇರಳವಾದ ಕಾಣಿಕೆ ನೀಡುವುದನ್ನು ಗಮನಿಸಬೇಕು. ಇದು 'ತೆರವು ಸಂಪ್ರದಾಯ' ಪ್ರಚಲಿತವಿದ್ದುದನ್ನು ತಿಳಿಸಿಕೊಡುತ್ತದೆ. ಮದುವೆ ನಂತರವೂ ಹೆಣ್ಣಿನ ತಾಯ್ತಂದೆಗೆ ಉಡಲು ನೀಡಿ, ಹೊನ್ನು ಕೊಟ್ಟು ಹೆಂಡತಿಯನ್ನು ಗಂಡನು ಕರೆದುಕೊಂಡು ಬರುವ ಪದ್ಧತಿಯಿತ್ತು. ಸಾಮಾನ್ಯವಾಗಿ ಮೊದಲಸಲ ಗಂಡನ ಮನೆಗೆ ಬರುವ ಹೆಣ್ಣನ್ನು 'ಹೊಸ ಮೊದಲಗಿತ್ತಿ' ಎಂಬ ಪದದಿಂದ ಕರೆದಿದ್ದಾರೆ. ಇಂಥ ಹೊಸ ಮೊದಲಗಿತ್ತಿಯ ಪ್ರವೇಶಕ್ಕೂ ತಿಥಿ ಮುಹೂರ್ತ ನೋಡುವ ಸಂಪ್ರದಾಯ ಇಂದಿಗೂ ಉಳಿದು ಕೊಂಡು ಬಂದಿದೆ.

## ಶರಣರಲ್ಲಿ ದಾಸ–ದಾಸಿ–ತೊತ್ತು ಸಂಪ್ರದಾಯ

ರಾಜನಿಗೆ ಶರಣಾಗುವುದು, ದೇವರಿಗೆ ಶರಣಾಗುವುದು, ಒಡೆಯನಿಗೆ ಶರಣಾಗತನಾಗುವುದು, ಗುರುವಿಗೆ ಶರಣಾಗತನಾಗುವುದು; ಪತಿಗೆ ಶರಣಾಗತನಾಗುವುದು, ಇವೇ ಕಾಲಕ್ರಮದಲ್ಲಿ ಒಡೆಯ–ಸೇವಕ ವರ್ಗಕ್ಕೂ ಶರಣ, ದಾಸ, ದಾಸಿ, ತೊತ್ತುಗಳ ನಿರ್ಮಾಣಕ್ಕೂ ಕಾರಣವಾಗಿರಬೇಕು. ಮಹಾಭಾರತವು ದಾಸ, ಶಿಷ್ಯ, ಅನಾಥ ಹೆಣ್ಣು ಇವರಿಗೆ ರಕ್ಷಣೆ ಇಲ್ಲ; ಅವರು ಅಸ್ವತಂತ್ರರೆಂದೂ ಪರಾಧೀನರೆಂದೂ ಸಾರುತ್ತದೆ. ಅಭಿಮಾನಶೂನ್ಯತೆ, ಇವುಗಳ ಮುಖ್ಯ ಲಕ್ಷಣ, ಇವನ್ನು ಮೀರುವುದೇ ಯುದ್ಧ ಲಕ್ಷಣವಾಗಿತ್ತು. ಗೆದ್ದವನು ಶೂರನೆನಿಸಿ ಶ್ರೇಷ್ಠನೆಂದೂ ಸೋತವನು ಹೇಡಿಯೆನಿಸಿ ಕನಿಷ್ಠವೆಂದೂ ಪರಿಗಣಿತರಾಗುತ್ತಿದ್ದರು. ಹಾಗೆ ಗೆದ್ದವನು ಒಡೆಯನಾಗಿ, ಸೋತವನು ದಶ್ಯುವೆನಿಸಿ ಒಡೆಯನಿಗೆ ಗುಲಾಮನಾಗಿ ಬದುಕುವ ಅನಿವಾರ್ಯತೆ ಪ್ರಾಚೀನ ಜೀವನ ಪದ್ಧತಿಯೆನಿಸಿತ್ತು.

ಆರ್ಥಿಕ ಸಂಪನ್ನರು ಅರ್ಥಹೀನರನ್ನು ಗುಲಾಮರನ್ನಾಗಿಸುತ್ತಿದ್ದರು. ಡಾ.ಪಿ.ವಿ. ನಾರಾಯಣರು ಮನು ಮತ್ತು ನಾರದ ಸ್ಮೃತಿಯನ್ನು ಉಲ್ಲೇಖಿಸಿ ಹದಿನೈದು ಗುಲಾಮರ ಪ್ರಭೇದವನ್ನು ಹೇಳುತ್ತಾರೆ[೧೮] ವಿಶಾಲ ಅರ್ಥದಲ್ಲಿ, ಪ್ರಭುವರ್ಗವು ಭುಜಬಲದಿಂದ ಪ್ರಜಾಸಮೂಹವನ್ನು, ಪುರೋಹಿತ ವರ್ಗವು ಬುದ್ಧಿ ಬಲದಿಂದ ಭಕ್ತ ಸಮೂಹವನ್ನು, ಪುರುಷ ವರ್ಗವು ಪೌರುಷ ಬಲದಿಂದ ಸ್ತ್ರೀ ಸಮುದಾಯವನ್ನು ತಮ್ಮ ಅಡಿಯಾಳಾಗಿಸಿಕೊಂಡ ಶೋಷಣೆಯ ಮುಖಗಳು ಕಂಡುಬರುತ್ತವೆ ಎನ್ನಬೇಕು. ಈ ರೀತಿಯ ಶೋಷಣೆ, ಶರಣಾಗತಿ, ಗುಲಾಮತನ, ದುಡಿಮೆ ಇವುಗಳ ಚಕ್ರಬಂಧದಲ್ಲಿ ದಾಸ–ದಾಸಿ–ತೊತ್ತುಗಳ ವ್ಯಕ್ತಿತ್ವ ಸಿಲುಕಿರುತ್ತದೆ ಎಂಬುದು ಈ ವಿವೇಚನೆಯ ತಾತ್ಪರ್ಯ ಶರಣರು ಸೇವಾಮನೋಭಾವವನ್ನು ಲಿಂಗ ಜಂಗಮಕ್ಕೆ ಅನ್ವಯಿಸುವಾಗ ಸಂತೋಷದಿಂದ ಸ್ವೀಕರಿಸುತ್ತಾರೆ. ಸಾಮಾಜಿಕ ನೆಲೆಯಲ್ಲಿ ಮಾತ್ರ ಸಿಡಿದು ನಿಲ್ಲುತ್ತಾರೆ. ದಾಸಿಯರನ್ನು 'ತೊತ್ತು' ಎಂದೂ ದಾಸರನ್ನು 'ತೊಂಡ' ಎಂದೂ ಇವರು ಕರೆದಿದ್ದಾರೆ. ಕೆಳವರ್ಗದವರು ತನಗಿಂತ ಮೇಲೆಂದು ಸಮರ್ಥಿಸಲು ಬಸವಣ್ಣ ತಾನು ನಿಮ್ಮ ತೊತ್ತಿನ ಮಗನೆಂಬ ನಿರೂಪ ಮಾಡುತ್ತಾನೆ.

ಸಾಮಾಜಿಕವಾಗಿ ಶರಣರ ಭೃತ್ಯನಾಗಿ ಸೇವೆಗೈಯ್ಯುವ ಶಿವಭಕ್ತನು ತಾನು 'ಶರಣದೊತ್ತು'. ಎಂದು ರಗಳೆಯಲ್ಲಿ ಹೇಳಿಕೊಂಡಿದ್ದುಂಟು, ಶರಣರ ಬಂಟ, ಕಿಂಕರರ ಕಿಂಕರ, ಲೆಂಕರಲೆಂಕ, ಶರಣರ ತೊತ್ತು ಎನ್ನುವುದು ಗೌರವಾರ್ಹತೆ ಪಡೆಯುತ್ತದೆ. ಬಹುಶಃ ಯಾರಿಗೆ ತೊತ್ತಾಗಿರಬೇಕು ಎಂದು ಹರಿಹರ ಈ ಮೂಲಕ ಸೂಚಿಸಿ ಸಾಂಪ್ರದಾಯಿಕ ತೊತ್ತು ಪದ್ಧತಿಯನ್ನು ಖಂಡಿಸಿದಂತಿದೆ. ಇದಕ್ಕೆ ಸಮರ್ಥನೆಯೆಂಬಂತೆ ನಿಂಬವ್ವೆಯ ಉದಾಹರಣೆ ಇದೆ.

ಹರಿಹರನ ಕಾಲಾವಧಿಯಲ್ಲಿ ಮೇಲೆ ಸೂಚಿಸಿದ ಸೇವಕ ಪದ್ಧತಿಗಳೆಲ್ಲವೂ ಪ್ರಚಲಿತವಿದ್ದವು. ಶಿವಭಕ್ತ ಸಮುದಾಯ ಮಾತ್ರ ಹರಿಹರನ ಅಭಿಪ್ರಾಯದಂತೆ ಶಿವನಿಗೆ, ಶಿವಭಕ್ತಿಗೆ ಶರಣೆವನ್ನುತ್ತಿದ್ದರು. ನಂಬಿಯಕ್ಕನ ರಗಳೆ ವಿವರ ನೋಡಿದರೆ ಹರಿಹರನ ಕಾಲದಲ್ಲಿ ಸ್ತ್ರೀದೋತ್ತುಗಳ ಹೀನಯಸ್ಥಿತಿಯು ಕರುಣೆ ಹುಟ್ಟಿಸುತ್ತದೆ. ನಿಂಬವ್ವೆ ತೊತ್ತು ಸ್ತ್ರೀಯರ ಪ್ರತಿನಿಧಿಯಂತೆ ಕಂಡು ಬರುತ್ತಾಳೆ. ಅವಳ ರಗಳೆ ಸ್ತ್ರೀದೊತ್ತಿನ ಇತಿಹಾಸವನ್ನು ಸೂಚಿಸುವಂತಿದೆ."[೮೩] ಅಂದಿನ ಜನತೆ 'ತೊತ್ತೆ' ಎಂಬ ಬೈಗುಳನ್ನು ಬಳಸುತ್ತಿದ್ದರು. ಸಾಮಾಜಿಕ ಸ್ಥಾನಮಾನ ಕಳೆದುಕೊಂಡ ತೊತ್ತು ಬಾಳುವ ಕೀಳುಮಟ್ಟದ್ದೇನಿಸಿತ್ತು. ಸಾಮಾನ್ಯವಾಗಿ ಮೇಲುವರ್ಗ, ವರ್ಣದವರು ಈ ತೊತ್ತು ಪದ್ಧತಿಯ ಪೋಷಕರಾಗಿದ್ದರು; ತೊತ್ತುಗಳ ಒಡೆಯರಾಗಿರುತ್ತಿದ್ದರು. ಸ್ತ್ರೀಪುರುಷರಿಬ್ಬರಿಗೂ ತೊತ್ತುಗಳಾಗಬಹುದಿತ್ತು.

ಜೀವಿತವೆಲ್ಲ ಅಥವಾ ನಿರ್ದಿಷ್ಟ ಅವಧಿಯವರೆಗೆ ಒಡೆಯನ ಅಧೀನವಾಗಿರಬೇಕಾಗಿತ್ತು. ಉದಾ: ರೋಗಪೀಡಿತ ತಂದೆಯನ್ನು ಕಾಪಾಡಲು ಹೆಣಗಿದ ನಿಂಬವ್ವೆ ಶಿವಭಕ್ತೆಯಾಗಿದ್ದಳು. ಭಕ್ತ ಪರಂಪರೆಯ ಈ ಶಿವಭಕ್ತೆಗೆ ತೊತ್ತಾಗುವ ಅನಿವಾರ್ಯತೆ ಬಂದೊದಗಿತ್ತು. ತಂದೆಯ ಕ್ಷೇಮ ತುರ್ತು ಅಗತ್ಯವಾಗಿತ್ತು. ತಂದೆಯಾದರೋ ತಾನು ಚೆನ್ನಾಗಿ ಬದುಕಿದ ಬಳಿಕ ಮಗಳನ್ನು ಬಿಡಿಸುವೆ ಎನ್ನುತ್ತಾನೆ. ಮನೆಗೆಲಸಕ್ಕೆ ತೊತ್ತನ್ನು ಕಾಯಂ ಆಗಿ ಇಟ್ಟುಕೊಳ್ಳುತ್ತಿದ್ದರು. ಮನೆಯಲ್ಲಿ ಉಂಡು ಮಿಕ್ಕ (ಉಳಿದ ಅಡುಗೆ) ಎಂಜಲನ್ನು ತೊತ್ತುಗಳಿಗೆ ನೀಡುತ್ತಿದ್ದರು. ಹೀಗೆ ಸಾಯುವುದಕ್ಕಾಗಿ ಬದುಕುವುದೆಂಬಂತೆ' ಹರಿಹರ ಚಿತ್ರಿಸುವ ತೊತ್ತು ಜೀವನ ಕಂಡು ಬರುತ್ತದೆ.

ಕೇವಲ ಕಸಮುಸರೆಗೆ ಸೀಮಿತವಾಗಿ ಸ್ತ್ರೀದೊತ್ತಿನ ಬಳಕೆ ಇದ್ದಿರಲಿಲ್ಲ. ಕೈ–ಮೈ ತುಂಬಿಕೊಂಡ ಸ್ತ್ರೀ ದೊತ್ತುಗಳನ್ನು ತಮ್ಮ ಶರೀರ ಸುಖಕ್ಕೂ ಬಳಸಿಕೊಳ್ಳುವ ಒಡೆಯರಿರುತ್ತಿದ್ದರು. ಅಂದಿನ ಈ ಉಪಕ್ರಮ ಹರಿಹರನಲ್ಲಿ ಜಂಗಮಾರ್ಪಿತವಾಗುವ ಮಾರ್ಪಾಡನ್ನು ಗಮನಿಸಬೇಕು. ಅಂದು ಪ್ರಚಲಿತವಾಗಿದ್ದ ಅಂಗಭೋಗ–ರಂಗಭೋಗ–ದೇವದಾಸಿ ಪದ್ಧತಿಗಳಿಗೆ ಪ್ರತಿಕ್ರಿಯೆ ಏನೋ ಎಂಬಂತೆ ಜಂಗಮದ ಆಸ್ತಿಯಾಗಿ ಲಿಂಗ ಜಂಗಮಕ್ಕೆ ಅರ್ಪಿತಳಾಗುವ ನಿಂಬವ್ವೆಯ ಇನ್ನೊಂದು ಚಿತ್ರಣ ರಗಳೆಯಲ್ಲಿ ದೊರೆಯುತ್ತದೆ."[೮೪] ಶಿವಭಕ್ತರ ಅನುಭವದ ಸುಖಪಾತ್ರೆಯಾಗಿ ನಿಂಬವ್ವೆ ಶಿವಭಕ್ತ ಸಮುದಾಯಕ್ಕೆ ಶರೀರ ಸುಖ ನೀಡುವ ತೊತ್ತಾಗುತ್ತಾಳೆ. ಶಿವಾಲಯವೇ ಅವಳ ಭೋಗ ಸುಖದ ತಾಣವಾಗಿತ್ತೆಂಬುದು ಹರಿಹರನ ವರ್ಣನೆ. 'ಪುಣ್ಯಾಂಗನೆ'ಯಂತೆ ಹಣಕ್ಕಾಗಿ ಯಾರಿಗೂ ಶರೀರವನ್ನು ಭೋಗಕ್ಕೆ ಇಡದೆ ನಿಂಬವ್ವೆ ಕೇವಲ ಶಿವಭಕ್ತರಿಗೆ ಇಟ್ಟಂತೆ ಭಾಸವಾಗುತ್ತದೆ. ಅರ್ಥಾತ್ ಶಿವಭಕ್ತರಿಗೆ ಮೀಸಲಾದ ವೇಶ್ಯಾವರ್ಗವೊಂದಿತ್ತು ಎಂಬ ಅನುಮಾನ ಮಾಡುತ್ತಾರೆ. ವಿಪ್ರವರ್ಗವು ಸೃಷ್ಟಿಸಿದ ಸಾಮಾಜಿಕ ಅನಿಷ್ಟಗಳನ್ನು ಖಂಡಿಸಲಾಗದೆ ಅದನ್ನು ಬೇರೊಂದು ಮುಖವಾಗಿ ಮಾರ್ಪಡಿಸಿದ್ದ

ರೆನಿಸುತ್ತದೆ. ಪ್ರಯತ್ನಗಳು ಅಯಶಸ್ವಿಯಾಗುವಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಈ ರೀತಿ ಮಾರ್ಪಡನ್ನು ಮಾಡಿ ದೇವದಾಸಿ ಪದ್ಧತಿಯನ್ನು ನಿಲ್ಲಿಸಲು ಯತ್ನಿಸಿರಬೇಕು.

ಹರಿಹರ ನಿರೂಪಿಸುವ ವಿಪ್ರನ ತೊತ್ತಾದ ನಿಂಬವ್ವೆ ತೊತ್ತಿಗೆ, ಒತ್ತೆಗೆ, ಪುರುಷನ ಅನೀತಿಗೆ, ಸೂಳೆಗಾರಿಕೆಗೆ ಸಂಕೇತವಾಗಿದ್ದಾಳೆ. ಸೂಳೆ ಎಂಬುದು ತೊಲಗಿ ಜಂಗಮಾರ್ಪಿತ 'ತೊತ್ತೆ'ನಿಸಿ ಶಿವಭಕ್ತರ ಅನುಭವದ ಸುಖಪಾತ್ರೆ'ಯೆಂಬ ಹೆಸರು ಪಡೆದಿದ್ದಾಳೆ"[೮೫] ದೇವಸ್ಥಾನದ ರಂಗಭೋಗದ ದೇವದಾಸಿ ಪದ್ಧತಿಗೆ ವ್ಯತಿರಿಕ್ತವಾದ ಪದ್ಧತಿಯ ಪ್ರತಿನಿಧಿಯಾಗಿದ್ದಾಳೆ. ಇಷ್ಟು ಬಿಟ್ಟರೆ ರಗಳೆಗಳಲ್ಲಿ ಪ್ರಾಸಂಗಿಕವಾಗಿ ಕಿಂಕರ, ತಂಡ, ಬಂಟ, ಸೇವಕ, ಭಕ್ತ, ಶರಣ ಸೇವಾಸಕ್ತ, ಭೃತ್ಯ ಎಂಬಂತಹ ಶಬ್ದಗಳನ್ನು ಶಿವನ ತೊತ್ತು ಪದಕ್ಕೆ ಸಮವಾಗಿ ಕವಿಬಳಸಿದ್ದಾನೆ. ಸ್ವತಃ ತನ್ನ ತಂದೆಯ ಶವಕ್ಕೆ ತಾನೆ ಸಂಸ್ಕಾರ ಮಾಡಿದ ನಿಂಬವ್ವೆಯ ದಾರುಣ ಸ್ಥಿತಿ ತೊತ್ತುಗಳ ಅಪಮಾನವವನ್ನು, ಆರ್ಥಿಕ ದುಃಸ್ಥಿತಿಯನ್ನು ಅವರ ಪರವಾಗಿ ಸಮಾಜದಲ್ಲಿ ಯಾರೂ ಸ್ಪಂದಿಸುವವರಿಲ್ಲದುದನ್ನು ಸೂಚಿಸುತ್ತದೆ.

**ರಗಳೆಗಳಲ್ಲಿ ಸಾಂಪ್ರದಾಯಿಕ ಪದ್ಧತಿಗಳು**

ಸಾಮಾಜಿಕ ಜೀವನದಲ್ಲಿ ಭಾವನೆಗಳಿಗೆ ಅಪಾರ ಮಹತ್ವವಿದೆ. ಸಾಮಾನ್ಯ ಜನತೆಯ ಜೀವನ ವಿಧಾನವು ತನ್ನ ಹಿಂದಿನ ಜೀವನಕ್ರಮವನ್ನು, ತಾನು ನಂಬಿದ ದೈವ, ಧರ್ಮ, ನಂಬಿಕೆ, ಸಾಂಪ್ರದಾಯಿಕ ಪದ್ಧತಿಗಳನ್ನು ಅವಲಂಬಿಸಿರುತ್ತದೆ. ಇದನ್ನು ಎಷ್ಟೋ ಕಾಲದಿಂದ ಮನಸ್ಸು ಒಪ್ಪಿಕೊಂಡಿರುತ್ತದೆ. ಒಪ್ಪಿದ ಮನಸ್ಸು ಭಾವನೆಗಳನ್ನು ಗಟ್ಟಿಗೊಳಿಸುತ್ತದೆ. ಸ್ವತಃ ಕವಿವಚನಕಾರರ ಪ್ರಭಾವ ವಲಯದಲ್ಲಿ ಕ್ರಾಂತಿಕಾರಕನಾಗಿದ್ದರೂ ಅವನೊಳಗಿನ ಸಾಮಾನ್ಯ ಬದುಕು, ಸಾಮಾನ್ಯನ ವ್ಯಕ್ತಿತ್ವದ ಗಟ್ಟಿಗೊಂಡ ಭಾವನೆಗಳನ್ನು ರಗಳೆಯಲ್ಲಿ ಪ್ರಾಸಂಗಿಕವಾಗಿ ನಿರೂಪಿಸುವುದನ್ನು ಗಮನಿಸಬೇಕು. ಈ ರೀತಿ ಸಾಂಪ್ರದಾಯಿಕ ಬದುಕಿನ ಹಿಂದಿನ ಮನೋಭಾವದ ವಿಶ್ಲೇಷಣೆ ಹರಿಹರ ಕಾಲದ ಸಾಂಪ್ರದಾಯಿಕ ಅಂಶಗಳನ್ನು ಪರಿಚಯಿಸಿಕೊಂಡುತ್ತದೆ.

**ಮುಹೂರ್ತಗಳು**

ಸನಾತನ ಪುರೋಹಿತರ ಕಾಣಿಕೆ ಈ ಮುಹೂರ್ತಗಳ ಕಲ್ಪನೆ, ವಚನಕಾರರು ಇವನ್ನು ಸಾರಾಸಗಟಾಗಿ ತಿರಸ್ಕರಿಸುತ್ತಾರೆ. ಹೀಗಿದ್ದೂ ಹರಿಹರನ ಕಾಲದಲ್ಲಿ ಅವು ಮುಂದುವರಿದಿದ್ದವು. ಜನನ, ಮರಣ, ವಿವಾಹ ಪೂಜೆ, ಪರ್ವದಂತಹ ಪ್ರಸಂಗಗಳಲ್ಲಿ ಮುಹೂರ್ತಗಳ ಪಾತ್ರ ದೊಡ್ಡದು, ಶಿಶು ಜನನವಾದಾಗ, ಮದುವೆ ನಿಶ್ಚಯಿಸುವಾಗ, ಲಿಂಗ ಪ್ರತಿಷ್ಠೆ ಮಾಡುವಾಗ ಜಾತಕರ್ಮಾಚರಣೆ

ಗೈಯ್ಯುವಾಗ ಶುಭಲಗ್ನ ಶುಭಮುಹೂರ್ತಗಳನ್ನು ನೋಡುತ್ತಿದ್ದ ಚಿತ್ರಣ ರಗಳೆಯಲ್ಲಿ ದೊರೆಯುತ್ತವೆ. ಅಲ್ಲಮನು ಹುಟ್ಟಿದುದನ್ನು ಶುಭಲಗ್ನವೆಂದಾ ಮುಹೂರ್ತಿಕರ್ ಕೊಂಡಾಡಿದರು."[೮೬] ಸುಮುಹೂರ್ತ ಸಮಯವೇ ಮಹಾದೇವಿಯ ಜನನಕ್ಕೆ ಕಾಯುತಿತ್ತು."[೮೭] ಸುಮುಹೂರ್ತದೊಳು ಬಸವಣ್ಣನಿಗೆ ಸುಪುತ್ರನುದ್ಭವಿಸಿದನು"[೮೮] ಹುಟ್ಟಿದುದೇ ಸುಮುಹೂರ್ತವಾಗಿ ನಿಂಬವ್ವೆ ಹುಟ್ಟಿದಳು."[೮೯] ಎಂಬ ವಿವರ ರಗಳೆಗಳಲ್ಲಿ ದೊರೆಯುತ್ತದೆ.

ಮಕ್ಕಳು ಜನಿಸಿದಾಗ ಮುಹೂರ್ತ ನೋಡುವ, ನಂಬುವ ಜನತೆಯನ್ನು ಇದು ಸೂಚಿಸುತ್ತದೆ. ಮುಹೂರ್ತ ನೋಡುವುದೇ ಒಂದು ವೃತ್ತಿಯಾಗಿತ್ತು. ಆ ವೃತ್ತಿಯವರನ್ನು ಮುಹೂರ್ತಿಕರು ಎಂದು ಕರೆಯುತ್ತಿದ್ದರು. ಮುಹೂರ್ತಿಕರಲ್ಲದೆ ಭವಿಷ್ಯ ಹೇಳುವವರೂ ಇದ್ದರು. ಅವರನ್ನು ಜೋಯಿಸರು; 'ಜ್ಯೋತಿಷಿಗಳು' ಎನ್ನುತ್ತಿದ್ದರು. ಅವರನ್ನು ತ್ರಿಕಾಲ ಜ್ಞಾನಿಯೆಂದೂ ಕರೆಯುತ್ತಿದ್ದರು. ಭವಿಷ್ಯವಾಣಿಯ ಮೂಲಕ ಸಾಮಾನ್ಯರನ್ನು ಅಂತರಂಗಕ್ಕೆ ಎಳೆದುಕೊಳ್ಳುವಲ್ಲಿ ಜ್ಞಾನಿಗಳು ಇದ್ದರು. ರೇವಣಸಿದ್ಧನು ಸೊನ್ನಲಿಗೆಯಲ್ಲಿ ಮೊರಡಿಯ ಮುದ್ದುಗೌಡನ ಅರ್ಧಾಂಗಿ ಸುಗ್ಗವ್ವೆಯೆಂಬ ಕಾರಣಿಕೆಯೊಳು ಕಾರಣಿಕ ಸಿದ್ಧನುದಯಿಸುವನು"[೯೦] ಎಂದು ಭವಿಷ್ಯ ಹೇಳಿದ್ದನ್ನು ರಗಳೆಯಲ್ಲಿ ಕಾಣಬಹುದು.

### ಹೂ ಬೀಳುವುದು

ಪ್ರಾಚೀನ ಕಾಲದಿಂದಲೂ 'ಹೂಬೀಳುವ' ನಂಬುಗೆಯೊಂದು ಜನತೆಯಲ್ಲಿ ಬೆಳೆದು ಬಂದಿದೆ. ತಮ್ಮ ಮನಸಿನಲ್ಲಿ ಇಟ್ಟುಕೊಂಡ ಬಯಕೆಯನ್ನು ತಮ್ಮ ಆರಾಧ್ಯ ದೈವದ ಮುಂದೆ ವ್ಯಕ್ತಪಡಿಸುವಾಗ ದೇವರ ಮೂರ್ತಿಗಳಿಗೆ ಏರಿಸಿದ ಹೂವು ಕೆಳಗೆ ಬಿದ್ದರೆ ತಮ್ಮ ಬಯಕೆ ಕೈಗೂಡುತ್ತದೆಂಬುದು ಈ ನಂಬಿಕೆಯ ಹಿನ್ನೆಲೆಯಲ್ಲಿದೆ. ಹಾವಿನಹಾಳ ಕಲ್ಲಯ್ಯನ ತಂದೆ ಮಗನನ್ನು ಬಯಸಿ ದೇವರನ್ನು ಬೇಡಿಕೊಂಡಾಗ, ಮಹಾದೇವಿ ತಾಯ್ತಂದೆ ಪಾರ್ವತಿದೇವಿಯನ್ನು ಪ್ರಾರ್ಥಿಸಿದಾಗ ಇಂತಹ ಹೂಬೀಳುವ ಘಟನೆಯನ್ನು ಕವಿ ರಗಳೆಯಲ್ಲಿ ವಿವರಿಸಿದ್ದಾನೆ.

ಶಿವನೋಜನು ಕಲ್ಲಿನಾಥ ದೇವರಿಗೆ ಎಮಗೋರ್ವ ಪುತ್ರನಂ ಸಚ್ಚರಿತ್ರನಂ ಕುಡೆ ನಿನ್ನ ಪೆಸರನಿಟ್ಟ ಪೆನೆಂದು ನುಡಿಯಲು ಮೃಢಸಿರಿ ಮುಡಿಯಿಂದ ಬಂದರಲು ಬರಲೊಡನೆ ಕೊಂಡು ಬಂದನೆಂಬ ಉಲ್ಲೇಖ: ಶಿವಭಕ್ತ–ಶಿವಭಕ್ತೆ ಹೆಸರುಳ್ಳ ಉಡುತಡಿಯ ದಂಪತಿಗಳು ಶಂಕರನ ನಿಲಯದಲ್ಲಿ ಪಾರ್ವತಿ ದೇವಿಯನ್ನು ಆರಾಧಿಸುತ್ತ ದೇವಿಯ ಮಗೋರ್ವ ಪುತ್ರಿಯ ನೀವುದೆಲೆ ತಾಯೆ ನಾವು ನಿಮ್ಮಯ ಪೆಸರನಿಟ್ಟೆವು.. .. .. .. . ಕರುಣಿಸುವುದೆಂದು ಬಿನ್ನೈಸುತಿದೆ ಗಿರಿಸುತೆಯ ಮುಡಿಯಿಂದಲೊಂದು ಹೂ ಸಡಿಲುತಿದೆ ಮುಂದೆ ಮಹಾದೇವಿ ಜನಿಸಿದ ಸಂಗತಿ ರಗಳೆಯಲ್ಲಿ

ಬಂದಿದೆ. ಇಂತಹ ನಂಬಿಕೆಗಳು ಇಂದಿಗೂ ಉಳಿದು ಬಂದಿವೆ.[೯೧]

**ಶಕುನಗಳು**

ಯಾರಾದರೂ ಬರುವುದಿದ್ದಾಗ, ಶುಭವಾಗುವ ಏನಾದರೂ ಕಾರ್ಯಗಳಿದ್ದಾಗ ಪುರುಷನ ಬಲಗಣ್ಣು ಹಾರುವುದು, ಸ್ತ್ರೀಯ ಎಡಗಣ್ಣು ಹಾರುವುದು, ಭುಜಗಳು ಹಾರುವುದು ಇತ್ಯಾದಿ ನಂಬಿಕೆಗಳಿವೆ. ಇದನ್ನು ಜನತೆ ಶುಭಶಕುನವೆಂದು ಭಾವಿಸಿದೆ. ಬಸವಣ್ಣನ ಬಲಗಣ್ ಹಾರುವ ಮೂಲಕ ದಕ್ಷಿಣ ಭುಜ ಹಾರುವ ಮೂಲಕ ಶಿವಭಕ್ತರು ಬರುವ ಸೂಚನೆಯನ್ನು ಅವನು ಮುಂಗಾಣುತ್ತಿದ್ದನೆಂದು ರಗಳೆ ಪ್ರಸ್ತಾಪಿಸುತ್ತದೆ."[೯೨] ಮಹಾದೇವಿಯ ಜನನ ಕಾಲದಲ್ಲಿ ಕೂಡ ಕೌಶಿಕನಿಗೆ ಅಂತಹ ಶಕುನಗಳಾದುದನ್ನು ಕವಿ ಬರೆಯುತ್ತಾನೆ. ಅವಯವ ಚಟುವಟಿಕೆಗಳಿಗೆ ಶಕುನ ಸೂಚಿಸುವವರು, ಹಚ್ಚಿದ ಅರ್ಥವನ್ನು ಅಂದಿನ ಸಾಮಾನ್ಯ ಜನತೆ ಸ್ವೀಕರಿಸಿದುದನ್ನು ರಗಳೆಗಳು ನೆನಪಿಸುತ್ತವೆ. ಶಿವಭಕ್ತರು ಇಂತಹ ಶಕುನ-ನಂಬುಗೆಗಳನ್ನು ತಿರಸ್ಕರಿಸಿದ ಉದಾಹರಣೆಗಳಿವೆ. ಭಕ್ತರು ಕೈಗೊಂಡ ಚಟುವಟಿಕೆಗಳೆ ಚಟುವಟಿಕೆಗಳು; ಆ ಸಮಯವೇ ಸುಮುಹೂರ್ತ ಸಮಯವೆಂದು ತೆಲುಗು ಜೊಮ್ಮಯ್ಯನ ರಗಳೆಯಲ್ಲಿ ಹರಿಹರ ಬರೆಯುವುದನ್ನು ನೋಡುತ್ತೇವೆ."[೯೩] ಇಂಥಲ್ಲಿ ವಚನಕಾರರ ಪ್ರಗತಿಪರ ನಿಲುವು ಗಾಢ ಪ್ರಭಾವವಿರುವುದನ್ನು ಕಾಣುತ್ತೇವೆ. ಮುಹೂರ್ತ, ಶಕುನದಂತಹ ನಂಬಿಕೆಗಳನ್ನು ಕೆಲವು ಸಲ ಚಿತ್ತಬಂದಂತೆ ಸ್ವೀಕರಿಸಿದ ಜನರೂ ಇದ್ದರು. ತಿರಸ್ಕರಿಸಿದ ಶಿವಭಕ್ತರೂ ಇದ್ದರು"[೯೪]

**ಕನಸುಗಳು**

ಕನಸುಗಳ ಬಗೆಗಿನ ನಂಬುಗೆಯೂ ಪ್ರಾಚೀನವಾದುದು, ಮುಂದಾಗಲಿರುವ ಭವಿಷ್ಯ ಸೂಚನೆ ಕನಸೆಂದು ಸಾಮಾನ್ಯ ಜನ ನಂಬುತ್ತಾರೆ. "ಬಸವಣ್ಣನಂಥ ಪ್ರಗತಿಪರ ನಿಲುವಿನ ರಗಳೆಯಲ್ಲಿ ಕನಸುಗಳ ಅನುಸಾರ ನಡೆದುಕೊಳ್ಳುತ್ತಾನೆ. ಬಸವಣ್ಣನ ಕನಸಿನಲ್ಲಿ ಬಂದ ಶಿವನು ಮಗನೆ ಬಸವಾ.. .. .. .. ನಿನ್ನಂ ಮಹೀತಳಿದೂಳು ಮೆರೆದಪೆವು ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು."[೯೪] ಎಂದು ಆದೇಶಿಸುತ್ತಾನೆ. ಈ ಮಾತನ್ನು ನಂಬಿದ ಬಸವಣ್ಣ ವ್ಯಥೆ ಪಟ್ಟಿರುವಾಗ ಮತ್ತೆ ಕನಸಿನಲ್ಲಿ ಶಿವನು ಬಂದು ವೃಷಭ ರಾಜನಿಂದ ದೀಕ್ಷೆ ಪಡೆದು ಮಂಗಳವಾಡಕ್ಕೆ ಕಳಿಸುವ ಉದ್ದೇಶ ತಿಳಿಸುತ್ತಾನೆ. ಶಿವಾರ್ಚನೆಗೈಯ್ಯುತ್ತ ಭಕ್ತರ ಬಂಧುವಾಗಿ ಶರಣರ ಪುರುಷರ ಕಣಿಯಾಗಿ, ನಿತ್ಯದ ಸುಖಿಯಾಗಿ ಪರಸಮಯದ ಗರ್ವವನ್ನು ನಿಲ್ಲಿಸಿ ಭಕ್ತರನ್ನು ಗೆಲ್ಲಿಸಿ, ಪ್ರತ್ಯಕ್ಷಗಳನ್ನು ತೋರಿ, ಲೌಖಿಕ ಧರ್ಮವನ್ನು ಮೀರಿ, ಕಡುನಿಷ್ಠೆಯನ್ನು ಹೇರಿ ಪರಮಸುಖದಿಂದ ಇರಬೇಕೆಂದು ಶಿವ ಸೂಚನೆ ಕೊಡುತ್ತಾನೆ.

ಅದನ್ನನುಸರಿಸಿ ಬಸವಣ್ಣ ಮಂಗಳವಾಡಕ್ಕೆ ಬಂದನೆಂದು ರಗಳೆ ಹೇಳುತ್ತದೆ.[೯೬] ಹರಿಹರನ ಕಾಲಾವಧಿಯ ಧರ್ಮಕ್ಷೇತ್ರ ಸಂಘರ್ಷದಿಂದ ಕೂಡಿತ್ತು. ವ್ಯವಸ್ಥೆಯೇ ಹಾಗಿರುವಾಗ ವ್ಯಕ್ತಿಯ ಮನಸ್ಸು ಅನೇಕ ಗೊಂದಲಗಳಿಗೆ ಈಡಾಗುವುದು ಸ್ವಾಭಾವಿಕ, ಆಗ ನಡೆದ ಯಾವುದೇ ಚಟುವಟಿಕೆಗಳಿಗೆ ಕನಸುಗಳನ್ನು ಜೋಡಿಸಿ ಅವನ್ನು ಜನತೆ ಒಪ್ಪುವಂತೆ ಪರಿಸರ ನಿರ್ಮಾಣ ಮಾಡುತ್ತಿದ್ದರು. ಕನಸಿನಲ್ಲಿ ದೇವರು ಕಾಣಿಸಿಕೊಂಡ; ಆದೇಶ ನೀಡಿದ ಎಂಬ ಮಾತು ಬಂದರೆ ಭಾವುಕ ಜನತೆ, ಘಟಿಸಿದ ತಪ್ಪು ಮಾಡಿದ ವ್ಯಕ್ತಿಯದಲ್ಲವೆಂಬ ನಿರ್ಣಯಕ್ಕೆ ಬರುವಂತಾಗುತ್ತಿತ್ತು. ಇಂತಹ ಕನಸುಗಳ ಕೆಲವು ವಿವರಗಳು ರಗಳೆಯಲ್ಲಿ ನಿರೂಪಗೊಂಡಿವೆ.

ಪರದೈವ ನಿಂದನೆ, ಪರಧರ್ಮ ನಿಂದನೆ, ಶೈವೇತರ ವಾಸ್ತವ ಭಂಜನೆಗೆ ಕನಸುಗಳು, ಶಕುನಗಳು ಕಾರಣವಾಗಿದ್ದನ್ನು ಹರಿಹರನ ಕಾಲದಲ್ಲಿ ಕಾಣಬಹುದು. ಮಾರುಡಿಗೆಯ ನಾಚಿತಂದೆ ಕನಸಿನಲ್ಲಿ ಶಿವನು ಕಾಣಿಸಿಕೊಂಡು ಮಾರುಡಿಗೆಯ ಜೈನರು ಸೇರಿ ಶಿವಭಕ್ತ ನೊಬ್ಬನನ್ನು ಹೊಡೆದಿದ್ದು, ಏಳಯ್ಯ ವೀರನಾಚಯ್ಯ, ಮಾರುಡಿಗೆ ಸುಟ್ಟು ಸುರಹೊಯ್ದು ಶಿವಲಿಂಗವನ್ನು ನಿಲ್ಲಿಸಯ್ಯ ಎಂದು ಸೂಚನೆ ಕೊಡುತ್ತಾನೆ. ನಾಚಿ ತಂದೆಗಳು ಅದೇ ಪ್ರಕಾರ ಮಾರುಡಿಗೆಯನ್ನು ಶಿವಪುರ ಮಾಡಲು ಯುದ್ಧೋಪಾದಿಯಲ್ಲಿ ಜೈನರೊಡನೆ ಕಾದಾಡುತ್ತಾನೆ. ಕಾದಿಸುತ್ತಾರೆ."[೯೭] ತೆಲುಗು ಬೊಮ್ಮಯ್ಯನಿಗೆ ಭೀಮನಾಥ ದೇವರು ಕನಸಿನಲ್ಲಿ ಕಾಣಿಸಿಕೊಂಡು ಸೂಕ್ಷ್ಮಧರ್ಮವನ್ನು ತಿಳಿಸುತ್ತಾನೆ. ಅದು ಶಾಪಹತರಾದ ಕಾರಣಿಕ ಖ್ಯಾತಿಗಳು ಕಾನನದಲ್ಲಿ ಮೃಗವಾಗಿದ್ದು ಅವುಗಳ ಬೇಟೆಯಾಡಿ ಮಾಯೆ ಕಳೆದು ಕೈಲಾಸಕ್ಕೆ ಕಳಿಸುವುದು; ಕಾಯಭಾರ ಇಳಿಸುವುದು"[೯೮] ಕನಸಿನಲ್ಲಿ ಮಾಡಿದ ಈ ಹರನಾಜ್ಞೆಯನ್ನು ಪೂರೈಸುವ ಕಾಯಕವನ್ನು ಬೊಮ್ಮಯ್ಯ ಕೈಕೊಳ್ಳುತ್ತಾನೆಂದು ಹರಿಹರ ಒಡೆಯುತ್ತಾನೆ.

ಕನಸುಗಳು ನನಸಾಗುತ್ತವೆ ಎಂದು ಬಲವಾಗಿ ನಂಬುವ ಜನತೆ ಇತ್ತು. ವಾರಣಾಸಿ ಯಾತ್ರೆಗೆ ಹೊರಟ ಗೋವಿಂದನೆಂಬುವನಿಗೆ ಒಡೆಯ ಶಂಕರದೇವರು ಕನಸಿನಲ್ಲಿ ಕಾಣಿಸಿಕೊಂಡು ನಮ್ಮೂರಿಗೆ ಬಂದರೆ ಉಪದೇಶ ಮಾಡಿ ಕರುಣಿಸುವೆವು ಎಂದು ಹೇಳುತ್ತಾನೆ."[೯೯] ಅದೇ ಪ್ರಕಾರ ಗೋವಿಂದ ದೇವ ನವಿಲಯೂರಿಗೆ ಹೋಗಿ ಶಿವಕಾರುಣ್ಯ ಸಂಪಾದಿಸಿ ಮೂರನೆಯ ಕಣ್ಣು ಪಡೆದು ವೈಷ್ಣವ ಸರ್ವನಾಶಕ್ಕೆ ಅಣಿಯಾಗುವ ಶಂಕರದಾಸಿಮಯ್ಯನಾಗುತ್ತಾನೆ. ಈ ಎಲ್ಲ ವಿವರಣೆಗಳಲ್ಲಿ ಹರಿಹರನ ಕಾಲದ ಅಸ್ವಸ್ಥ ಸಮಾಜದ ಚಿತ್ರಣ ದೊರೆಯುತ್ತದೆ. ಹರಿಹರನಲ್ಲಿ ನರಿಕೂಗುವುದು, ಪ್ರತಿಮೆಗಳು ಗುಡುಗುವುದು, ಅಳುವುದು, ಸಿಡಿಯುವುದು, ಸಿಡಿಯುವಂತೆ ಮಾಡಿ ಉತ್ಪಾತದ ಆವರಣ ಹಾಕುವುದು. ಇವೆಲ್ಲ ಮೇಲುನೋಟಕ್ಕೆ ಅಸ್ವಾಭಾವಿಕವೆಂಬುದು ಸ್ಪಷ್ಟ ಆದರೆ ಜನಮಾನಸದಲ್ಲಿ ಅವು ಉತ್ಪಾತಗಳು ಎನಿಸಿಕೊಂಡು ಜನ ಭೀತರಾಗುತ್ತಿದ್ದರು. ಇವೆಲ್ಲ ಪವಾಡಗಳೆನಿಸಿ ಜನರ

ನಂಬಿಕೆಗಳನ್ನು ಗಟ್ಟಿಗೊಳಿಸುತ್ತಿದ್ದವು. ಇಂತಹ ಅನೇಕ ಉಲ್ಲೇಖಗಳು ಹರಿಹರನ ರಗಳೆಗಳಲ್ಲಿ ವ್ಯಕ್ತವಾಗಿವೆ.[೧೦೦] ದೋಷವೊಂದರ ಪರಿಹಾರಕ್ಕೆ ಪವಾಡಗಳನ್ನು ನಿರೂಪಿಸಿ ಸಹೃದಯರನ್ನು ಒಪ್ಪಿಸುವ ಪ್ರಯತ್ನ ಇಲ್ಲಿದೆ, ಜನಮನದಲ್ಲಿ ಇಂಥ ಪವಾಡ ನಡೆದಿತ್ತು ಎಂದರೆ ಹೌದು ನಡೆದಿರಬೇಕು ಎಂದು ನಂಬುತ್ತಿದ್ದರು. ಈ ಭಾವನೆಗಳು ಜನಮನದಲ್ಲಿ ಆಳವಾಗಿ ಬೇರೂರಿದ್ದವು. ಇಂದಿನಂತೆ ಕೆಲ ನೈಸರ್ಗಿಕ ಉತ್ಪಾತಗಳನ್ನು ಸಾಮಾಜಿಕ ದೋಷಕ್ಕೆ ಅನ್ವಯಿಸುವುದು; ಸಾಮಾಜಿಕ ಗಂಡಾಂತರಕ್ಕೆ ಪವಾಡಗಳನ್ನು ಮಾಡುವುದು; ಅವನ್ನು ನಂಬುವುದು ಜನರ ಸಹಜ ಸ್ವಭಾವವಾಗಿತ್ತು.

**ಉದಾಹರಣೆಗೆ:** ಅಬ್ಬಲೂರಿನ ಜಿನ ಬಸದಿಗಳಲ್ಲಿ ಪ್ರತಿಮೆಗಳು ಕಣ್ಣೀರು ಸುರಿಸುವುದು, ಬೆವರುವುದು, ಹಗಲಿನಲ್ಲಿಯೇ ನರಿಗಳು ಕೂಗುವುದು ಇತ್ಯಾದಿ ಮುಂದೆ ನಡೆಯಲಿರುವ ಜೈನ ಹನನ ಕ್ರಿಯೆಗೆ ಮುನ್ಸೂಚಿಯಾಗಿದ್ದವು. ಇಂಥ ಅನೇಕ ಪದ್ಧತಿಗಳು ಅಂದಿನ ಸಮಾಜಿಕ ವ್ಯವಸ್ಥೆಯಲ್ಲಿರುವುದನ್ನು ಕಾಣಬಹುದು.

# ಹರಿಹರನ ರಗಳೆಗಳಲ್ಲಿ ಧಾರ್ಮಿಕ ವ್ಯವಸ್ಥೆ

**ಧರ್ಮದ ಅರ್ಥ:**

'ಧರ್ಮ'ಪದ ಭಾರತೀಯ ದರ್ಶನ, ನೀತಿ ಮತ್ತು ಸಾಮಾಜಿಕ ವ್ಯವಸ್ಥೆಗೆ ನೇರವಾಗಿ ಸಂಬಂಧಿಸಿದ್ದು, ಇಂಗ್ಲಿಷ್‌ನ "ರಿಲಿಜನ್" (Religion) ಪದವು "ಧರ್ಮ" ಪದಕ್ಕೆ ವ್ಯಾಪ್ತಿಯಲ್ಲಿ ಮತ್ತು ಒಳಾರ್ಥಗಳಲ್ಲಿ ಸರಿಸಮಾನ ಪದಗಳಲ್ಲಿ. ಇದು ಇಂಗ್ಲಿಷ್ "ರಿಲಿಜನ್" ಮತ್ತು ಸಂಸ್ಕೃತದ "ಧರ್ಮ" ಪದಗಳ ಧಾತುವಿನಿಂದ ಬಹುಶಃ ಉಗಮವಾಗಿರಬೇಕು. ಧರ್ಮ ಎಂಬ ಪದಕ್ಕೆ ಸಂವಾದಿಯಾಗಿರುವ "ರಿಲಿಜನ್" ಎಂಬ ಪದವು, ಲ್ಯಾಟಿನ್ ಭಾಷೆಯ ನಾಮಪದ ರಿಲಿಗೋ ಎಂಬುದರಿಂದ ಹುಟ್ಟಿದೆ"[೧೦೧]

ಧರ್ಮಪದವು ಸಂಸ್ಕೃತದ ಮೂಲಧಾತು "ಧೃ" ಎಂಬುದರಿಂದ ಬಂದಿದೆ. ಧೃ ಎಂದರೆ ಸಂಸ್ಕೃತದಲ್ಲಿ ಧರಿಸು (Hold) ಎತ್ತಿ ಹಿಡಿ (up hold) ಅಥವಾ ಬೆಂಬಲಿಸು (Support) ಎಂದಾಗುತ್ತದೆ. "ಧಾರಣಾತ್ ಧರ್ಮ ಇತ್ಯಾಹುಃ ಧರ್ಮೋ ಧಾರಾಯತಿ ಪ್ರಜಾಃ" (ಮಹಾಭಾರತ, ಕರ್ಣಪರ್ವ ೪೬-೫೦) ಯಾವುದು ಇನ್ನೊಂದನ್ನು ಎತ್ತಿ ಹಿಡಿಯುವುದೋ ಅಥವಾ ಇನ್ನೊಂದಕ್ಕೆ ಆಧಾರವಾಗಿ ಅದನ್ನು ರಕ್ಷಿಸುವುದೋ, ಅದು ಧರ್ಮ ಎನಿಸಿಕೊಳ್ಳುತ್ತದೆ. "ಧರ್ಮ ವಿಶ್ವಸ್ಯ ಪ್ರತಿಷ್ಠಾ" ಧರ್ಮವು ವಿಶ್ವದ ಆಧಾರವಾಗಿದೆ.

**ಧರ್ಮದ ಸ್ವರೂಪ**

ರಗಳೆಗಳಲ್ಲಿ ಸಾಂದರ್ಭಿಕವಾಗಿ ವ್ಯಕ್ತವಾಗುವ ಧರ್ಮ ಸ್ವರೂಪದ ವಿವಿಧ ಮುಖಗಳ ವಿವೇಚನೆ ಈ ಅಧ್ಯಾಯದಲ್ಲಿದೆ. ವಚನಕಾರರು ಏಕದೇವೋಪಾಸನೆಯನ್ನು ಗುರಿಯಾಗಿಟ್ಟುಕೊಂಡು ಯಾವ ಧರ್ಮೀಯರೇ ಇರಲಿ ಶಿವಧರ್ಮಕ್ಕೆ ಮತಾಂತರಗೊಂಡು ಲಿಂಗೋಪಾಸಕರಾದರೆ ಅವರನ್ನು ವೀರಶೈವ ಮತೀಯರೆಂದೂ, ಭಕ್ತರೆಂದೂ ಕರೆಯಲಾಗಿದೆ. ಲಿಂಗಧಾರಿಗಳಿಲ್ಲದವರನ್ನು 'ಭವಿ'ಗಳೆಂದು ಕರೆದು ಭಕ್ತ, ಭವಿ ವರ್ಗ ಸೃಷ್ಟಿ ಮಾಡಿರುವುನ್ನು ಕಾಣುತ್ತೇವೆ. ಕೇವಲ ವರ್ಣವಷ್ಟೇ ಅಲ್ಲ; ಅನ್ಯ ಧರ್ಮದವರೂ ಭಕ್ತರಾಗಿ ಮಾರ್ಪಡುವುದು ಕಂಡು ಬರುತ್ತದೆ. ಹೀಗೆ ಪ್ರಚಲಿತ ಚತುರ್ವರ್ಣ ಮತ್ತು ಷಡ್ದರ್ಶನ ಹಾಗೂ ಅನ್ಯಧರ್ಮಗಳ ಹಿನ್ನೆಲೆಯಲ್ಲಿ ಭಕ್ತ, ಭವಿವರ್ಗ ಕಲ್ಪನೆ ವಚನಕಾರರಲ್ಲಿ ಮೂಡಿ ಬಂದಿದೆ.

ಹರಿಹರನ ಸಾಹಿತ್ಯದಲ್ಲಿ ಜೈನ, ಬ್ರಾಹ್ಮಣ, ಶೈವ ಉಲ್ಲೇಖದೊಡನೆ ವೀರಶೈವ ಭಕ್ತರ ಚರಿತ್ರೆ ಇರುವುದರಿಂದ ಶಿವಭಕ್ತರ ಧರ್ಮವು ಆಚರಣೆಯ ಹಾಗೂ ಸಂಘರ್ಷದ ಸಾಧನವಾಗಿ ಕಂಡು ಬರುತ್ತದೆ. ಕವಿ ಶಿವಮತೀಯನಾದುದರಿಂದ (ಮೊದಲು ಶೈವ ವಚನಕಾರರ ಪ್ರಭಾವದಿಂದ ವೀರಶೈವನಾಗಿರಬೇಕು) ತನ್ನ ಮತ ಶ್ರೇಷ್ಠತೆಯನ್ನು ಸಮರ್ಥಿಸುತ್ತ, ಅನ್ಯಮತ ಕನಿಷ್ಠತೆಯನ್ನು ಸಾರುವ ಪ್ರಯತ್ನ ಮಾಡುತ್ತಾನೆ. ಹೀಗಾಗಿ ರಗಳೆಗಳಲ್ಲಿ ಶಿವಭಕ್ತರೇತರ ಧರ್ಮ ಸ್ವರೂಪದ ಚಿತ್ರಣ ಶಿವಭಕ್ತರೊಡನೆ ಸಂಘರ್ಷಕ್ಕಿಳಿಯುವುದಕ್ಕೆ ಸೀಮಿತಗೊಂಡಿದೆ.

**ವೈವಿಧ್ಯಮಯ ಶಿವಭಕ್ತರು**

ಹರಿಹರನಿಗೆ ಬದುಕು, ಧರ್ಮ, ಸಾಹಿತ್ಯ ಒಂದೇ ಆಗಿದೆ. ವಚನಕಾರರ ಸಮಾಜಮುಖಿ ನಿಲುವಿಗಿಂತಲೂ ಹರಿಹರನ ಧರ್ಮ ಮುಖಿ ವ್ಯಕ್ತಿತ್ವ ಎಲ್ಲೆಂದರಲ್ಲಿ ಹಣಕಿಕ್ಕುತ್ತದೆ. ಮಗನಿಗೆ ಹಿತೋಕ್ತಿ ಹೇಳುವ ಕೋವೂರ ಬೊಮ್ಮಿ ತಂದೆಯ ಮಾತುಗಳನ್ನು ಕೇಳಬೇಕು. ನಾನು ಗುರುವಿನಿಂದ ಬದುಕಿದೆ. ಶರಣ ಸುರತರುವಿನಿಂದ ಬದುಕಿದೆ. ಭಕ್ತರೊಡಗಣ ಸಂಗದಿಂದ ಬದುಕಿದೆ. ಮಗನೆ, ನೀನೆ ಸದಾಕಾಲ ಶಿವಲಿಂಗದರ್ಚನೆ ಮಾಡುವುದು, ಶಿವನನ್ನು ಎಲ್ಲಂದದಿಂದ ಮನದೊಳಗೆ ಕೂಡುವುದು, ಭಸ್ಮಧರಿಸುವುದು, ಪಂಚಾಕ್ಷರಿಗಳನ್ನು ಆದರಿಸುವುದು, ರುದ್ರಾಕ್ಷಿಗಳನ್ನು ಒಲುಮೆಯಿಂದ ಧರಿಸುವುದು, ಶಿವಪುರವನ್ನು ಪ್ರೀತಿಯಿಂದ ಪಾಲಿಸುವುದು, ಶಿವಭಕ್ತರ ವಚನಗಳನ್ನು ಭಕ್ತಿಯಿಂದ ಆಲಿಸುವುದು, ಇದು ನಿನಗೆ ನಿಸ್ತಾರ; ಸುಖ, ನಿಖರ, ಶಾಶ್ವತ ಅತಿಹಿತವು"[೧೦] ಹರಿಹರನ ಎಲ್ಲ ನಿಲುವು ಇದೆ ಆಗಿದೆ ಎಂಬುದನ್ನು ಮನಗಾಣಬೇಕು.

೧. ಗುರುವಿಗೆ ಮಹತ್ವ,

೨. ಶರಣಸಂಗಕ್ಕೆ ಮಹತ್ವ,

೩. ಶಿವಾಲಿಂಗಾರ್ಚನೆ,

೪. ತನುಮನಧನ ಲಿಂಗಾರ್ಪಿತ,

೫. ಧರ್ಮಲಾಂಚನಗಳಾದ ಭಸ್ಮ, ರುದ್ರಾಕ್ಷಿ ಧಾರಣೆ,

೬. ಸಹಭೋಜನ,

೭. ಹೊಲೆಯರನ್ನೊಳಗೊಂಡ ಶಿವಪುರ ಕಾಪಾಡುವುದು.

೮. ಶಿವಗೋಷ್ಠಿ, ಗೀತೆ, ವಚನಾಧ್ಯಯನ ಮಾಡುವುದು ಇವು ಶಿವಮತೀಯನ ಆದ್ಯಕರ್ತವ್ಯ ಮತ್ತು ಇವೇ ಆಚಾರ, ವಿಚಾರಗಳಾಗಿದ್ದವು.

ಒಟ್ಟಾರೆ ಹರಿಹರನದು ಜಾತಿ ಶೈವ. ಲಿಂಗಧಾರಣೆಯೇ ಇಲ್ಲಿ ಪ್ರಮುಖವಾದುದು, ಲಿಂಗಧಾರಿಗಳು ಭಕ್ತರು; ಅನ್ಯರು ಭವಿಗಳೆಂಬ ವಚನಕಾರರ ನಿಲುವನ್ನು ಆತ ಸಮರ್ಥಿಸಿದ್ದಾನೆ. ಹೀಗೆ ಸ್ಥಾವರ ಲಿಂಗಾರ್ಚನೆಯ ಶೈವ, ವಿಷ್ಣು ಆರಾಧನೆಯ ವೈಷ್ಣವ, ಜಿನ ಭಕ್ತಿಯ ಜೈನ, ಬೊಮ್ಮರ ಸ್ವಾಮಿಗಳು ಮುಂತಾದವರನ್ನು ತನ್ನ ಶಿವಮತಕ್ಕೆ ಪರಿವರ್ತಿಸುವ ಅನೇಕ ಚಟುವಟಿಕೆಗಳನ್ನು ನೀಡುವಲ್ಲಿ ಕವಿ ತನ್ನ ಶ್ರೇಷ್ಠತೆಯನ್ನು ಮೆರೆದಿದ್ದಾನೆ.

ಮೃಡ ದರುಶನವನಪ್ಪಿದ ಎಂತೆಂತಹ ಭಕ್ತರಿದ್ದರೆಂಬ ದೊಡ್ಡ ಪಟ್ಟಿಯೇ ರಗಳೆಯಲ್ಲಿ ದೊರೆಯುತ್ತದೆ. ಭಕ್ತಿ, ಜ್ಞಾನ, ವೈರಾಗ್ಯ, ಮುಪ್ಪರಿಗೊಂಡ ಶೈವಸಾಮ್ರಾಜ್ಞೆ ಲಿಂಗಪ್ರಾಣಿ, ಸಾಹಿತ್ಯ ನಿಧಿ ಮಹಾದೇವಿ"[೧೦೩] ಶೈವಪ್ರತಾಪ ಸಿದ್ಧ ರೇವಣಸಿದ್ಧ"[೧೦೪] ಏಕನಿಷ್ಠೆಯ ಛಲಿ ಜೊಮ್ಮಣ್ಣ.[೧೦೫] ಆರಾಧ್ಯದೈವ ಸೋಮನಾಥನಿಗೆ ನಿತ್ಯವೂ ಎಂಟು ಪದ್ಯಗಳನ್ನರ್ಪಿಸುವ ಸಾಹಿತ್ಯ ಭೂಷಣ ಕೇಶಿರಾಜ"[೧೦೬] ಅಂದಂದಿನ ಸಂದರ್ಭಕ್ಕೆ ಮನದುಂಬಿ ಗೀತ ರಚಿಸಿ ಹಾಡುವ ಜಂಗಮ ಪ್ರಾಣಿ ಬಸವಣ್ಣ"[೧೦೭] ಭೂಪರನ್ನು, ಭವಿಗಳನ್ನು ಲೆಕ್ಕಿಸದ ತಿಲದಂತೆ ಸಂಸಾರವನ್ನು ಹೊದ್ದಿದ್ದ, ಪರಾಂಗನೆಯರನ್ನು ನೋಡದ, ಏಕಪತ್ನಿವ್ರತಸ್ಥ ಮಾರುಡಿಗೆ ನಾಚಿತಂದೆ."[೧೦೮] ಅರಸರ ಬಹಿಷ್ಕಾರವನ್ನು ಕಡೆಗಣಿಸಿದ ಕೇಶಿರಾಜನಿಗೆ ಉಪಚರಿಸಿದ ವೀರಭಕ್ತ ವಂಶವರ್ಧನ"[೧೦೯] ನುಡಿದದ್ದೆ ವೇದ, ನಡೆದದ್ದೇ ಬಟ್ಟೆಯಾದಂತಿರುವ ಪರಬ್ರಹ್ಮಸ್ವರೂಪಿ ಅಲ್ಲಮಪ್ರಭು."[೧೦೯] ಗಂಡನಿಗೆ ಶಿವದೀಕ್ಷೆ ನೀಡಿದ ಶಿವಭಕ್ತೆ ವೈಜಕವ್ವೆ ನೊಸಲಗಣ್ಣಿನ ಶಂಕರದಾಸಿಮಯ್ಯ"[೧೧೦] ಲಿಂಗ ಜಂಗಮ ಸ್ನೇಹಿ, ಶಿವಭಕ್ತ ಸಂಪನ್ನೆ ಲಕುಮಾದೇವಿ, ಗಂಗಾದೇವಿ"[೧೧೧] ತವನಿಧಿಯ ಜೇಡರ ದಾಸಿಮಯ್ಯ"[೧೧೨] ಕಾರಿಕಾಲಮ್ಮೆಯ ಬಾವನ್ನ ವೀರರು"[೧೧೩] ಭಾಷೆಯ ವೀರ ಬಾಹೂರ ಬೊಮ್ಮಯ್ಯ, ದೃಷ್ಟಿವಾರಿಯ ವೀರ ಮುಸುಟಿಯ ಚೌಡಯ್ಯ ಇತ್ಯಾದಿಯಾಗಿರುವ ಹರಿಹರನ ಪಾತ್ರಗಳೊಡನೆ. ಸಾಂದರ್ಭಿಕವಾಗಿ ಹೆಸರಿಸಲ್ಪಡುವ ಹಲವಾರು ಶಿವಭಕ್ತರು ಅವರವರ ವ್ಯಕ್ತಿ ವಿಶೇಷಗಳೊಡನೆ ಕಂಡು ಬರುತ್ತಾರೆ. ಉದಾ: ನಂದಿಯ ಮೊಗವಾಡದ ಶಂಕರದಾಸಿಮಯ್ಯ, ಮಲ್ಲಯ್ಯನ ಜನಪ್ರಿಯತೆಯನ್ನು ಕೊಂಡಾಡುವ ಕಿನ್ನರಿ ಬೊಮ್ಮಯ್ಯ.

## ನಂದಿಯ ಮೊಗವಾಡ

ಎಂ.ಎಂ. ಕಲಬುರ್ಗಿಯವರು ಏಲೇಶ್ವರದ ಕೇತಯ್ಯನ ವಚನೋಲ್ಲೇಖ ನೀಡಿ ವೀರಶೈವರು ಸರ್ವಾಂಗಕ್ಕೆ, ಮುಖಕ್ಕೆ, ಆತ್ಮಕ್ಕೆ ಹೀಗೆ ಮೂರು ಮುಸುಕುಗಳ ಆಚರಣೆ ಅನುಸರಿಸುತ್ತಿದ್ದರೆಂದು ಹೇಳಿ ನಂದಿಮೊಗವಾಡದ ಬಗ್ಗೆ ವಿವೇಚಿಸಿದ್ದಾರೆ."[೧೧೪] ದಿಟ್ಟವಾರಿಯಂತಹ ವ್ರತದ ಹಾಗೆ ನಂದಿಯ ಮುಖ ಹೋಲುವ ಮುಖವಾಡ ಧರಿಸುವುದೂ ಬಹುವ್ರತ. ಭವಿಗಳಿಗೆ ಅನ್ಯದೈವಗಳಿಗೆ ಈ ವ್ರತಸ್ಥರು ತಮ್ಮ ಮುಖ ಕಾಣದಂತೆ ಈ ಮುಖವಾಡವನ್ನು ಹಾಕಿಕೊಳ್ಳುತ್ತಿದ್ದರು. ಬಹುರೂಪಿಗಳಂತೆ ಕಲಾವಿದರು ಶಿವಭಕ್ತ ನಂದಿಯ ಪಾತ್ರವಾಡುವುದಕ್ಕೂ, ವ್ರತದ ಹಾಗೆ ಈ ಮುಖವಾಡದ ಮುಸುಕು ಹಾಕುವುದಕ್ಕೂ ವ್ಯತ್ಯಾಸವಿರುವುದನ್ನು ಇಲ್ಲಿ ಗಮನಿಸಬೇಕು. ಹರಿಹರನಲ್ಲಿ ಶಂಕರ ದಾಸಿಮಯ್ಯನ ನೊಸಲ ಕಣ್ಣಿನ ಬೆಂಕಿಯ ಅನಾಹುತವನ್ನು ತಪ್ಪಿಸಲು ಆತನ ಬಳಿಯಿರುವ ನಂದಿಯ ಮೊಗವಾಡವನ್ನು ಹಾಕಿಕೊಂಡಾಗ ನೊಸಲಗಣ್ಣಿನ ಬೆಂಕಿ ನಂದುತ್ತದೆ" ಎಂಬ ವಿವರ ಶಂಕರದಾಸಿಮಯ್ಯನ ರಗಳೆಯಲ್ಲಿ ಬಂದಿದೆ"[೧೧೫] ಡಾ.ಎಂ.ಎಂ. ಕಲಬುರ್ಗಿಯವರು ಸೂಚಿಸಿದಂತೆ ಶಿವನ ನಿಷ್ಠೆಯ ಭಕ್ತನಾದ ನಂದಿಯ ಹಾಗೆ ತಾವೂ ನಿಷ್ಠರೆಂಬುದನ್ನು ಸೂಚಿಸಲು ಈ ಮೊಗವಾಡವನ್ನು ಹೊರಗೆ ಹೊರಟಾಗ ಹಾಕಿಕೊಳ್ಳುತ್ತಿದ್ದರು. ಇಂದು ಈ ವ್ರತ ಬಳಕೆಯಲ್ಲಿಲ್ಲ. ಗ್ರಾಮೀಣ ಬದುಕಿನಲ್ಲಿ ಅದರ ಅವಶೇಷ ಬೇರೊಂದು ರೂಪದಲ್ಲಿ ಇದೆಯೆನಿಸುತ್ತದೆ.

ಕಿನ್ನರಯ್ಯನು ಉಳ್ಳಿಪ್ರಿಯ ಮಲ್ಲಯ್ಯನನ್ನು ಕೊಂಡಾಡಿದ ಉಲ್ಲೇಖ ಬಸವೇಶ್ವರ ದೇವರ ರಗಳೆಯಲ್ಲಿ ಬರುತ್ತದೆ."[೧೧೬] ಈ ಮಲ್ಲಯ್ಯ ಮೈಲಾರನಿರಬೇಕೆಂದು ಕಲಬುರ್ಗಿಯವರು ವಿವೇಚಿಸುತ್ತಾರೆ.[೧೧೭] ಹೀಗೆ ಅವರ ವೃತ್ತಿ, ಪ್ರವೃತ್ತಿ, ವ್ರತ, ನಿಯಮಗಳಿಗನುಸಾರವಾದ ನಡವಳಿಕೆಗಳ ಹಿನ್ನೆಲೆಯಲ್ಲಿ ಈ ಭಕ್ತರ ವೈವಿಧ್ಯಮಯ ವ್ಯಕ್ತಿತ್ವವನ್ನು ಇಲ್ಲಿ ಚಿತ್ರಿಸಲಾಗಿದೆ. ಮೇಲೆ ಹೇಳಿದ ಇವೆಲ್ಲ ೧೨ ಮತ್ತು ೧೩ನೇ ಶತಮಾನದಲ್ಲಿ ಇದ್ದಿರಹುದಾದ ಶಿವಭಕ್ತರ ಉದಾಹರಣೆಗಳಾಗಿವೆ. ಅಬ್ಬಲೂರಿನ ಬ್ರಹ್ಮೇಶ್ವರ ದೇವಳದಲ್ಲಿ ಏಕಾಂತರಾಮಿ ತಂದೆಯ ತಲೆತಂದುಕೊಂಡು ಮತ್ತೆ ತಡೆಯುವ ಸಾಹಸದ ಪ್ರತಿಜ್ಞೆಮಾಡಿ ಭಾಷಾಪತ್ರ ಬರೆಯಿಸುವಾಗ ಅಗ್ಗಳೆಯ ಶಿವಭಕ್ತಿ ನೆರೆದಿದ್ದರು. ಅವರು

೧. ಭಸ್ಮದ ಕಾಂತಿಯಿಂದ ಕೂಡಿ ಚಂದ್ರಿಕೆಯಲ್ಲಿ ಅದ್ದಿದಂತಿದ್ದರು.

೨. ಮಕುಟಧಾರಿಗಳಾದ ಅಪ್ರತಿಮ ಮಹಾಮಹಿಮರಾಗಿದ್ದರು.

೩. ಕರಸ್ಥಲ, ಉರಸ್ಥಲದಲ್ಲಿ ಲಿಂಗಧರಿಸಿದ ಅಚಲರಿದ್ದರು.

೪. ಅಚ್ಚ ಶಿವಲಿಂಗವೃತ್ತಿಗಳಿದ್ದರು.

೫. ಪಂಚಾಕ್ಷರಿಯೇ ರೂಪ ಉಗ್ರರು, ಸತ್ತರು, ಅನುಪಮ ತ್ಯಾಗಿಗಳು, ಸಂತೋಷಿಗಳು, ಸುಖಿಗಳು, ಅಸಲು ಶಿವಯೋಗಿಗಳು"[೧೧೮]

೮. ಕೆಂಜೆಡೆ, ಕುಂಡಲ, ತೊಟ್ಟ ರುದ್ರಾಕ್ಷಿ, ಹುಲಿದೊಗಲು, ಭಸಿತ, ಹೊಳೆವ ಕಂಗಳು, ಬಳಪ ಗಂಡಸ್ಥಲ, ತೊಳಪ ಸುಲಿಪಲ್ಲ. ವಿಲಾಸಮೆರೆವ ಮೈಯ ಬೆಳಗು, ಬೆಳೆದಿಂಗಳಂತೆ, ಸತ್ಯದಂತೆ, ಪುಣ್ಯದಂತೆ ಶಿವಭಕ್ತರಿದ್ದರು.[೧೧೯]" ಜಡೆಗಳಿಂದ, ಮಕುಟದಿಂದ, ತುರುಬಿನಿಂದ, ಕೂಡಿದವರಿದ್ದರು.

ಕೊಡೆಕಮಂಡಲ, ಯಜ್ಞೋಪವೀತ, ನೋಸಲ ಭಸಿತಧಾರಿಗಳಾದ ವೃದ್ಧಮಾಹೇಶ್ವರರಿರುವುದನ್ನು ರಗಳೆ ಕಾವ್ಯದಿಂದ ಗೊತ್ತಾಗಲಿದೆ."[೧೨೦]

**ವೇಷಭೂಷಣ**

ಶಿವಭಕ್ತರ ಕಾಲದಲ್ಲಿ ಧರ್ಮಾಭಿಮಾನ, ವ್ರತಾಂತರ ಎನ್ನುವುದು ಎಷ್ಟು ನಿಷ್ಠೆಯಿಂದ ಬದುಕಿತ್ತೆಂಬುದನ್ನು ಹರಿಹರನ ಈ ಚಿತ್ರಣ ವ್ಯಾಖ್ಯಾನಿಸುತ್ತದೆ. ಕವಿಯು ಸ್ವತಃ ಶಿವಭಕ್ತನಿರುವುದರಿಂದ ಅವನ ವ್ಯಕ್ತಿತ್ವ ವಿಶೇಷವು ಭಕ್ತರ ವರ್ಣನೆಯಲ್ಲಿ ಉತ್ಸಾಹದಿಂದ ಪ್ರಕಟವಾಗುವುದು ಸ್ವಾಭಾವಿಕ. ಹೂವುಗಳಿಂದ ಅಲಂಕೃತವಾದ ಬಟ್ಟದುರುಬು, ಶಿರೋಮದ್ಯದಲ್ಲಿರಿಸಿಕೊಂಡ ರುದ್ರಾಕ್ಷಿ, ಹಣೆಯ ಭಸ್ಮ, ಕರ್ಣ ಪಾಲಿಕೆ, ಕಂಠಮಾಲೆಯಿಂದ ಕೂಡಿದ ಕೊರಳು, ಭಸ್ಮಾವ್ರತ, ಭುಜಗಳ ಬಸವಣ್ಣನಿದ್ದರೆ."[೧೨೧] ಅಂಜನದ ರಂಜನೆ, ಮಾಗದೆ, ಹೊನ್ನೋಲೆಯ ಚನ್ನೆ, ಮುಕುತಿಯ ರಾಜಹಂಸೆ, ತೋಳಬಂಧಿಯ ಬಾಳಕಿ, ಹೊಂಗಡದ ಲಿಂಗವಂತೆ, ಕಂಕಣದ ಕಾಮಧೇನು, ತೊಡಗಿಯ ಬೆಡಂಗಿ, ಅಂದುಗೆಯ ಮಂದಯಾನೆ, ಗೆಜ್ಜೆಗಳ ಸಜ್ಜಯನೆ...................... ನೇಮದ ಕಾಮಿನಿ, ಭಸಿತದ ಭಾಮಿನಿ, ರುದ್ರಾಕ್ಷಿಯ ರುದ್ರಕನ್ಯೆ, ಶೈವಾಚಾರ್ಯರಿಂದ ಗುರು ಕಾರುಣ್ಯ ಪಡೆದ ಲಿಂಗಪ್ರಾಣೆ, ಸದಾಸನ್ನಿಹಿತ ಚರಿತೆ, ಶಿವಭಕ್ತ ಚರಿತೆ, ಶಿವಜ್ಞಾನ ಸಂಪನ್ನೆ, ಸಾಹಿತ್ಯನಿಧಿ, ಸಕಲ ಕಲಾ ಕೋವಿದ, ನಿತ್ಯನೇಮ ಸಂಪನ್ನೆ ಮಹಾದೇವಿಯಾಗಿದ್ದಾಳೆ"[೧೨೩] ಹರಿಹರ ನಿರೂಪಿತ ಈ ವೇಷ ಭೂಷಣಗಳನ್ನು ಗಮನಿಸಬೇಕು. ಬಸವಣ್ಣನ 'ಬಟ್ಟದುರುಬು ಹೂವುಗಳಿಂದ ಅಲಂಕೃತವಾಗಿತ್ತು; ಶಿರೋಮಧ್ಯದಲ್ಲಿ ರುದ್ರಾಕ್ಷಿ ಇತ್ತು ಎಂಬುದನ್ನು ನೋಡಿದರೆ ಬಹುಶಃ ತಲೆಗೂದಲು ಗಂಟಿನ ಮಧ್ಯಕ್ಕೆ ರುದ್ರಾಕ್ಷಿ ಇರಿಸಿಕೊಂಡಿರಬೇಕು.

ತನಗಷ್ಟೆ ಅಲ್ಲ, ಮಹಾಮನೆಗೆ ಬಂದ ಶಿವಭಕ್ತರ ಸಿರಿಮುಡಿಗೂ ಪರಿಮಳದ ಹೂ ಮುಡಿಸಿ ಆನಂದಿಸುತ್ತಿದ್ದನಂತೆ ಬಸವಣ್ಣ. ಈ ಚಿತ್ರದಲ್ಲಿ ಪುರುಷರು ಉದ್ದ ಕೂದಲುಳ್ಳವರಾಗಿರುತ್ತಿದ್ದರು; ಸ್ತ್ರೀಯರ ಹಾಗೆ ಹೂ ಮುಡಿಯುತ್ತಿದ್ದರೆಂಬುದನ್ನು ಗಮನಿಸಬೇಕು. ಮಹಾದೇವಿ ಭಸ್ಮದ ಭಾಮಿನಿಯಾಗಿದ್ದಳು; ರುದ್ರಾಕ್ಷಿ ಕನ್ಯೆಯಾಗಿದ್ದಳೆನ್ನುತ್ತಾನೆ. ಕವಿ 'ರುದ್ರಕನ್ಯೆ' ಎಂದರೆ ಕಠೋರ ನಿಷ್ಠೆಯ ಅವಿವಾಹಿತ ಕನ್ಯೆ ಎಂಬರ್ಥ, ಜಂಗಮ ಪ್ರಾಣಿಯೆಂದು ಬಸವಣ್ಣನಿಗೆ ಹೇಳಿದಂತೆ ಮಹಾದೇವಿಗೆ 'ಲಿಂಗಪ್ರಾಣಿ' ಎಂದು ಕವಿ ಬಳಸಿದ್ದಾನೆ. ಲಿಂಗಪತಿ ಎಂದು ಸ್ವೀಕರಿಸಿ ಲಿಂಗವನ್ನು ಪ್ರಾಣದಂತೆ ಪ್ರೀತಿಸುವ ವ್ರತಧಾರಿಣಿಯರು ಲಿಂಗಪ್ರಾಣಿಯರಾಗಿದ್ದರು. ಅಂಥವರಲ್ಲಿ ಮಹಾದೇವಿಯೂ ಒಬ್ಬಳು ಎಂದರೆ ಅತಿಶಯೋಕ್ತಿಯಾಗಲಾರದು.

### ಲಿಂಗದೀಕ್ಷೆ, ಶಿವವ್ರತಗಳು ಇತ್ಯಾದಿ

ಪ್ರಾಣದ ಮೇಲೆ ಲಿಂಗ ಪ್ರತಿಷ್ಠೆ ಮಾಡಿಕೊಂಡು ಆದರಿಂದ ಮೀರಿದ ಸ್ಥಲವಿಟ್ಟು ವೀರಮಾಹೇಶ್ವರತ್ವ ಪಡೆಯುವುದು ವೀರಶೈವದ ಲಕ್ಷಣವಾಗಿದೆ. ಶರಣಸತಿ–ಲಿಂಗಪತಿಯೆಂಬ ಬಸವಣ್ಣ ಮುಂತಾದ ಶಿವಭಕ್ತರೆಲ್ಲ ಶರಣಸತಿ ಲಿಂಗಪತಿ ತತ್ವದ ಆಚರಣೆಯವರೇ, ವಚನಕಾರರಲ್ಲಿಯ 'ಬಯಲು' ಶೂನ್ಯವು ಹರಿಹರನಲ್ಲಿ 'ಪರಬ್ರಹ್ಮ'ವೆಂಬ ಮಾತಿನಿಂದ ಕೇಳಿಬರುತ್ತದೆ. ಸೃಷ್ಟಿಯನ್ನು ಲಿಂಗರೂಪವಾಗಿ ಹರಿಹರ ಕಂಡಿದ್ದು, ಲಿಂಗರಾಧನೆಗೆ ಮಹತ್ವ ನೀಡುತ್ತಾನೆ. ನಡೆವಲಿಂಗ, ನುಡಿದ ಲಿಂಗವಾದ ಪ್ರಭುದೇವ ಪರಬ್ರಹ್ಮನೆ ತಾನಾಗಿದ್ದನೆನ್ನುತ್ತಾನೆ ಕವಿ”[೧೨೪] ಆಚರಣೆಯ ವಿಧಿಗಳನ್ನು ಭಕ್ತರಿಗೆ ಹೇಳಿ, ದೀಕ್ಷೆ ನೀಡುವ ಮೂಲಕ ಅವುಗಳನ್ನು ಭಕ್ತರು ಆಚರಿಸುವಂತೆ ಮಾಡುವವನು ಗುರು.

ಶೈವ ಗುರುಗಳನ್ನು ವೀರಶೈವ ಗುರುಗಳೆಂದು ಸ್ವೀಕರಿಸುವ ಬಗೆಗೆ ಪರ ವಿರೋಧ ಅಭಿಪ್ರಾಯಗಳಿವೆ. ಹರಿಹರ ಕವಿ ಶೈವಗುರುಗಳಿಂದ ಆಚರಣೆಯ ವಿಧಿಗಳನ್ನು ಪೂರೈಸಿದ ಉದಾಹರಣೆ ನೀಡಿದ್ದಾನೆ. ಇವನ ಪ್ರಕಾರ ಊರಲ್ಲಿರುವ ಶ್ರೇಷ್ಠರಾದ ಶೈವ ಗುರುಗಳೇ ಶಿವಭಕ್ತರ ಧರ್ಮಾಚರಣೆಯ ವಿಧಿಕರ್ಮಗಳನ್ನು ಪೂರೈಸುವವರಾಗಿದ್ದಾರೆ. ಮಹಾದೇವಿ ಅಂತಹ ಶೈವಗುರುವಿನಿಂದ ಲಿಂಗದೀಕ್ಷೆ ಪಡೆದಿದ್ದಳು.”[೧೨೫]. ಲಿಂಗವೇ ತಾನಾಗಿರುವ, ಮೈಯೆಲ್ಲ ಭಸ್ಮವ್ರತವಾಗಿರುವ, ಜಡೆ, ರುದ್ರಾಕ್ಷಿಮಾಲೆ ಧರಿಸಿರುವ, ಕೈಯಲ್ಲಿ ಶಿವಲಿಂಗ ಹಿಡಿದಿರುವ ಮಹಾಹುರಾವಿನ ವರ್ಣನೆಯೊಂದು ಪ್ರಭುದೇವರ ರಗಳೆಯಲ್ಲಿ ಬಂದಿದೆ. ಅಂತಹ ಗುರುವಿನ ಲಿಂಗ ಕಳೆ– ಲಿಂಗಜೀವವೇ ಪ್ರಭುವಿಗೆ ಬಂದಂತೆ ಪದ್ಮಾಸನಸ್ಥ ಅನಿಮಿಷಯ್ಯ ಶಿವಯೋಗಿಯ

ಕೈಯಿಂದ ಅಲ್ಲಮನ ಕೈಗೆ ಲಿಂಗ ಬಂದಿತೆಂದು ಕವಿ ವರ್ಣಿಸುತ್ತಾನೆ."[೧೨೬] ಇಂಥ ಗುರುವಿನ ದರ್ಶನ, ಗುರುಕಾರುಣ್ಯ, ಗುರುವಿನಿಂದ ಪಡೆದ ಲಿಂಗ ಇವು ಅಲ್ಲಮನ ಬದುಕಿಗೆ ದೊಡ್ಡ ತಿರುವನ್ನು ತರುತ್ತವೆ. ವೇದಗಳಿಗತೀತವಾದ ಶೈವಕ್ರಿಯೆ ಈ ದೀಕ್ಷೆಯೆಂಬುದು ಹರಿಹರನ ಅಭಿಮತವಾಗಿದೆ.

ಶಿವವಾಹನ ವೃಷಭ ಅಥವಾ ನಂದಿಯಿಂದ ಬಸವಣ್ಣನ ಲಿಂಗದೀಕ್ಷೆಯ್ತೆಂದು ಕವಿ ಬರೆಯುತ್ತಾನೆ."[೧೨೭] ಕಪ್ಪಡಿ ಸಂಗಮದ ಶಂಕರಾಲಯನ ಸ್ಥಾನಪತಿಯೆನಿಸಿದ ಈಶಾನ್ಯಗುರುಗಳು ಊರು ಬಿಟ್ಟು ಬಂದ ಬಸವಣ್ಣನಿಗೆ ಮೊದಲ ಆಶ್ರಯ ನೀಡಿದವರು. ಬಹುಶಃ ನಂದಿಯ ಮೊಗವಾಡವನ್ನು ನಂಬದೇ ಹೋದರೆ ಈಶಾನ್ಯ ಗುರುಗಳು ಬಸವಣ್ಣನಿಗೆ ದೀಕ್ಷೆ ನೀಡಿರಬೇಕೆಂಬ ಊಹೆಗೆ ಆಸ್ಪದವಿದೆ. ಈ ಸಂದರ್ಭದಲ್ಲಿ ಮತ್ತೆ ಮತ್ತೆ ಕೇಳಿ ಬರುವ ಪದ 'ಕಾರಣಿಕ' ಈ ಕಾರಣಿಕ 'ಸಿದ್ಧ' 'ಸಾಧಕ' ವೆಂಬ ಮೂವರ ಬಗ್ಗೆ ಚನ್ನಬಸವಣ್ಣ ತನ್ನ ವಚನದಲ್ಲಿ ಇವರು ಗುರುವರ್ಗದವರೆಂದು ಸೂಚಿಸಿದ್ದನ್ನು ಡಾ.ಪಿ.ವಿ. ನಾರಾಯಣರು ಉಲ್ಲೇಖಿಸುತ್ತಾರೆ"[೧೨೮] ರೇವಣಸಿದ್ಧ, ಅಲ್ಲಮ ಪ್ರಭುಗಳನ್ನು ಇದೇ ಹಿನ್ನೆಲೆಯಲ್ಲಿ ಹರಿಹರ ಪರಿಭಾವಿಸಿದ್ದಾನೆ. ಇವರು ಮಾತ್ರ ಯಾರೊಬ್ಬರಿಗೂ ಲಿಂಗದೀಕ್ಷೆಯಂತಹ ಆಚರಣೆಯನ್ನು ಮಾಡಿದವರಲ್ಲ. ಅಂತಹ ಒಂದಾದರೂ ಉಲ್ಲೇಖ ರಗಳೆಗಳಲ್ಲಿಲ್ಲ. ಶಿವಭಕ್ತರಿಗೆ ದೀಕ್ಷಾ ವಿಧಿ ನೀಡುವ ವೃತ್ತಿಯೊಂದು ಶೈವ ಆಚಾರ್ಯರಲ್ಲಿ ಮತಕ್ಕೆ ಪರಿವರ್ತಿಸಲು ಈ ಶೈವಚಾರ್ಯರು ದೀಕ್ಷೆ ನೀಡುವಂತಹ ವೃತ್ತಿ ನಡೆಸುತ್ತಿದ್ದರು. ಇಂದಿನ ಗುರುವರ್ಗದಲ್ಲಿ ಬರುವ ಅಯ್ಯನೆಂಬ ವೀರಶೈವ ಪ್ರಭೇದ ಈ ಸಂಸ್ಕರಣೆಯ ವೃತ್ತಿ ಮಾಡುತ್ತಿರುವುದು ಇಂದಿಗೂ ಕಂಡು ಬರುತ್ತದೆ.

ದಕ್ಷಿಣೆಯ ಆಸೆಗೆ ಯಾರು ಬೇಕಾದರೂ 'ಗುರು'ಗಳಾಗುವ ಸಾಧ್ಯತೆ ಇದ್ದುದರಿಂದ ಯೋಗ್ಯ ಗುರುವಿನ ಆಯ್ಕೆಯನ್ನು ಮಾಡುತ್ತಿದ್ದರು. ಉದಾಹರಣೆಗೆ ಹಾವಿನಹಾಳ ಕಲ್ಲಯ್ಯನ ಪ್ರಸಂಗ, ಆತ ಹೊನ್ನ ಕಾಯಕ (ಅಕ್ಕಸಾಲಿ) ವೃತ್ತಿಯ ಶಿವಭಕ್ತ, ಸಿದ್ಧರ ಚಕ್ರವರ್ತಿಯೇ ನನಗೆ ಓಬ್ಬ ಗುರುವನ್ನು ಕರುಣಿಸು ಎಂದು ಆತ ರೇವಣಸಿದ್ಧನನ್ನು ಆರ್ತನಾಗಿ ಬೇಡಿಕೊಳ್ಳುವ ಚಿತ್ರಣವೊಂದು ರಗಳೆಯಲ್ಲಿದೆ."[೧೨೯] ಮುಂದೆ ರೇವಣಸಿದ್ಧನು ತನ್ನ ಮುಂದಿರುವ ರುದ್ರಮುನಿ ದೇವನಿಗೆ ಮಗನೇ ಕಲ್ಲಯ್ಯನಿಗೆ ಗುರುವಾಗು ಹೋಗು ಎಂದು ಆಜ್ಞೆ ಮಾಡುತ್ತಾನೆ. ಕಲ್ಲಯ್ಯನ ದೀಕ್ಷಾ ವಿಧಿ ನಡೆಯುತ್ತದೆ. ವೇದಶಾಸ್ತ್ರ ಗೀತಗಳಿಂದ ವಿಪ್ರರನ್ನು ಲೋಕಾಯುತರನ್ನು, ಬೌದ್ಧರನ್ನು ಸೋಲಿಸಿದ ಕಲ್ಲಯ್ಯ 'ಶೈವಸಾಮ್ರಾಜ್ಯ' ಆಳುತ್ತಾನೆಂದು ಕವಿ ಬರೆಯುತ್ತಾನೆ. ಕವಿಯ ಲಿಂಗದೀಕ್ಷೆಯನ್ನು ಶೈವರ ವಿವಾಹ ಸಮಾರಂಭಕ್ಕೆ ಹೋಲಿಸಿದುದನ್ನು ಕಾಣುತ್ತೇವೆ. ಲಿಂಗಪತಿಯಾಗಿ ಶರಣಸತಿಯಾಗುವ ಭಕ್ತ ವಿವಾಹವೇ ಲಿಂಗದೀಕ್ಷೆಯೆಂಬ ಅಭಿಪ್ರಾಯ ಇಲ್ಲಿದೆ. ರಂಗಮಂಟಪವೇ ವಿವಾಹ ಮಂಟಪವಾಗಿತ್ತು. ಪರಿವಾರ

ದೇವರುಗಳೇ ನಿಬ್ಬಣಿಗರಾಗಿದ್ದರು. ಕರಣಗಳೇ ಸುವಾಸಿನಿಯರು, ಸಕಲೇಂದ್ರಿಯಗಳೇ ಆರತಿ, ಭಕ್ತರಸವೇ ಕೈಧಾರೆ, ಗುರು ಕಾರುಣ್ಯವೇ ಮುಹೂರ್ತ, ಜನನ ಮರಣಗಳೇ ತೆರೆಹಿಡಿದವರು, ನಿಷ್ಠೆ ನೇಹಗಳೇ ಜೀರಿಗೆ–ಬೆಲ್ಲಗಳು, ಪಂಚಾಕ್ಷರಿಯೇ ಗತ್ತಿಃ, ಸದ್ಭಕ್ತಿಯೇ ಮತಿ, ಶಿವನೇ ಪತಿಯಾಗಿ ಬಸವನೇ ಸತಿಯಾದ ಲಿಂಗದೀಕ್ಷೆಯೆಂಬ ಮದುವೆಯ ವರ್ಣನೆಯಿದು."[೧೨೯] ಹೀಗೆ ದೀಕ್ಷಾವಿಧಿಯ ಸಂಭ್ರಮದ ಮದುವೆಯಂತೆ ನಡೆಯುತ್ತಿತ್ತೆಂಬ ಚಿತ್ರ ಇಲ್ಲಿ ಗೋಚರಿಸುತ್ತದೆ.

## ಲಿಂಗಮೌಲ್ಯ ಸಂಸ್ಕೃತಿ

ಲಿಂಗಧಾರಣೆಯನ್ನುವುದು ಆತ್ಮೋದ್ಧಾರದ ಆತ್ಮಬಲದ ಒಂದು ಸಾಧಕವಾದಂತೆ ವರ್ಣ, ವರ್ಗ, ಲಿಂಗಭೇದಗಳನ್ನು ನಿರಾಕರಿಸಿದ ಒಂದು ಹೊಸ ಮೌಲ್ಯವಾಗಿದೆ. ಯಾವ ಸಂಸ್ಕಾರಗಳಿಂದ ವಿಪ್ರರು ಭೇದ ಸಂಸ್ಕೃತಿಯನ್ನು ಜತನವಾಗಿ ಕಾಪಾಡಿಕೊಂಡು ಬಂದಿದ್ದರೋ ಅದಕ್ಕೆ ನೀಡಿದ ದೊಡ್ಡ ಪೆಟ್ಟಾಗಿದೆ. ಈ ಲಿಂಗ ಜನ್ನಿವಾರವನ್ನು ಕಿತ್ತೊಗೆದು ಬಂದ ಬಸವಣ್ಣನ ಲಿಂಗ ದೀಕ್ಷೆಯನ್ನು ಯಾರೂ ಪ್ರೋತ್ಸಾಹಿಸಲಿಲ್ಲ. ಏಕಾಂಗಿಯಾಗಿಯೇ ಲಿಂಗವಂತನಾದ ಆತ ಪರಿವರ್ತಿತರಾಗುವವರಿಗೆ ಆದರ್ಶವಾಗಿ ಬೆಳೆದವನು. ಹೀಗೆ ಬೆಳೆಯಲು ಅವಶ್ಯವಿರುವ ಹೋರಾಟ ರೂಪದ ಛಲವನ್ನು ಬೆಳೆಸಿದ ಸಾಧನವಾಗಿ ಲಿಂಗವು ರಗಳೆಗಳಲ್ಲಿ ಕಾಣಿಸಿದೆ.

ಬಸವಣ್ಣನ ಜನ್ನಿವಾರದ ಪ್ರತಿಭಟನೆಯಂತೆ ಬ್ರಾಹ್ಮಣರನ್ನು ಅಸ್ಪೃಶ್ಯರಂತೆ ಕಂಡ ಕಲ್ಲವ್ವೆಯ ಪ್ರಕರಣವೊಂದು ರಗಳೆಯಲ್ಲಿ ಚಿತ್ರಿತವಾಗಿದೆ. ಲಿಂಗವಂತೆ ಕಲ್ಲವ್ವೆಯನ್ನು ಮಿತ್ರ ಸೋಮಾಯಾಜಿ ಮುಟ್ಟಿದ್ದಕ್ಕೆ ಅಸ್ಪೃಶ್ಯ ಬ್ರಹ್ಮಶಿರಕರ ಎಂದು ಬೊಬ್ಬಿರಿದು ನೀರು ತುಂಬಿದ ಹರವೆಯನ್ನು ಅವಳು ಒಡೆದು ಹಾಕುತ್ತಾಳೆ."[೧೩೦] ಶೋಷಕವರ್ಗದ ಪುರೋಹಿತರು ಆಚರಿಸಿಕೊಂಡು ಬಂದ ಅಸ್ಪೃಶ್ಯತೆಯನ್ನು ಕಲ್ಲವ್ವೆ ಅದೇ ಪುರೋಹಿತ ವರ್ಗಕ್ಕೆ ಆಚರಿಸಿ ವಿಪ್ರರ ಭವಿತನವನ್ನು ಸೂಚಿಸುತ್ತಾಳೆ. ಹದಿನೆಂಟು ವರ್ಣಗಳಲ್ಲಿ ಶ್ರೇಷ್ಠವಾದ ವಿಪ್ರವರ್ಣವನ್ನು ಮುಟ್ಟಲಾರದ ಅಸ್ಪೃಶ್ಯ ವರ್ಣವನ್ನಾಗಿಸಿ ಲಿಂಗಧಾರಣೆಯ ಶ್ರೇಷ್ಠತೆಯನ್ನು ಕಲ್ಲವ್ವೆ ಮೆರೆಯುತ್ತಾಳೆ. ಹೀಗೆ ಲಿಂಗವು ಸಮಾಜ, ಧರ್ಮ, ಆಧ್ಯಾತ್ಮದಂತಹ ಕ್ಷೇತ್ರಗಳಲ್ಲಿನ ಉಪೇಕ್ಷಿತ ಅಂಶಗಳನ್ನು ಲಕ್ಷಿಸುವಂತೆ ಮಾಡಿ, ಸ್ಥಾವರ ಮೌಲ್ಯಗಳನ್ನು ಒಡೆದು ಚೈತನ್ಯಗೊಳಿಸಿದ ಹೊಸ ಮೌಲ್ಯವಾಗಿದೆ.

## ಲಿಂಗಪ್ರಕಾರಗಳು

ಹರಿಹರನಲ್ಲಿ ಶಿವಭಕ್ತನ ಆರಾಧ್ಯ ದೇವತೆಯು

೧. ತಾನು ಬಿಟ್ಟು ಬಂದಿರುವ ಮೂಲ ಗ್ರಾಮದಲ್ಲಿರುವ ದೇವಾಲಯದ ಲಿಂಗ

೨. ತಾನು ಬರುತ್ತಿರುವ ಗ್ರಾಮದಲ್ಲಿನ ದೇವಾಲಯದ ಲಿಂಗ

೩. ಇವುಗಳ ಪ್ರತೀಕವೆಂಬಂತೆ ಹೋದೆಡೆಯಲ್ಲಿ ಕೊಂಡೊಯ್ದು ನೆಲದ ಮೇಲಿಟ್ಟು ಪೂಜಿಸುವ ಲಿಂಗ,

೪. ಉರಸ್ಥಲದ ಲಿಂಗ ಈ ಬಗೆಯ ಪ್ರಕಾರಗಳಲ್ಲಿ ದೊರೆಯುತ್ತದೆ.

ಕೇಶಿರಾಜ ದಂಪತಿಗಳು ತಮ್ಮ ಸ್ವಂತ ಗ್ರಾಮದ ಸೋಮೇಶ್ವರಲಿಂಗ; ತಾನು ಜೀವನ ನಡೆಸುತ್ತಿದ್ದ ಕಲ್ಯಾಣದ ತ್ರಿಪುರಾಂತರೇಶ್ವರ ಲಿಂಗ; ಇವುಗಳಿಗೆ ಪ್ರತೀಕವಾಗಿ ಪ್ರಯಾಣದ ಸಂದರ್ಭದಲ್ಲಿ ಪೆಟ್ಟಿಗೆಯಲ್ಲಿ ಒಯ್ದು ಪೂಜಿಸುವ ಲಿಂಗ ಈ ವಿಭಿನ್ನ ಲಿಂಗಗಳನ್ನು ಆರಾಧಿಸುತ್ತಿರುವುದು ರಗಳೆಯಲ್ಲಿ ಕಂಡುಬರುತ್ತದೆ.[೧೨೮] ತಮ್ಮ ಇಷ್ಟದೇವತೆಯ ಕುರುಹು ಆಗಿರುವ ಇದನ್ನು ಶೈವರು 'ಇಷ್ಟಲಿಂಗವೆಂದೇ ಕರೆಯುತ್ತಿರಬೇಕು"[೧೨೯]. ಇದರಿಂದ ಭಿನ್ನವಾಗಿದೆ. ವಚನಕಾರರು ಹೇಳುವ ಉರಸ್ಥಲದ ಲಿಂಗ ಅಥವಾ ಇಷ್ಟಲಿಂಗ. ಇವೆರಡರಲ್ಲಿ ಒಂದು ಸ್ಥಾವರ ಲಿಂಗದ ಪ್ರತೀಕ ಇನ್ನೊಂದು ಆತ್ಮಚೈತನ್ಯದ ಪ್ರತೀಕ, ಹರಿಹರನು ಮಹಾದೇವಿಯನ್ನು ಹೊಂಗಡದ ಲಿಂಗವಂತೆ; ಬಸವಣ್ಣನ ಮಗ ಸಿದ್ಧರಸನನ್ನು ಹೊಂಗಡದ ಲಿಂಗವಂತ' ಎನ್ನುವಲ್ಲಿ ಇಷ್ಟಲಿಂಗವನ್ನೇ ಸೂಚಿಸುವಂತಿದೆ."[೧೩೦] ವೀರಶೈವನು ನಿರಂತರ ಮೈಮೇಲೆ ಧರಿಸುವ ಇದು ಆಯತ ಲಿಂಗವಾಗಿದೆ.

ಹರಿಹರನಲ್ಲಿ ಶೈವ ಪರವಾದ ದೇವಾಲಯದ ಸ್ಥಾವರಲಿಂಗ, ಇದರ ಪ್ರತೀಕವಾದ ಇಷ್ಟಲಿಂಗ ಪ್ರಧಾನವಾಗಿದ್ದು ವೀರಶೈವ ಇಷ್ಟಲಿಂಗ ಪೂಜೆಯೂ ಸೂಚಿತವಾಗಿದೆ. ಸಾಮಾನ್ಯವಾಗಿ ಎಲ್ಲ ಶರಣರು ಸ್ಥಾವರ ಲಿಂಗಪೂಜೆ ಮಾಡುವುದು ರಗಳೆಗಳಲ್ಲಿದೆ. ಕೇಶಿರಾಜನು ಸ್ಥಾವರ ಲಿಂಗವನ್ನು ಅವರ ಸಂಕೇತವಾದ ಇಷ್ಟಲಿಂಗವನ್ನು ಪೂಜಿಸುವವನಾಗಿದ್ದಾನೆ."[೧೩೧] ಕೂಡಲ ಸಂಗಮ ಬಸವಣ್ಣನಿಗೆ "ಮನದೊಳಗೆ, ಕರದೊಳಗೆ ತನುವನೊಳಗಿರ್ದಪೆ" ಎಂದು ಕನಸಿನಲ್ಲಿ ಭರವಸೆ ನೀಡುವುದು ವೀರಶೈವದ ಇಷ್ಟಲಿಂಗದ ಸೂಚನೆಯೇ ಆಗಿದೆ. ಇಲ್ಲಿ ಜನ್ನಿವಾರದ ಶೈವ, ಇಷ್ಟಲಿಂಗದ ವೀರಶೈವ ಪ್ರಭೇದವು ಜನ್ನಿವಾರ ಮತ್ತು ಲಿಂಗಧಾರಣೆಯ ಮೂಲಕವೇ ವ್ಯಕ್ತವಾಗುತ್ತಿತ್ತು.

ಆಚರಣೆಯು ಶೈವರಲ್ಲಿ ಸ್ಥಾವರ ಲಿಂಗಕ್ಕೆ ಸೀಮಿತವಾಗಿ ವೀರಶೈವರಲ್ಲಿ ಕೆಲವೊಮ್ಮೆ ಸ್ಥಾವರಲಿಂಗ ಮತ್ತು ಇಷ್ಟಲಿಂಗಗಳಿಗೆ ವ್ಯಾಪಕವಾಗಿ ಪ್ರಚಲಿತದಲ್ಲಿತ್ತೆಂಬುದು ತಿಳಿದು ಬರುತ್ತದೆ.

## ಸಾಮೂಹಿಕ ಲಿಂಗಾರ್ಚನೆ

ಸಾಮೂಹಿಕ ವೀರಶೈವ ಭಕ್ತರ ವೈಶಿಷ್ಟ್ಯ, ಭಕ್ತರೆಲ್ಲ ಒಂದೆಡೆ ಸೇರಿ ಸಾಮೂಹಿಕ ಲಿಂಗಾರ್ಚನೆ ಮಾಡುವುದು ರೂಢಿಯಲ್ಲಿದ್ದಿತೆಂದು ರಗಳೆಗಳು ಸೂಚನೆ ನೀಡುತ್ತವೆ. ಪರ್ವದ ಹೆಸರಿನಲ್ಲಿ, ಶಿವರಾತ್ರಿಯ ಹೆಸರಿನಲ್ಲಿ, ಸಹಭೋಜನದ ನೆಪದಲ್ಲಿ ಇಂಥ ಸಾಮೂಹಿಕ ಲಿಂಗಾರ್ಚನೆ ನಡೆದ ಘಟನೆಗಳು ರಗಳೆಗಳಲ್ಲಿವೆ. ಈ ಲಿಂಗಾರ್ಚನೆಗಾಗಿಯೇ ಮಹಾಮನೆಗಳಿರುತ್ತಿದ್ದವು. ಇವು ಬಸವಣ್ಣನ ಮಹಾಮನೆ, ಕೇಶಿರಾಜನ ಮಹಾಮನೆ, ತೆಲುಗು ಜೊಮ್ಮಯ್ಯನ ಮಹಾಮನೆ, ವಂಶವರ್ಧನನ ಗುಡಿಸಲು ಮುಂತಾದೆಡೆಯಲ್ಲಿ ಲಿಂಗಾರ್ಚನೆ ಮಾಡಿದ ಘಟನೆಗಳು ರಗಳೆಗಳಲ್ಲಿ ಲಭ್ಯವಿದೆ.

ಲಿಂಗೋಪಾದಿಯ ವಸ್ತುಗಳನ್ನು ಕೊರಳಲ್ಲಿ ಕಟ್ಟಿಕೊಂಡು ಕೆಲವರು ಈ ಮಹಾಮನೆಗಳಲ್ಲಿ ಸೇರಿಕೊಳ್ಳುತ್ತಿದ್ದರೆಂದು ತೋರುತ್ತದೆ. ಉದಾ: ಲಿಂಗ ಕಟ್ಟಿದ್ದೇವೆ ಎಂಬ ಭಾವನೆ ಬರುವಂತೆ ಬದನೆಕಾಯಿ ಕಟ್ಟಿಕೊಂಡು ವಂಚಕರು ಬಸವಣ್ಣನ ಮಹಾಮನೆ ಪ್ರವೇಶಿಸಿದ ಪ್ರಸಂಗ, ಇನ್ನೊಂದು ವೈಶಿಷ್ಟ್ಯ ಪೂರ್ಣ ಉದಾ: ಉಳ್ಳಿ ಪರ್ವ ಉಳ್ಳಿಗಳಿಂದ ವಿವಿಧ ಬಗೆಯ ವಸ್ತು, ಸ್ವಭಾವ ಹೊಮ್ಮುವಂತೆ ಉಳ್ಳಿಗಳನ್ನು ಉಪಯೋಗಿಸಿ ಸಿದ್ಧಗೊಳಿಸಿದ್ದರ ಚಿತ್ರಣ ಬಸವೇಶ್ವರ ದೇವರ ರಗಳೆಯಲ್ಲಿ ಬಂದಿದೆ."[೧೩೨] ಗಣಪರ್ವಗಳ ಸಂದರ್ಭದಲ್ಲಿ ಸಮೂಹ ಸಮೂಹವಾಗಿ ಲಿಂಗಾರ್ಚನೆಗೆ ತೊಡೆಗಿದುದರ ಚಿತ್ರಣವನ್ನು ರಗಳೆಯಲ್ಲಿ ಕಾಣುತ್ತೇವೆ. ಶಿಪುರದ ವಂಶವರ್ಧನನ ಗುಡಿಸಲಿನಲ್ಲಿ ಏಳುದಿನ ಲಿಂಗಾರ್ಚನೆ ಶಿವಭಕ್ತಿ ಸುಖ ಪ್ರಸಂಗ ನಡೆದಾಗ ಶರಣ ಸಮೂಹವೇ ಅಲ್ಲಿ ನೆರೆದಿತ್ತು."[೧೩೩]

## ವೈಯಕ್ತಿಕ ಲಿಂಗಾರ್ಚನೆ

ಸಾಮೂಹಿಕ ಲಿಂಗಪ್ರಜೆಯಲ್ಲದೆ ವ್ಯಕ್ತಿಗತವಾದ ಲಿಂಗಪೂಜಾ ವಿಧಿಗಳನ್ನು ಬಸವೇಶ್ವರ ದೇವರ ರಗಳೆಯಲ್ಲಿ ಕಾಣುತ್ತೇವೆ. ಹರಿಹರನೇ ಬಸವಣ್ಣ, ಬಸವಣ್ಣನೇ ಹರಿಹರನೆಂಬಂತೆ ಚಿತ್ರಿತವಾದ ಬಸವಪೂಜಾ ವಿವರ ಅಂದಿನ ಕಾಲದ ಶಿವಭಕ್ತನೊಬ್ಬನ ದಿನಚರಿಯಂತೆ ಭಾಸವಾಗುತ್ತದೆ. ದೀಕ್ಷಾ ಪೂರ್ವದ ಅಂಥ ಚಿತ್ರಹೀಗಿದೆ"[೧೩೪] ಬಸವಣ್ಣ ಪ್ರಭಾತ ಸಮಯಕ್ಕೆದ್ದು ನಾನಾವಿಧದ ಹೂವುಗಳ ಸಂಗ್ರಹ ಮಾಡುತ್ತಿದ್ದ, ಅಳಿಯರಗದ ಅನಿಲನಲುಗದ ರವಿಕರಂ ಪುಗದ "ಮೀಸಲು ಮೊಗ್ಗೆಗಳವು" ನದಿಯಿಂದ ತಿಳಿನೀರನ್ನು ತುಂಬುತ್ತಿದ್ದ ನಂತರ ಶಿವಾಲಯ ಹೊಕ್ಕು ತಿಳಿ ನೀರಿನಿಂದ

ಹೊನ್ನ ಕಳಸಗಳನ್ನು ತೊಳೆಯುತ್ತಿದ್ದ. ಲಿಂಗ ಮಜ್ಜನ ಮಾಡುತ್ತಿದ್ದ. ಶ್ರೀಗಂಧವನ್ನಲಂಕರಿಸಿ ಹೂಗಳಿಂದ ಸಿಂಗರಿಸುತ್ತಿದ್ದ. ಧೂಪದ ಪರಿಮಳವನ್ನುಂಟು ಮಾಡುತ್ತಿದ್ದ, ದೀಪ ಬೆಳಗುತ್ತಿದ್ದ. ಕನ್ನಡ ಅಡ್ಡಣಿಗೆಗಳ ಮೇಲೆ ಹೊನ್ನ ಹರಿಯಾಣದಲ್ಲಿ ಅಮೃತಮಯವೆನಿಸುವ ಪ್ರಸಾದ ಎಡೆಯಿಟ್ಟು, ನಡುವೆ ತೆರೆಬಿಟ್ಟು ಹೊರಗೆ ಕೈಮುಗಿದು ಕುಳಿತು ಸಂಗಮನಿಗೆ ಆರೋಗಿಸಲು ಕೇಳುತ್ತಿದ್ದ, ಮೃದಂಗ, ಕಹಳೆ, ಶಂಖ, ಭೇರಿ ವಾದ್ಯ ಘೋಷಗಳು ನಡೆಯುತ್ತಿದ್ದವು. ಇಷ್ಟಲ್ಲದೆ ಶಿವನಾರೋಗಣೆಯ ಕೊನೆ ಭಾಗವಾಗಿ ನೀರನ್ನಿತ್ತು. ಕೈಘಟ್ಟಿಯನ್ನಿತ್ತು. (ಶ್ರೀಗಂಧದ ಸಾಮಾನು) ಕಂಪಿನ ಕರ್ಪೂರದ ವೀಳೆಯೆನ್ನಿತ್ತು. ಮಂಗಳಾರತಿಯೆತ್ತುತ್ತಿದ್ದ. ಚಾಮರ ಬೀಸಿ ಶಿವನಿಗೆ ಕನ್ನಡಿಯನ್ನು ತೋರುತ್ತಿದ್ದ. ಅಮೇಲೆ ತನಗೆ ಸಾಕೆನಿಸುವಷ್ಟು ನಾನಾ ವಿಧದ ಸ್ತುತಿಗೀತಗಳನ್ನು ಹಾಡುತ್ತಿದ್ದ. ಆನಂದದಿಂದ ಕುಣಿದಾಡುತ್ತಿದ್ದ; ನಲಿದಾಡುತ್ತಿದ್ದ ಅನಂತರ ಪಾದೋದಕ ಪ್ರಸಾದವನ್ನು ಸ್ವೀಕರಿಸುತ್ತಿದ್ದ. ಈ ಶಿವಪೂಜೆ ಲಿಂಗ ಜಂಗಮವೆರಡೂ ವಿಭೇದವೋ ಎಂಬಂತಿತ್ತೆಂದು ಹರಿಹರ ವರ್ಣಿಸುತ್ತಾನೆ.

ದೀಕ್ಷಾನಂತರ ಬಸವಣ್ಣ ಕರಕಮಲದಲ್ಲಿ ಶಿವಲಿಂಗ ಧರಿಸಿ ಪೂಜಿಸುತ್ತಿದ್ದ. ಲಿಂಗಕ್ಕಾಗಿ ಬಸವಣ್ಣನಲ್ಲಿ ರನ್ನದ ಸಜ್ಜೆ ಇತ್ತು. ಮುಂಜಾನೆಯ ಪ್ರಜೆಯಲ್ಲದೆ ಸಂಧ್ಯಾಸಮಯದಲ್ಲಿಯೂ ಬಸವಣ್ಣ ಪೂಜಾ ನಿರತನಾಗಿರುತ್ತಿದ್ದ. ದೀಕ್ಷಾ ಪೂರ್ವದಲ್ಲಿ ಶಿವಾಲಯದ ಲಿಂಗವನ್ನು ಅರ್ಚಿಸಿ ಲಿಂಗೋಧಕ ಪಡೆಯುತ್ತಿದ್ದರೆ, ದೀಕ್ಷಾ ನಂತರದಲ್ಲಿ ಶರಣರ ಪಾದೋದಕ ಸೇವಿಸುತ್ತಿದ್ದ. ಲಿಂಗ ಮತ್ತು ಶರಣ ಅಭೇದವೆನ್ನುವ ವೀರಶೈವ ಪ್ರಕ್ರಿಯೆ ಇಲ್ಲಿದೆ ಎಂಬುದನ್ನು ಗಮನಿಸಬೇಕು. ಇಲ್ಲಿ ಶರಣ ಎಂಬ ಪದ ಎಷ್ಟೋ ಸಲ ಜಂಗಮ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಅಲ್ಲದೆ 'ಲಿಂಗ'ವು ವೈಯಕ್ತಿಕತೆಯನ್ನು ಶರಣ ಅಥವಾ ಜಂಗಮವು ಸಮಾಜವನ್ನು ಪ್ರತಿನಿಧಿಸುತ್ತದೆ. ಅದಕ್ಕಾಗಿ ಹರಿಹರ ಕವಿಲಿಂಗಾರ್ಚನೆಯ ಜನ್ಮ ದಾಸೆ ಕಳೆದು ಕರ್ಮವನ್ನು ನೀಗುತ್ತದೆ ಎನ್ನುತ್ತಾನೆ."[೧೩೫] ಇಂತಹ ಅಭಿಪ್ರಾಯದ ಹಿನ್ನೆಲೆಯಲ್ಲಿಯೇ ಕವಿ 'ಶಿವಭಕ್ತಿಯೂ ಕರ್ಮವೂ ಒಂದಾಗಿ ಇರಲಾರವು"[೧೩೫] ಮಾತನ್ನು ಹೇಳಿ ಬಸವಣ್ಣನಿಂದ ಕರ್ಮದ ಜನಿವಾರ ಹರಿದು ಹಾಕಿಸಿ ಶಿವಭಕ್ತಿಯ ಲಿಂಗರ್ಚನೆಯ ಮಾಹಿತಿ ತಿಳಿಸುತ್ತಾನೆ.

## ಶರಣರ ಅಂತರಂಗದ ಆಚಾರಗಳು

ವಚನಕಾರರು ಅನೂಚಾನವಾಗಿ ಬಂದ ಯೋಗ್ಯ ವಲ್ಲದ ಆಚಾರಗಳನ್ನು ಎಷ್ಟು ತಿರಸ್ಕರಿಸಿದರೋ ಯೋಗ್ಯವಾದವುಗಳನ್ನು ಗಟ್ಟಿಗೊಳಿಸಲು ಅಷ್ಟೇ ರಕ್ತಗತ ಮಾಡಿಕೊಂಡರು; ಮತ್ತು ಇತರರಿಗೂ ಬೋಧಿಸಿದರು. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ

ಇವು ಭಕ್ತರ ಅಂತರಂಗ, ಬಹಿರಂಗ ನಡವಳಿಕೆಗಳನ್ನು ನಿಯಂತ್ರಿಸುವ, ಗಟ್ಟಿಗೊಳಿಸುವ ಆಚಾರಗಳಾಗಿವೆ. ಹರಿಹರ ಒಂದಿಲ್ಲ ಒಂದು ರೀತಿಯಲ್ಲಿ ತನ್ನ ಪಾತ್ರಗರಿಗೆ ಆಚಾರಗಳ ಆವರಣ ಹಾಕಿದುದುಂಟು, ಕೇಶಿರಾಜ, ಬಸವಣ್ಣ, ಮಹಾದೇವಿ, ಭೃತ್ಯಾಚಾರಕ್ಕೆ ಆದಯ್ಯ, ಶಂಕರದಾಸಿಮಯ್ಯ, ಕೋವೂರ ಬೊಮ್ಮಯ್ಯ, ಮಾರುಡಿಗೆ ನಾಚಿತಂದೆ, ಏಕಾಂತರಾಮಿ ತಂದೆ, ತೆಲುಗು ಜೊಮ್ಮಯ್ಯ ಇವರೆಲ್ಲ ಗಣಾಚಾರ, ಶಿವಾಚಾರಕ್ಕೆ ಸಂಕೇತವಾಗಿದ್ದಾರೆ.

ಇಲ್ಲಿ ಬರುವ ಎಲ್ಲಾ ಶಿವಭಕ್ತರು ಲಿಂಗಾಚಾರದ ಏಕಸೂತ್ರದಲ್ಲಿದ್ದವರೇ, ಪ್ರತಿಯೊಬ್ಬರು ಒಂದಿಲ್ಲೊಂದು ಕಾಯಕ ಕೈಗೊಂಡು ಸಂಪಾದನೆಯ ವಿನಿಮಯವನ್ನು ಶಿವಭಕ್ತರಲ್ಲಿಯೇ ಮಾಡಿಕೊಳ್ಳುವ ಸದಾಚಾರಿಗಳಾಗಿದ್ದಾರೆ. ಭಕ್ತರ ನಡವಳಿಕೆ ಈ ಪಂಚಚಾರಗಳ ಆವರಣದಲ್ಲಿಯೇ ಬರುತ್ತವೆ. ಹರಿಹರ ಇದನ್ನು ವಿಂಗಡಿಸದೆ ಸಂದರ್ಭಕ್ಕೆ ತಕ್ಕಂತೆ ಭಾವುಕನಾಗಿ ವರ್ಣಿಸಿರುವುದನ್ನು ಗಮನದಲ್ಲಿಡಬೇಕು. ತಾವು ಎಂತಹ ಶೀಲಗಳನ್ನು ಬದುಕಿದ್ದೇವೆ ಎಂಬುದನ್ನು ಬಸವಣ್ಣ, ಕೇಶಿರಾಜಾದಿಗಳ ಮೂಲಕ ಹರಿಹರ ಕೊಡುತ್ತಾನೆ. ಬಹುಶಃ ವಚನಕಾರರ ಮತ್ತು ಹರಿಹರನ ಕಾಲಾವಧಿ ಹತ್ತಿರವಿರುವುದರಿಂದ ಶಿವಭಕ್ತರ ಅದರಲ್ಲೂ ಬಸವಣ್ಣನಂತಿರುವ ಅನೇಕ ಮಹಾನಿಯರು ಹರಿಹರನ ಕಾಲಾವಧಿಯಲ್ಲಿರಬೇಕು. ಧರ್ಮ ಸಂಘರ್ಷದ ಚಿತ್ರಣದಲ್ಲೆಲ್ಲ ಅಂಥ ಶಿವಭಕ್ತರ ನಡವಳಿಕೆ ಹರಿಹರನಿಂದ ವ್ಯಕ್ತವಾಗುವುದನ್ನು ಗಮನಿಸಬೇಕು.

## ಭಕ್ತಿ ಭಂಡಾರಿ ಬಸವಣ್ಣನ ಆಚಾರಗಳು

ಭೃತ್ಯಾಚಾರಿ ಬಸವಣ್ಣ ತನ್ನ ಬದುಕಿನಲ್ಲಿ ಅಳವಡಿಸಿಕೊಂಡ ಆಚಾರಗಳನ್ನು ಹರಿಹರ ಹೀಗೆ ಕಟ್ಟಿಕೊಡುತ್ತಾನೆ."[೧೩೪]

೧. ಗುರುಲಿಂಗ ಎರಡೆಂಬ ಭೇದವಿಲ್ಲ.

೨. ಶರಣರನ್ನು ಸಂಗನಂತೆ ಕಾಣುವುದು.

೩. ಬಂದ ಭಕ್ತರನ್ನು ಆರಾಧಿಸುವುದು.

೪. ಬರುವ ಭಕ್ತರನ್ನು ಆದರಿಸುವುದು.

೫.	ಬರುವ ಭಕ್ತರನ್ನು ಹರುಷದಿಂದ ಎದುರುಗೊಳ್ಳುವುದು.

೬.	ಬೇಡಿದ ಶರಣರಿಗೆ ಇಲ್ಲೆನ್ನದೆ ಕೊಡುವುದು.

೭.	ಜಾಗೃತ, ಸ್ವಪ್ನ, ಸುಷುಪ್ತಾವಸ್ಥೆಯಲ್ಲಿ ಶರಣರನ್ನು ಸಂಗನೆಂದೇ ಭಾವಿಸುವುದು.

೮.	ಬೇಡದವರಿಗೆ ಮಿಗಿಲಾಗಿ ಆರಾಧಿಸುವುದು.

೯.	ನಿತ್ಯ ಶಿವರಾತ್ರಿ ಆಚರಿಸುವುದು ಇನ್ನು ಮುಂತಾದ ಆಚಾರಗಳಿವೆ.

ಹರಿಹರನ ಬಹಳಷ್ಟು ಪಾತ್ರಗಳು ಇಂತಹ ಅನೇಕ ನಿಯಮಗಳನ್ನು ಘೋಷಿಸಿಕೊಂಡು ಪೋಷಿಸಿಕೊಂಡು ಬದುಕಿದ ಚಿತ್ರಣ ರಗಳೆಗಳಲ್ಲಿ ದೊರೆಯುತ್ತದೆ.

**ಕೊಂಡಗುಳಿ ಕೇಶಿರಾಜನ ಆಚಾರಗಳು**

ಮೊದಲ ಬಸವಣ್ಣನಂತಿರುವ ಈ ಕೇಶಿರಾಜ ಶಿವಮತಕ್ಕೆ ದೊರೆತ ಮಹಾನುಭಾವ ಅವನ ಮಾತುಗಳು ಕೇವಲ ಮಾತಲ್ಲ; ತೊಟ್ಟ ಪ್ರತಿಜ್ಞೆಗಳಂತಿವೆ. ಅವನ ಆಚಾರಗಳು ಹೀಗಿವೆ.

೧.	ಶೈವಬಿಟ್ಟು ಅನ್ಯ ಅನ್ಯದೈವವಿಲ್ಲ; ಧ್ಯೇಯವಿಲ್ಲ.

೨.	ಶೈವಬಿಟ್ಟು ಅನ್ಯಸಮಯವಿಲ್ಲ.

೩.	ಸತಿಯನ್ನು ಬಿಟ್ಟು ಅನ್ಯರೆಡೆ ನೋಡುವುದಿಲ್ಲ.

೪.	ಶಿವಭಕ್ತರಿಗೆ ಬಿಟ್ಟು ಅನ್ಯರಿಗೆ ಕೊಡುವುದಿಲ್ಲ.

೫.	ಸತ್ಯವನ್ನು ಬಿಟ್ಟು ಅನ್ಯ ನುಡಿಯುವುದಿಲ್ಲ.

೬.	ಆಚಾರವನ್ನು ಬಿಟ್ಟು ದುರಾಚಾರ ನೆನೆಯುವುದಿಲ್ಲ; ನಡೆಯುವುದಿಲ್ಲ.

೭.	ಶಿವನನ್ನು ಬಿಟ್ಟು ಅನ್ಯರನು ನೆನಪಿಸುವುದಿಲ್ಲ.

೮. ನಿತ್ಯ ಶಿವರಾತ್ರಿ, ಶಿವಗೋಷ್ಠಿ ಇವಕ್ಕೆ ಹೊರತಾಗಿ ನಡೆಯಲಾರೆನೆಂಬ 'ದಿವ್ಯ' ತೊಟ್ಟ ಚಿತ್ರಣ ಕೇಶಿರಾಜನ ರಗಳೆಗಳಲ್ಲಿ ಬಂದಿದೆ.[೧೩೫]

**ಮಹಾದೇವಿಯಕ್ಕನ ರಗಳೆ**

ಪುರುಷ ಪ್ರಭುತ್ವಕ್ಕೆ ಪ್ರತಿಭಟನೆಯೊಡ್ಡಿದ. ಆಧ್ಯಾತ್ಮ ಸಂಸ್ಕೃತಿಗೆ ಪುರುಷನಷ್ಟೇ ಸಮಾನ ಹಕ್ಕು ಸ್ತ್ರೀಗಿದೆ ಎಂಬುದನ್ನು ಸಾಧಿಸಿದ ಮಹಾದೇವಿ ಆಚಾರಗಳು ಹೀಗಿವೆ.

೧. ತಂದೆ, ತಾಯಿಗಳ ಚಿಂತೆ ದೂರ ಮಾಡುವುದು.

೨. ಭಕ್ತರ ಅಪರಾಧಗಳು ಎಂತಿದ್ದರೂ ರಕ್ಷಿಸುವುದು.

೩. ನಾನಾ ವಿಧದಲ್ಲಿ ಶರಣರನ್ನು ಸಲುಹುವುದು.

೪. ಪುರಾತನರ ವಚನ (ಮಾತು) ಪ್ರಕಾರ ನಡೆಯುವುದು.

೫. ತನ್ನಿಚ್ಛೆಯಲ್ಲಿ ಶಿವಪೂಜೆ, ಮಹೇಶ್ವರ ಗೋಷ್ಠಿ, ಗುರುಪಾದ ಸೇವೆ ಮಾಡುವುದು. ಶಿವಲಾಂಛನ ಧಾರಿಗಳನ್ನು ಕಡೆಗಣಿಸದಿರುವುದು; ಸತ್ಕರಿಸುವುದು.

೬. ಗಂಡನ ತಪ್ಪುಗಳನ್ನು ಸಹಿಸುವುದು, ಸಹನೆ ಮೀರಿದಾಗ ತನಗೆ ತಿಳಿದಂತೆ ಬದುಕುವುದು.

ಮಹಾದೇವಿ ಒಪ್ಪಂದದ ಪ್ರಕಾರ ಕೌಶಿಕನನ್ನು ಮದುವೆಯಾಗಿದ್ದಳು. ಮದುವೆಯಾಗುವುದರೊಂದಿಗೆ ಅದೇ ಒಪ್ಪಂದದಂತೆ ರಾಜ್ಯಭಾರ ಮಾಡುವ ರಾಣಿಯೂ ಆಗಿದ್ದಳು. ರಾಜ್ಯ ಸೂತ್ರದಂತಹ ಕ್ಷಾತ್ರೋಚಿತ ಅಧಿಕಾರ ಬಲದಿಂದ ಅವಳು ಶಿವಭಕ್ತರ ಅಪರಾಧಗಳನ್ನು ರಕ್ಷಿಸಲು ಸಿದ್ಧವಾದಂತಿದೆ.[೧೩೬] ಗಂಡನಿಗೆ ಹೆಂಡತಿಯಾಗುವುದೆಂದರೆ ಗುಲಾಮಳಾಗುವುದಲ್ಲ. ಅದಕ್ಕಾಗಿ ತಪ್ಪುಗಳ ಮೂರು ಮಿತಿಯನ್ನು ಮಹಾದೇವಿ ಹಾಕಿದ್ದಾಳೆ. ಅರ್ಥಾತ್ ಸಹನೆಯ ಮಿತಿ ಮೀರಿ ಮೂರಂಕಿಗೆ ಸೀಮಿತಗೊಂಡಿದೆ. ಅವಳ ಈ ದಿಟ್ಟತನದಂತೆ ಕೋವೂರ ಬೊಮ್ಮಿ ತಂದೆಯೂ ಉಪಟಳ ಕೊಡುತ್ತಿದ್ದ ಜೈನರಿಗೆ ತಪ್ಪುಗಳ ಮೂರು ಮಿತಿಯನ್ನು ಹಾಕಿದ್ದನು. ಈ ಮೂರು ಅವಕಾಶಗಳನ್ನು ಮೀರಿದ ಮೇಲೆ ತಮಗೆ ತಿಳಿದಂತೆ ದಂಡನೆ ವಿಧಿಸುವುದು ಅವರ ಉದ್ದೇಶವಾಗಿತ್ತು ಎನ್ನಲಾಗಿದೆ.

## ಮಾರುಡಿಗೆ ನಾಚಿ ತಂದೆಯ ಆಚಾರಗಳು

ಶಿವಭಕ್ತಿ, ಉದ್ಯಮಪತಿ, ಗಣಾಚಾರಿ ಈ ಮಾರುಡಿಗೆಯ ನಾಚಿತಂದೆ. ಅವನ ಆಚಾರಗಳ ಘೋಷಣೆ ಇಂತಿವೆ.

೧. ಸಂಸಾರವನ್ನು ತಿಲದಂತೆ ಹೊದ್ದದಿರುವುದು.

೨. ಭೂಪರು, ಭವಿಗಳನ್ನು ಲೆಕ್ಕಿಸದಿರುವುದು.

೩. ಏಕಿಪತ್ನಿ ವ್ರತಸ್ಥನಾಗಿರುವುದು; ಪರಾಂಗನೆಯನ್ನು ನೋಡ ದಿರುವುದು.

೪. ನಿಯಮಗಳನ್ನು ಕಲಿಯಂತೆ ಪಾಲಿಸುವುದು.

೫. ಕ್ಷುದ್ರ ದೈವ ನೆನೆಯದಿರುವುದು.

೬. ಏಕನಿಷ್ಠನಾಗಿರುವುದು, ತ್ಯಾಗಿಯಾಗಿರುವುದು.

೭. ಪರದೈವ ನೋಡದಿರುವುದು.

ಶಿವಭಕ್ತರ ಇಂತಹ ಶೀಲಗಳಿಂದ ಪ್ರತಿಪಕ್ಷ ಸ್ವಾಭಾವಿಕವಾಗಿ ಅಂಜುಗುಳಿಯಾಗಿರುತ್ತಿತ್ತು."[೧೩೭] ಈ ಆಚಾರಗಳು ಶಿವಭಕ್ತರ ಸಮಾಜ, ಧರ್ಮವನ್ನು ಕಾಪಾಡಿಕೊಂಡಿದ್ದವು. ಇಂಥ ಗಟ್ಟಿ ವ್ಯಕ್ತಿತ್ವವಿದ್ದುದರಿಂದ ಅನುಯಾಯಿಗಳು ಯಾವುದಕ್ಕೂ ಸಿದ್ಧವಾಗಿರುತ್ತಿದ್ದರು. ಶಿವಭಕ್ತರಲ್ಲಿ ಪ್ರಚಲಿತವಿದ್ದ ವೇಳವಾಳಿ ಮರಣಗಳಲ್ಲಿ, ಅನ್ಯಧರ್ಮಿಯರೊಡನೆ ನಡೆದ ಹೋರಾಟದ ಸಂದರ್ಭದಲ್ಲಿ ಅನುಯಾಯಿಗಳು ದೃಢತೆ, ಕ್ರೌರ್ಯ, ಉಗ್ರಭಕ್ತಿಯಂತಹ ಶೀಲಗಳನ್ನು ವ್ಯಾಪಕವಾಗಿ ಕಾಣುತ್ತೇವೆ.

## ಭಕ್ತರ ಬಲಿದಾನ ಮರಣಗಳು

ರಗಳೆಗಳಲ್ಲಿ ತಮ್ಮ ಧರ್ಮಕ್ಕೆ ಹಾಗೂ ತಮ್ಮ ಆರಾಧ್ಯ ದೈವಕ್ಕೆ ಪ್ರಾಣವೊಪ್ಪಿಸಿರುವ ಶಿವವ್ರತಿಗಳು ಉಲ್ಲೇಖಗೊಂಡಿದ್ದಾರೆ. ಹರಿಹರ ಇಂತಹ ಪದ್ಧತಿಯನ್ನು ಬಿಂಬಿಸಲು ರಗಳೆಗಳಲ್ಲಿ ಯತ್ನಿಸಿದ್ದಾನೆ. ಪ್ರಾಚೀನ ಕಾಲದಿಂದ ಪ್ರಚಲಿತವಿದ್ದ ಜೈನರ ಸಲ್ಲೇಖನ, ಕ್ಷತ್ರಿಯರ ವೇಳೆವಾಳಿ-ಮಾಸ್ತಿ ಮರಣಗಳನ್ನು ವಚನಕಾರರು ತಿರಸ್ಕರಿಸಿ ಲಿಂಗದ ವೇಳೆವಾಳಿ (ಲಿಂಗಪ್ರಾಣಿ) ಜಂಗಮದ

ವೇಳೆವಾಳಿ (ಜಂಗಮಪ್ರಾಣಿ) ಎಂಬಂತಹ ವ್ರತಗಳನ್ನು ಪುರಸ್ಕರಿಸಿದ್ದಾರೆ. ಹರಿಹರ ತನ್ನ ಕಥಾನಕಗಳಲ್ಲಿ ಅವನ್ನು ಚಿತ್ರಿಸಿ ವಚನಕಾರರ ಮೌಲ್ಯಗಳನ್ನು ಎತ್ತಿಹಿಡಿಯಲು ಇಡೀ ಕಾವ್ಯಗಳಲ್ಲಿ ಪ್ರಯತ್ನಿಸಿರುವುದನ್ನು ಕಾಣಬಹುದು.

ಪ್ರಾಣಾರ್ಪಣೆಯ ಪ್ರತಿಜ್ಞೆ, ಉಪವಾಸ ಮರಣ, ಲಿಂಗಚ್ಛೇದ ಹಾಗೂ ಶಿರಚ್ಛೇದಗಳಂಥ ವೀರ ಮಾರ್ಗವನ್ನು ಶಿವಭಕ್ತರು ಸ್ಥಾಪಿಸಿದ ಉಲ್ಲೇಖಗಳನ್ನು ಹರಿಹರ ಕೊಟ್ಟಿದ್ದಾನೆ. ತೆಲುಗು ಜೊಮ್ಮಯ್ಯನ ಮನೆಯಲ್ಲಿ 'ಕೈಗೆ ಲಿಂಗವು ಬಾರದಿದ್ದರೆ ತನ್ನನ್ನು ತಾನು ಇರಿದು ಕೊಳ್ಳುವೆ'ನೆಂದು ಕೇಶಿರಾಜ ಪಣತೊಡುತ್ತಾನೆ.[೧೩೮] ಸುರಗಿಯ ಚೌಡಯ್ಯನ ಕೂರಲಗನ್ನು ಹಿಡಿದುಕೊಂಡು ಶಿವನಿಗೆ ಊಟ ಮಾಡಿಸಿದ ನಿರೂಪಣೆ ಇದೆ."[೧೩೯] ಲಿಂಗವು ಕಳೆಯಿತೆಂದು ಕೇಶಿರಾಜನು ಪ್ರಾಣತೇಜಿಸಲು ಸಿದ್ಧನಾದ ಘಟನೆಯೊಂದಿದೆ."[೧೪೦] ಧರಿಸಿದ್ಧ ಲಿಂಗವು ಕಳೆದಿದ್ದರೆ ಅದಕ್ಕಾಗಿ ಪ್ರಾಣವನ್ನೇ ನೀಗುವ ಕಠೋರ ನಿಯಮವನ್ನು ಶಿವಭಕ್ತರು ಅಳವಡಿಸಿಕೊಂಡಿದ್ದರು ಎಂಬುದನ್ನು ಇದು ಸೂಚಿಸುತ್ತದೆ. ಜೈನರ ಸಲ್ಲೇಖನ (ಉಪವಾಸ) ಮರಣದಂತೆ ಶಿವಭಕ್ತರಲ್ಲಿಯೂ ಶಿವಸಮಾಧಿ ಮರಣವು ಪ್ರಚಲಿತವಿತ್ತು. ಉದಾಹರಣೆ: ಹಾವಿನಹಾಳ ಕಲ್ಲಯ್ಯನು ಲಿಂಗಾರ್ಚನೆ ಮಾಡುತ್ತ ಉಪವಾಸವಿದ್ದು, ಮೂವತ್ತು ದಿನಕ್ಕೆ ಲಿಂಗೈಕ್ಯನಾಗುತ್ತಾನೆ."[೧೪೧] ಇದೇ ಕಲ್ಲಯ್ಯನು ತಂದೆ ಹೊಡೆಯುವ ಮುನ್ನ ತನ್ನ ಕರುಳನ್ನು ಕೊರೆದು ತೆಗೆದು ಕಲ್ಲಿನಾಥ ದೇವರಿಗೆ ಅರ್ಪಿಸಿ, ಪೂಜಿಸಿ ದೇವರನ್ನಪ್ಪಿಕೊಂಡ ಚಿತ್ರಣ ರಗಳೆಯಲ್ಲಿ ಬಂದಿದೆ."[೧೪೨]

ಆಸೆ ಆಮಿಷಗಳಿಗೆ, ಹೆಣ್ಣು-ಹೊನ್ನಿಗೆ ಸತ್ತುದು ಕೋಟಿ, ನಿನಗಾಗಿ ಸತ್ತವರಾರೂ ಇಲ್ಲ. ಎಂದು ಪ್ರಭುದೇವರ ವಚನವೊಂದು ಸಾರುತ್ತದೆ. ರಗಳೆಯಲ್ಲಿ ತನ್ನ ಆರಾಧ್ಯ ದೈವಕ್ಕಾಗಿ ಸಾಮೂಹಿಕ ವೀರಬಲಿದಾನಗೊಂಡ ಚಿತ್ರಣ ಕೋವೂರ ಬೊಮ್ಮಯ್ಯನ ರಗಳೆಯಲ್ಲಿ ಹೀಗೆ ವರ್ಣಿಸಲ್ಪಟ್ಟಿದೆ."[೧೪೩] ನಂದಿಯುಡಿಗೆಯ ರಾಯಸವೊಂದು ಕೋವೂರ ಬೊಮ್ಮಯ್ಯನ ಮುಂದೆ ಬೀಳುತ್ತದೆ. ಆ ಓಲೆಯಲ್ಲಿ ಮೂರು ನೂರು ಒಡೆಯರ ಸಮೇತ ವೀರಮಾರ್ಗದಿ ಮೆರೆದು ಧಾರುಣಿಗೆ ಅದ್ಭುತ ಮಾಡಿಬರಬೇಕು; ಎಂದು ಶಿವನು ಬರೆದ ಒಕ್ಕಣೆ ಇರುತ್ತದೆ. ಇದೇ ಪ್ರಕಾರ ನಡೆಯುವುದಾಗಿ ಮುನ್ನೂರು ಭಕ್ತರು ಬೊಮ್ಮಿ ತಂದೆಗೆ ಕೊಡುವ ಭಾಷೆ ಹೀಗಿದೆ; ಮನದಲ್ಲಿ ಲೋಲುಪ್ತಿ ಇಲ್ಲ. ತನುವಿನಲ್ಲಿ ಆಸೆ ಇಲ್ಲ. ನೋವೇರಿ ನಿಲ್ಲುವುದಿಲ್ಲ. ಭೂತೇಶ್ವರನಿಗೆ ಭೀತಿ ಹುಟ್ಟು ಹಾಕಿ ನೆತ್ತಿಗೆ ಅಲಗ, ಅಂಗಾಲಿಗೆ ಮೊನೆ ಚುಚ್ಚಿಕೊಂಡು ಹೊತ ಮುತ್ತಗದ ಹಾಕಿ ಶರೀರವನ್ನು ಮಾಡುವೆವು. ಇದು ಶಿವಭಕ್ತರ ಭಾಷೆಯಾಗಿತ್ತು."[೧೪೪] ಶಿವನಿಗಾಗಿ ಸಾಯುವ ಮುನ್ನ ಶಿವಭಕ್ತರು ತಾವು ಮಾಡುವ ಕಾರ್ಯ ಮನ; ಸಾಕ್ಷಿಗೆ ವಿರುದ್ಧವಾಗಿಲ್ಲ ಎಂಬುದಕ್ಕೆ ಮೇಲಿನಂತೆ ಭಾಷೆ ಮಾಡುತ್ತಿದ್ದರು. ತನು, ಮನ, ಪ್ರಾಣ

ತ್ರಿವಿಧಗಳು ಕೈಗೊಳ್ಳುವ ಕಾರ್ಯದಲ್ಲಿ ನಿರ್ವಂಚಿತನಾಗಿರಬೇಕೆಂಬುದೇ ಇದರ ತತ್ವರ್ಯ. ಒಡೆಯ ಸೇವಕ, ಸತಿ–ಪತಿ ಎಂಬ ತಾರತಮ್ಯದ ಪ್ರಾಣಾರ್ಪಣೆಗೂ ಇದಕ್ಕೂ ತುಂಬ ವ್ಯತ್ಯಾಸವಿರುವುದನ್ನು ಲಕ್ಷಿಸಿಸಬೇಕು. ಶರೀರದ (ಭೌತಿಕ) ಆಸೆ ಮನಸ್ಸಿನ ಅಂಜಿಕೆಗಳನ್ನು ಮೀರಿದ ಶಿವಭಕ್ತರ ಈ ವೀರಮರಣ ವಿಧಾನವು ತಮ್ಮ ಧರ್ಮಕ್ಕಾಗಿ ಸ್ಥಾಪಿತಗೊಂಡು, ಈ ಮೊದಲು ರೂಢಿಯಲ್ಲಿದ್ದ ಒಡೆಯ ಸೇವಕ, ಸಂಬಂಧ ಇತ್ಯಾದಿ ಮರಣ ಪ್ರಸಂಗಗಳನ್ನು ಪ್ರತಿಭಟಿಸಿದಂತಿದೆ.

ಇಲ್ಲಿಯ ಬಲಿದಾನ ರೀತಿಗಳೂ ಗಮನಾರ್ಹವೆನಿಸಿವೆ. ಶಿವಭಕ್ತರು ಶೌರ್ಯದಿಂದ ಕಾದುತ್ತ, ಅನ್ಯಾಯದಿಂದ ನಡೆದ ಅನ್ಯಧರ್ಮೀಯರನ್ನು ಕೊಲ್ಲುತ್ತ. ಕೊನೆಗೆ ತಮ್ಮನ್ನು ತಾವು ಕೊಂದುಕೊಳ್ಳುವುದು ಒಂದು ರೀತಿ. ಶಿವನಿಗೆ ಅರ್ಪಿಸಲು ತಮ್ಮ ಶರೀರವನ್ನು ಚೂರು ಚೂರು ಮಾಡಿ ಕೊಂದುಕೊಳ್ಳುವುದು. ಇನ್ನೊಂದು ರೀತಿ. ಈ ಎರಡು ಬಗೆಯ ಬಲಿದಾನ ಮರಣ ರಗಳೆಯಲ್ಲಿ ನಿರೂಪಿಸಲಾಗಿದೆ.

ಕೋವೂರ ಬೊಮ್ಮಯ್ಯ, ಮೂರುನೂರು ಭಕ್ತರು ಕೈಗೊಂಡ ಮರಣದ ವೀರಮಾರ್ಗದ ರೀತಿಗಳು ಹೀಗಿವೆ.

೧. ಆ ಶಿವಭಕ್ತರು ಮೊಳೆ ಹಾವುಗೆಗಳನ್ನು ಮೆಟ್ಟಿದರು.

೨. ಪಾದಗಳನ್ನು ಖಂಡಗಳಾಗಿ ಕಡಿದುಕೊಂಡರು.

೩. ಕಡಿದ ಕಾಲಿನಿಂದ ನಡೆದರು.

೪. ಶಿವಲಿಂಗಕ್ಕೆ ರಕ್ತ ಮಜ್ಜನ ಎರೆದರು.

೫. ಕರುಳನ್ನು ತೆಗೆದು ಕೊರೆಕೊರೆದು ತಂದು ಕರುಳದಂಡೆ ಹೆಣೆದು ಹರನ ಸಿರಿ ಮುಡಿಗಿಟ್ಟರು.

೬. ಸುರಗಿಯಿಂದ ಇರಿದುಕೊಳ್ಳುತ್ತ ಕಿತ್ತು ಹೊರಸೆಳೆದರು.

೭. ಕಠಾರಿ,ಕರಗಸದಿಂದ ಕೊರೆದುಕೊಳ್ಳುತ್ತಿದ್ದರು.

೮. ಸರಳಿನಿಂದ ಹೊಸೆದು ಎಂಟು ದಿಕ್ಕಿಗೆ ಎಸೆಯುತ್ತ ಸುರಿಯುವ ರಕ್ತವನ್ನು ಚೆಲ್ಲಾಡಿದರು.

೯. ಈಟಿಯಿಂದ ಇರಿದು ಚಕ್ರದಲ್ಲಿಟ್ಟರು.

೧೦. ಕತ್ತಿಯಿಂದ ಚುಚ್ಚಿಕೊಳ್ಳುತ್ತಿದ್ದರು.

೧೧. ಕೂದಲನಿಂದ ಕೊಯ್ದುಕೊಳ್ಳುತ್ತಿದ್ದರು.

೧೨. ಚಿಮ್ಮಟದಿಂದ ಇರಿದುರಿದು ಚಿಮ್ಮುತ್ತ.

೧೩. ಶಿರ ನರಗಳನ್ನು ಹರಿಯುತ್ತ.

೧೪. ಎಲುಬುಗಳನ್ನು ಮುರಿಯುತ್ತ ಕುಣಿಯುತ್ತ ರಕ್ತದಲ್ಲಿ ಜಾರಿಬಿದ್ದು ಏಳುತ್ತಿದ್ದರು.

೧೫. ಬತ್ತಿಸಾಯುಧ ಬೇಸರಗೊಂಡರೆ ಬಿಲ್ಲುಬಾಣಗಳ ಸುರಿಮಳೆ ಇರುತ್ತಿತ್ತು.

ಹೀಗೆ ಭಕ್ತಿಯ ವೀರ ಬಲಿದಾನಗಳು ಶಿವಭಕ್ತರಲ್ಲಿದ್ದ ಎಂಬುದನ್ನು ಈ ನಿರೂಪಣೆ ತಿಳಿಯಪಡಿಸುತ್ತದೆ. ಹೀಗೆ ಒಂದೆಡೆ ಸ್ವಯಂ ಶಿವಾರ್ಪಣೆ ನಡೆಸಿದ್ದರೆ ಇನ್ನೊಂದೆಡೆ ಜೈನರಂಥ ಅನ್ಯಧರ್ಮೀಯರನ್ನು ಕೊಲ್ಲುತ್ತ ಶಿವಾರ್ಪಿತರಾಗುವ ಕ್ರಿಯೆ ಜರುಗುತ್ತಿತ್ತು.

ಉದಾ: ಕೋವೂರ ಬೊಮ್ಮಿ ತಂದೆಯು ತನ್ನ ಕೈಗತ್ತಿಯಿಂದ ಕಡಿದು ಬಿಸಾಡಿದ ಕಾಲಿನ ತುಂಡು ಬದುಕುಳಿದ ಸವಣರನ್ನು ನಾಶ ಮಾಡುತ್ತಿದ್ದರೆ. ಉಳಿದ ತುಂಡು ಭಕ್ತರನ್ನು ಪ್ರದಕ್ಷಿಣೆ ಹಾಕುತ್ತಿತ್ತೆಂದು ಕವಿ ವರ್ಣಿಸುತ್ತಾನೆ.[೧೪೫]

ಶಿವಭಕ್ತರ ಗಣಾಚಾರದ ನಡೆಯೊಂದು ಹೀಗಿದೆ; ಶಿವಭಕ್ತನು ತನ್ನ ಧರ್ಮದ ಅವಹೇಳನವನ್ನು ಸಹಿಸಬಾರದು, ಶಕ್ತಿಯಿದ್ದರೆ ಪ್ರಾಣದ ಹಂಗುತೊರೆದು ಉತ್ತರಿಸಬೇಕು. ಇಲ್ಲದಿದ್ದರೆ ಆ ಜಾಗದಿಂದ ದೂರ ಸರಿಯಬೇಕು.[೧೪೬] ಬೊಮ್ಮಿತಂದೆ ಮತ್ತು ಅವನ ಸಂಗಡಿಗರು ಪಂಚಾಚಾರದ ಪ್ರಮುಖ 'ಗಣಾಚಾರ'ವನ್ನು ಮೇಲಿನಂತೆ ಮೆರೆದು ತಮ್ಮ ಧರ್ಮ ಕಾಪಾಡಿಕೊಂಡಿದ್ದಾರೆ. ಹೀಗೆ ಭಕ್ತಿಯ ವೀರಮರಣಗಳು ಮೇಲು ನೋಟಕ್ಕೆ 'ಬಲಿದಾನ'ದಂತೆ ಕಂಡರೂ ಈ ಪೂರ್ವದ ಒಡೆಯನ ವೇಳೆವಾಳಿ ಮರಣದ ವಿವಿಧ ರೀತಿಗಳನ್ನು ಪ್ರತಿಭಟಿಸಿ ತಮ್ಮ ಆರಾಧ್ಯ ದೈವಕ್ಕೆ, ಧರ್ಮಕ್ಕೆ ಜೀವನವನ್ನು ಮೀಸಲಿಟ್ಟಿದುದು ಇಲ್ಲಿ ಕಂಡುಬರುತ್ತದೆ.

ತೆಲುಗು ಜೊಮ್ಮಯ್ಯ ಸೇವಕ ವೃತ್ತಿ ಸ್ವೀಕರಿಸಿ ಪೆರ್ಮಾಡಿ ರಾಯನಲ್ಲಿದ್ದುದರಿಂದ ಅರಸನಿಗಾಗಿ

'ಜೋಳವಾಳಿ'ಯವನಾಗಿದ್ದ; ತನ್ನ 'ಭೀಮನಾಥ' ದೇವರಿಗಾಗಿ ವೇಳೆವಾಳಿಯವನೂ ಆಗಿದ್ದನು."[೧೪೭] ಶಂಕರದಾಸಿಮಯ್ಯನು 'ತಾನು ಜೋಳವಾಳಿಯವನಲ್ಲ ವೇಳೆವಾಳಿಯವನು ಎಂದು ಸ್ಪಷ್ಟಗೊಳಿಸಿ ಜೋಳ ಬೇಡುವುದನ್ನು ಬಿಟ್ಟು ಎಲ್ಲವನ್ನು ಪರಮಾತ್ಮನ ಮೇಲೆ ಅವಲಂಬಿಸಿ ಅವನಿಗಾಗಿ ವೇಳೆವಾಳಿಯವನಾಗುತ್ತಾನೆ."[೨೪೮] ಮಹಾದೇವಿ, ಬಸವಣ್ಣ, ಲಿಂಗಪ್ರಾಣಿಗಳೂ ಜಂಗಮ ಪ್ರಾಣಿಗಳೂ ಆಗಿದ್ದರೆಂಬುದನ್ನು ರಗಳೆಯಲ್ಲಿ ಕಾಣುತ್ತೇವೆ. ಹೀಗೆ ಲಿಂಗಕ್ಕೆ ಜಂಗಮಕ್ಕೆ, ಆರಾಧಿಸುವ ದೈವಕ್ಕೆ, ಪ್ರಾಣಾರ್ಪಿತರಾಗುವುದನ್ನು 'ವೇಳವಾಳಿ' 'ಲಿಂಗಪ್ರಾಣಿ' ಜಂಗಮ ಪ್ರಾಣಿ ಪದುಗುಚ್ಛಗಳು ಸೂಚಿಸುತ್ತವೆ. ಹೀಗೆ ಮರಣಕ್ಕೆ ಸಂಬಂಧಿಸಿದವುಗಳು ಪ್ರಾಚೀನ ಮೌಲ್ಯವನ್ನು ಪಲ್ಲಟಿಸುವ ಕ್ರಿಯೆಯಾಗಿ ಶಿವಭಕ್ತರಲ್ಲಿದ್ದದನ್ನು ರಗಳೆಗಳು ವ್ಯಕ್ತಪಡಿಸುತ್ತವೆ.

**ಇ). ರಗಳೆಗಳಲ್ಲಿ ಪ್ರಭುತ್ವದ ಸಂಘರ್ಷ**

ಪೀಠಿಕೆ: ವಿಷಯ ಪ್ರವೇಶಕ್ಕೆ ಮುಂಚೆ ಪ್ರಭುತ್ವವೆಂದರೆನು ? ಇದರ ಸ್ವರೂಪ ಯಾವುದು ? ಸ್ಪಷ್ಟ ಪಡಿಸಿಕೊಳ್ಳಬೇಕಾದ ಅನಿವಾರ್ಯತೆ ಇಲ್ಲಿ ಎದುರಾಗಿದೆ. ಡಾ. ಜಿ.ಎಸ್. ಶಿವರುದ್ರಪ್ಪನವರು ಪ್ರಭುತ್ವಕ್ಕೆ ಸಂವಾದಿಯಾಗಿ ESTABLISHMENT ಎಂಬ ಆಂಗ್ಲ ಪದವನ್ನು ಬಳಸಿದ್ದಾರೆ."[೧೪೯] ಡಾ.ವಿ.ಲಕ್ಷ್ಮಿ ನಾರಾಯಣರು ಅಂಬೇಡ್ಕರ್ ಅವರ ರಾಜಕೀಯ ವಿಚಾರ ಧಾರೆಯನ್ನು ವಿವರಿಸುತ್ತಾ ಪ್ರಭುತ್ವಕ್ಕೆ ಸಂವಾದಿಯಾಗಿ STATE ಎಂಬ ಆಂಗ್ಲ ಪದವನ್ನು ಬಳಸಿದ್ದಾರೆ. ಅದೇ ಲೇಖನದಲ್ಲಿ ಡಾ.ವಿ.ಲಕ್ಷ್ಮಿ ನಾರಾಯಣರು ಪಾಶ್ಚಾತ್ಯ ಚಿಂತಕರಾದ ಹಾಬ್ಸ್, ಹೆಗಲ್, ಬೋಸ್ಸಾನ್ ಕೋಟ್‌ರವರ "ಪ್ರಭುತ್ವ ಸಾಪೇಕ್ಷರಹಿತ (ABSOLVTE) ಎಂಬ ಸಂವಾದವು "ಅಂಬೇಡ್ಕರ್ ಅವರಿಗೆ ಪೂರ್ವ ಪಕ್ಷವಾಗಿತ್ತೆಂಬುದು ಪ್ರಾಸ್ತಾಪಿಸಿದ್ದಾರೆ."[೧೫೦]

ಶ್ರೀ ಎನ್.ಮನುಚಕ್ರವರ್ತಿಯವರು ಪ್ರಭುತ್ವ ಹಾಗೂ ಸರಕಾರಗಳ ನಡುವೆ ವ್ಯತ್ಯಾಸವನ್ನು ಗುರುತಿಸಬೇಕಿದೆ ಎಂದು ಹೇಳುತ್ತಾ..... ತಾತ್ವಿಕ ಅರ್ಥದಲ್ಲಿ ಪ್ರಭುತ್ವ ಎನ್ನುವುದು ಕೆಲವೇ ಜಾತಿ, ವರ್ಗಗಳಿಗೆ ಮಾತ್ರ ಮೀಸಲಾಗದೆ ಎಲ್ಲರ ಹಿತಗಳನ್ನು ಕಾಯಬೇಕಾದ ಒಂದು ಆದರ್ಶ ವ್ಯವಸ್ಥೆ. ಪ್ರಭುತ್ವವನ್ನು ಕುರಿತು ಮಾತಾಡುವಾಗಲೆಲ್ಲ ನಾನು ಅದು ಸಮಗ್ರತೆಯನ್ನು ಕಾಪಾಡುವ ಒಂದು ಅಂಗವೆಂದೇ ತಿಳಿಯುತ್ತೇವೆ ಎಂದಿದ್ದಾರೆ."[೧೫೧] ಮನು ಚಕ್ರವರ್ತಿಯರ ಪ್ರಕಾರ ಪ್ರಭುತ್ವ ಮತ್ತು ಸರಕಾರವನ್ನು ನಡುವಿನ ವ್ಯತ್ಯಾಸ ಕೇವಲ ತಾತ್ವಿಕವಾದದ್ದಲ್ಲ; ಇದೊಂದು ರಾಜಕೀಯ ವಾಸ್ತವ. ತಮ್ಮೆಲ್ಲ ಸೋಲುಗಳ ನಡುವೆಯೂ ಸೋಷಲಿಸ್ಟ್ ಹಾಗೂ ಕಮ್ಯುನಿಸ್ಟ್ ಸರಕಾರಗಳು ಕಡೆ ಪಕ್ಷ ತಮ್ಮದೇ ಆದ ರೀತಿಯಲ್ಲಿ ಪ್ರಭುತ್ವದ ತಾತ್ವಿಕ ಅನುಭವವಾದರೂ ದಕ್ಕುವಂತೆ ಮಾಡಿವೆ. ಆದರೆ

ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಸರಕಾರಗಳು ಸದಾ ನಿರ್ದಿಷ್ಟ ವರ್ಗಗಳ, ಜಾತಿಗಳ ಹಿತಾಸಕ್ತಿಯನ್ನು ಮಾತ್ರ ಕಾಯ್ದುಕೊಂಡು ಬಂದಿದೆ." ಮನು ಚಕ್ರವರ್ತಿಯವರ ವಿವರಣೆಯಲ್ಲಿ ಪ್ರಭುತ್ವವು ನಿರಪೇಕ್ಷ (ABSOIVTE): ಸರಕಾರವು ಸಾಪೇಕ್ಷವೆಂಬಂತೆ ಸ್ಪಷ್ಟ ವಿಂಗಡಣೆಯಿದೆ. ಹೀಗೆ ಪ್ರಭುತ್ವವನ್ನು ಕುರಿತ ವ್ಯಾಖ್ಯಾನ. ವಿವರಣೆಗಳು ಕನ್ನಡದಲ್ಲಿಯೂ ತಕ್ಕಮಟ್ಟಿಗೆ ಲಭಿಸುತ್ತವೆ. ಆದರೆ, ತಾತ್ವಿಕ ದೃಷ್ಟಿಯಿಂದ ಪ್ರಭುತ್ವ ಕುರಿತು ನಡೆಸುವ ಪ್ರಗಲಬ್ಧ ಚಿಂತನೆಗಳು ಪ್ರಸ್ತುತ ಅಧ್ಯಯನಕ್ಕೆ ಹೊರೆಯಾಗುವುದರಿಂದ ಇದನ್ನು ಬೆಳೆಸಲು ಇಚ್ಛಿಸುವುದಿಲ್ಲ.

ಮಧ್ಯಕಾಲಿನ ಕಾವ್ಯಕ್ಕೆ ಸಂಬಂಧಪಟ್ಟಂತೆ ಪ್ರಭುತ್ವದ ಸ್ವರೂಪವನ್ನು ಹೀಗೆ ವಿವರಿಸಲು ಯತ್ನಿಸಿದ್ದೇನೆ. 'ಪ್ರಭುತ್ವ' ಎಂದರೆ ರಾಜಪ್ರಭುತ್ವ ಎಂದು ತಿಳಿಯುವುದು ವಾಡಿಕೆಯಾಗಿ ಬಿಟ್ಟಿದೆ. ಈ ರಾಜಮಾರ್ಗದ ಗ್ರಹಿಕೆಯಲ್ಲಿ ಆಲೋಚಿಸುತ್ತಾ ಸಾಗಿದೆ. ನಮ್ಮ ಕವಿಗಳು ಎಲ್ಲೆಲ್ಲಿ ರಾಜರ ವಿರುದ್ಧ ಕಿಡಿನುಡಿದಿದ್ದಾರೆ ? ಯಾರ್‍ಯಾರು ರಾಜಾಶ್ರಯದಿಂದ ದೂರ ಸಿಡಿದಿದ್ದಾರೆ ? ಎಂಬ ರಾಜವಿರೋಧಿ ಚರ್ಚೆಗಳ ಚರ್ವಿತಚರ್ವಣದ ಸಮೀಕ್ಷೆ ಮಾಡಿ ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ. ಪ್ರಭುತ್ವದ ವ್ಯಾಪ್ತಿಯಲ್ಲಿ ತೋಳ್ಬಲಕ್ಕೆ ಹೆಸರಾದ ಕ್ಷೇತ್ರ ಸಮುದಾಯ ಮತ್ತು ಬುದ್ಧಿಬಲಕ್ಕೆ ಹೆಸರಾದ ವಿಪ್ರ ಸಮುದಾಯಗಳೆರಡೂ ಸೇರಿಕೊಳ್ಳುತ್ತವೆ. ಚರಿತ್ರೆಯ ಗತಿಯಲ್ಲಿ ಇವೆರಡು ಸಮುದಾಯಗಳು ಒಂದನ್ನೊಂದು ಘೋಷಿಸುತ್ತಾ ಒಂದರೊಳಗೊಂದು ಹೆಣೆದು ಕೊಂಡಿರುವುದನ್ನು ಗಮನಿಸಿದಾಗ 'ಪ್ರಭುತ್ವ'ವೆಂದರೆ ಇವೆರಡು ಪ್ರತಿಷ್ಠಿತ ಶಕ್ತಿಗಳ ಮೇಳವೆಂಬುದು ಮನದಟ್ಟಾಗುತ್ತದೆ.

'ಕ್ಷೇತ್ರ ತೇಜವ ಹೊರೆವುದೇ ಬ್ರಾಹ್ಮಣ್ಯ ಶಕ್ತಿ".. .. .. .. .. .. ಎಂಬ ನಂಬಿಕೆಯನ್ನು ನಮ್ಮಲ್ಲಿ ಬಹು ಹಿಂದಿನಿಂದಲೂ ವ್ಯವಸ್ಥಿತವಾಗಿ ಪ್ರಚಾರ ಮಾಡಿಕೊಂಡು ಬರಲಾಗಿದೆ ಎಂಬುದನ್ನು ಈ ಕೆಳಗಿನ ಉಲ್ಲೇಖದಿಂದ ತಿಳಿಯಬಹುದು;

ನೂರು ಯಜ್ಞವ ಹೊಯ್ದರಿಗೆ ಹರಿ

ದೇರಿದೆನು ಸುರಪತಿಯ ಪೀಠವ

ನೋರು ಗುಡಿಸಿತು ಪದವಿಯದು ವಿಪ್ರಾವ ಮಾನದಲಿ

ಮಾರು ಮಾತೇನೈ ಮಹೀಸುರ

ರೇರಿಸಿದರೇರುವುದು ಮುನಿದರೆ

ಹಾರಿಸುವರ್ರೈ ನೂರು ಯಜ್ಞವನೆಂದನಾ ನಹುಷ (ಅರಣ್ಯ ಪರ್ವ ೧೩-೬೨) ಇದೊಂದು ಪದ್ಯ ಅಷ್ಟೆ. ಮಹೀಪತಿಗಳಿಗೂ ಮಹೀಸಾಸುರರಿಗೂ ಇರುವ, ಇರಬೇಕಾದ ಅನ್ಯೋನ್ಯ ಮೈತ್ರಿಯನ್ನು ಸಾರುವ ಇಂಥ ಹಲವು ಪದ್ಯಗಳನ್ನು ಕುವೆಂಪು ಒಂದು ಲೇಖನದಲ್ಲಿ ವಿವರವಾಗಿ ಪ್ರಸ್ತಾಪಿಸಿದ್ದಾರೆ.[೧೫೨] ಇದರಿಂದ ಸ್ಪಷ್ಟಗೊಳ್ಳುವ ಸಂಗತಿ ಎಂದರೆ ಮೂರ್ತ ರೂಪದ ತೋಳ್ಬಲವು (ಕ್ಷಾತ್ರ ಸಮುದಾಯ) ಅಮೂರ್ತ ರೂಪದ ಬುದ್ಧಿ ಬಲವನ್ನು (ವಿಪ್ರ ಸಮುದಾಯ) ಆಶ್ರಯಿಸಿ ಬಹುಸಂಖ್ಯಾತ ಜನಸಮುದಾಯಗಳನ್ನು ತನ್ನ ಅಂಕೆಯಲ್ಲಿ, ಹಿಡಿತದಲ್ಲಿರಿಸಿಕೊಳ್ಳಲು ನಡೆಸಿದ ಕುಯುಕ್ತಿಯನ್ನೆ ಚರಿತ್ರೆಯುದ್ದಕ್ಕೂ ಕಾಣಬಹುದು. ಹೀಗೆ ಮೂರ್ತ, ಅಮೂರ್ತಗಳ ಮೈತ್ರಿಯಿಂದ ಹುಟ್ಟಿ ಬೆಳೆಯುವ, ವಿಸ್ತರಿಸುವ ಪ್ರಭುತ್ವದ ನೆಲೆಯನ್ನು ಮೊದಲಿಗೆ ಗ್ರಹಿಸುವ ಅನಿವಾರ್ಯತೆಯನ್ನು ಮಾಡಬೇಕಿದೆ. ಪ್ರಭುತ್ವದ ವ್ಯಾಪ್ತಿಯಲ್ಲಿ ರಾಜತ್ವವನ್ನು ಮಾತ್ರ ಗಮನಿಸಿ ಪುರೋಹಿತ ಶಾಹಿಯನ್ನು ಗಮನಿಸದಿದ್ದರೆ ಬೇಕುಗಳನ್ನು ನಿರ್ಲಕ್ಷಿಸಿ ಬೊಡ್ಡೆಯನ್ನು ಮಾತ್ರ ವ್ಯಾಖ್ಯಾನ ಮಾಡಿದಂತಾಗುತ್ತದೆ.

## ರಾಜವಿರೋಧಿ ಧೋರಣೆ ಗ್ರಹಿಕೆಗಳು

ಪಂಪ, ವಚನಕಾರರು, ನೇಮಿಚಂದ್ರ, ನಾಗಚಂದ್ರ ಆಂಡಯ್ಯ, ಹರಿಹರ, ರಾಘವಾಂಕ, ನಂಜುಂಡ, ಗೋವಿಂದ ವೈದ್ಯರ ಉಲ್ಲೇಖಗಳನ್ನು ನೀಡಿರುವ ಜಿ.ಎಸ್.ಶಿವರುದ್ರಪ್ಪ ಅವರು ಹೀಗೆ ಹೇಳಿದ್ದಾರೆ. ಈ ಎಲ್ಲ ರಾಜರುಗಳ ಪರವಾದ ಕೃತಿಯ ರಚನೆಯು ತೊಡಕು, ಇಕ್ಕಟ್ಟು, ಸಮಜಾಯಿಷಿಗಳನ್ನು ಗಮನಿಸಿದರೆ ಕವಿಯ ಕಾವ್ಯ ನಿರ್ಮಿತಿಯನ್ನು ನಿಯಂತ್ರಿಸುವ, ಧಾರ್ಮಿಕವಲ್ಲದ ಇನ್ನಿತರ ಪ್ರಭುತ್ವ (ESTABLISHMENT) ಗಳನ್ನು ಪ್ರತಿಭಟಿಸುವ, ನಿರಾಕರಿಸುವ ಪ್ರವೃತ್ತಿಯೊಂದು ಉದ್ದಕ್ಕೂ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಜೀವಂತವಾಗಿದೆ.

ಪ್ರಭುತ್ವಕ್ಕೆ ಸೂಚಿಸಿರುವ ವಿವರಣೆಯನ್ನು ಒಪ್ಪಿಕೊಳ್ಳುವುದಾದರೆ ರಾಜವಿರೋಧಿ, ವೈಧಿಕ ವಿರೋಧಿ, ಜಾತಿವಿರೋಧಿ ಎಂಬಂತಹ ವಿಂಗಡಣಾತ್ಮಕ ಪರಿಶೀಲನೆಗಳಲ್ಲಿ ಬಲವಾಗಿ ಹೊಸೆದ, ಮುಪ್ಪುರಿಗೊಂಡ ಹಗ್ಗವೊಂದನ್ನು ಬಿಡಿಬಿಡಿಯಾದ ಹುರಿಗಳನ್ನಾಗಿ ಪ್ರತ್ಯೇಕಿಸುವ ದೃಷ್ಟಿಯಿದೆ. ಇದರಿಂದ ವಾಸ್ತವವನ್ನು ಪರಿಶೀಲಿಸಿದಂತೆ ಆಗುವುದಿಲ್ಲ. ರಾಜತ್ವ ಮತ್ತು ಪುರೋಹಿತ ಶಾಹಿಗಳ ಅನ್ಯೋನ್ಯ ಮೈತ್ರಿಯಿಂದ ತಲೆ ಎತ್ತುವ ಪ್ರಭುತ್ವವನ್ನು (HOLDING HOOD) ಎಂದು ಗುರುತಿಸಬೇಕಾಗುತ್ತದೆ. ರಾಜತ್ವ Royalhood ಮತ್ತು ಪುರೋಹಿತ ಶಾಹಿಗಳ (Priest-hood) ಮೇಳವೇ ನಮ್ಮ ದೇಶದಲ್ಲಿ ಪ್ರಭುತ್ವದ ಚಾಲಕ ಶಕ್ತಿಯಾಗಿದೆ. ಈ ದೃಷ್ಟಿಯಿಂದ ಪುರೋಹಿತಶಾಹಿಗೆ ಕೊಡುವ ಪೆಟ್ಟು ರಾಜತ್ವಕ್ಕೆ ಕೊಟ್ಟ ಪೆಟ್ಟು ಆಗುತ್ತದೆ.

ಇದನ್ನು ಡಾ. ಬಸವರಾಜ ಕಲ್ಗುಡಿಯವರು ಭಕ್ತಿಪಂಥದ ಬೆಳವಣಿಗೆಯನ್ನು ಕುರಿತು ಚರ್ಚಿಸುವಾಗ ಹೀಗೆ ಗುರುತಿಸಿದ್ದಾರೆ. "ವರ್ಣ ವ್ಯವಸ್ಥೆಯನ್ನು ಪ್ರಶ್ನಿಸಲಾದ ಇಲ್ಲಿ ಬ್ರಾಹ್ಮಣವರ್ಗದ ಸ್ಥಾನವನ್ನು ಕುರಿತ ಶ್ರೇಷ್ಠತೆಯನ್ನು ನಿರಾಕರಿಸಲಾಯಿತು. ಇದು ಆ ವರ್ಗವನ್ನು ಧಾರ್ಮಿಕ ಕಾರಣಗಳಿಗಾಗಿ ನಂಬಿದ್ದ ರಾಜನಿಗೂ ಪರೋಕ್ಷವಾದ ಹೊಡೆತವನ್ನು ಕೊಟ್ಟ ಹಾಗೆ"[೧೫] ಆದ್ದರಿಂದ ಸಾಮಾಜಿಕ ಶ್ರೇಣೀಕರಣಗಳಾದ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆ ಉಳಿಗ ಮಾನ್ಯ ಪದ್ಧತಿಯ ಭೂಸ್ವಾಮ್ಯ ನೀತಿ, ಪುರೋಹಿತ ಶಾಹಿಯ ಧರ್ಮಾಧಿಕಾರ ರಾಜತ್ವದ ಶಕ್ತಿ ಕೇಂದ್ರೀಕರಣ ಇವೆಲ್ಲವೂ ಪ್ರಭುತ್ವದ ವ್ಯಾಪ್ತಿಗೊಳಪಡುವ ಅಂತರ್ ಸಂಬಂಧಿತ ನೆಲೆಗಳಾಗಿವೆ.

ಈ ಎಲ್ಲಾ ನೆಲೆಗಳನ್ನು ಮೊದಲ ಬಾರಿಗೆ ವ್ಯಾಪಕವಾಗಿ, ವಿರೋಧಿಸುವ, ಖಂಡಿಸುವ, ಪ್ರತಿಭಟಿಸುವ ಸಮುದಾಯ ಧ್ವನಿ ವಚನ ಸಾಹಿತ್ಯದಲ್ಲಿದೆ. ವಚನಕಾರರು ರಾಜತ್ವದ ಶಕ್ತಿ ಕೇಂದ್ರೀಕರಣವನ್ನು ಛಿದ್ರಿಸಿರುವ ಬಗೆಯು ಕನ್ನಡ ವಿಮರ್ಶೆಯಲ್ಲಿ ಚರ್ವಿತಚರ್ವಣವೆಂಬಂತೆ ಮತ್ತೆ ಮತ್ತೆ ಪ್ರಸ್ತಾಪಿತವಾಗಿದೆ. ಬಿಜ್ಜಳ ಮತ್ತು ಬಸವಣ್ಣನವರ ಸಂಘರ್ಷ, ಕೌಶಿಕ ಮತ್ತು ಅಕ್ಕಮಹಾದೇವಿಯರ ನಡುವಿನ ಸಂಘರ್ಷ ಈ ನಿಟ್ಟಿನಿಂದ ನೋಡಬಹುದಾದ ಜ್ವಲಂತ ನಿದರ್ಶನಗಳಿವೆ. ದಂತಕಥೆ ಮತ್ತು ಪುರಾಣಗಳ ನೆಲೆಯಿಂದ ಮಾತ್ರವಲ್ಲದೆ ಸ್ವತಃ ಬಸವಣ್ಣ ಮತ್ತು ಅಕ್ಕಮಹಾದೇವಿ ವಚನದ ರಾಜತ್ವದ ವಿರುದ್ಧದ ಸಂಘರ್ಷಗಳನ್ನು ಗ್ರಹಿಸಬಹುದಾಗಿದೆ.

### ಪ್ರಭುತ್ವದ ಸಂಘರ್ಷ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮೊದಲ ಬಾರಿಗೆ ಕಳಚಿಹೋಗಿದ್ದ ಕಥನ ಕ್ರಮದ ಕೊಂಡಿಯನ್ನು ಬೆಸೆಯುತ್ತಾ ಅಪ್ರತಿಷ್ಠಿತ ಸ್ತರದಿಂದ ಕಾವ್ಯವಸ್ತು ಮತ್ತು ಕಾವ್ಯ ರೂಪಗಳನ್ನು ಆರಂಭಿಸಿದ ಶ್ರೇಯಸ್ಸು ಹರಿಹರನಿಗೆ ಸಲ್ಲುತ್ತದೆ. ವಚನಕಾರರು ತನ್ಮೂಲಕ ವಚನ ಚಳವಳಿಗೆ ಸಾಮೂದಾಯಿಕ ಧ್ವನಿಯನ್ನು ನೀಡಿದಂತೆಯೇ ಹರಿಹರನು ಪುರಾತನ ಮತ್ತು ನೂತನ ರಗಳೆಗಳಲ್ಲಿ ಬಹುಮಟ್ಟಿಗೆ ಅಪ್ರತಿಷ್ಠಿತರ ಸ್ತರಕ್ಕೆ ಸೇರಿದ ಕೆಳವರ್ಗದ ಜನರನ್ನು ಕಥಾನಾಯಕರನ್ನಾಗಿ ಮಾಡಿಕೊಂಡು ತನ್ಮೂಲಕ ಸಾಮೂದಾಯಿಕ ಧ್ವನಿಯ ಹರಿಕಾರನಾಗಿದ್ದಾನೆ. ಹರಿಹರನ ರಗಳೆಗಳಲ್ಲಿ ರಾಜತ್ವ ಮತ್ತು ಪುರೋಹಿತ ಶಾಹಿಯ ಅನ್ಯೋನ್ಯ ಮೈತ್ರಿ ತತ್ಫಲಿತಗಳಾದ ಉಳಿಗಮಾನ್ಯ ಪದ್ಧತಿಯ ಭೂಸ್ವಾಮ್ಯ ನೀತಿ, ಸಾಮಾಜಿಕ ಶ್ರೇಣೀಕರಣಗಳಾದ ಜಾತಿಪದ್ಧತಿ, ಅಸ್ಪೃಶ್ಯತೆಯ ಎಲ್ಲ ನೆಲೆಗಳು ಛಿದ್ರ ಛಿದ್ರವಾಗಿ ಬಿಟ್ಟಿವೆ. ಸೇದಿರಾಜ ಮತ್ತು ಕರಿಕಾಲ ಚೋಳರು ರಾಜತ್ವದ 'ಪ್ರತ್ಯಕ್ಷ ವಾಸ್ತವ'ಕ್ಕೆ (Visible Reality) ಬದಲಾಗಿ ಕಲ್ಪಿಸಿದ 'ಸಂಭಾವ್ಯ ವಾಸ್ತವ'ದ (Pos-

sible Reality) ರೂಪಕ ಚಿತ್ರಗಳಾಗಿದ್ದಾರೆ. ಸಾಹಿತ್ಯ ಮತ್ತು ರಾಜಾಶ್ರಯಕ್ಕೆ ಸಂಬಂಧಪಟ್ಟಂತೆ ಪ್ರಾಚೀನ ಸಾಹಿತ್ಯದಲ್ಲಿ ಕಂಡು ಬರುವ ಸಂಘರ್ಷಾತ್ಮಕ ನೆಲೆಗಳು ಹರಿಹರನಲ್ಲಿ ಸ್ವತಂತ್ರ ದೃಷ್ಟಿಯ ಸ್ಥಿತ್ಯಂತರವನ್ನು ಪಡೆದಿದೆ. ಆದ್ದರಿಂದಲೇ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ರಾಜಾಶ್ರಯವನ್ನು ಧಿಕ್ಕರಿಸಿ ಮೊದಲ ಕವಿಯೆಂಬ ಮನ್ನಣೆ ಹರಿಹರನಿಗಿದೆ. ಕಣ್ಣಪ್ಪನ ಮುಗ್ಧ ಭಕ್ತಿಯ ಸಾದೃಶ್ಯದ ಮೂಲಕ ಪುರೋಹಿತ ಶಾಹಿಯನ್ನು ವಿಡಂಬಿಸುವ ಕಣ್ಣಪ್ಪ ದೇವರ ರಗಳೆ ಗಮನಾರ್ಹವಾಗಿದೆ. ಇದೊಂದು ಮಾತ್ರವಲ್ಲ ! ಹರಿಹರನ ಎಲ್ಲ ರಗಳೆಗಳನ್ನು ಪುರೋಹಿತ ಶಾಹಿಯ; ಜಾಡಿಗೆ ಬಿದ್ದ ವಿಧಿ– ವಿಧಾನಗಳ ವಿಡಂಬನೆಯೆಂದೇ ತಿಳಿಯಬೇಕಾಗಿದೆ. ಎಷ್ಟೆಷ್ಟು ಭೂಮಿ ಕಿರಿದಾಗುತ್ತಿತ್ತೋ ಅಷ್ಟಷ್ಟು ದಾಹದ ಭಂಜನೆಯೇ ಆಗಿದೆ.

ಅಗಸ, ಕುಂಬಾರ, ಬೇಡ, ಮಾದಿಗ ಮುಂತಾದ ತೀರ ಕೆಳವರ್ಗದ ಜನರನ್ನು ಹಾಗೂ ಕನ್ನಡ ನಾಡಿನಲ್ಲಿ ಬಾಳಿ ಬದುಕಿದವರನ್ನು ಕಥಾನಾಯಕರನ್ನಾಗಿ ಮಾಡಿಕೊಂಡ ಹರಿಹರನ ರಗಳೆಗಳು ಕನ್ನಡ ಸಾಹಿತ್ಯ ಪರಂಪರೆಗೆ ಕಲ್ಪಿಸಿದ ಸಾಹಿತ್ಯ ಮಟ್ಟದ ಅಪವರ್ಗೀಕರಣವಾಗಿದ್ದು, (DELLASIFICATION OF LITERRARY STANORD) ತನ್ಮೂಲಕ ಸಮಾಜಿಕ ಶ್ರೇಣಿಕರಣವನ್ನು ಬಗ್ಗು ಬಡಿಯುವ ಅಭಿವ್ಯಕ್ತಿಯಾಗಿದೆ. ಹರಿಹರನ ರಗಳೆಗಳು ವಚನ ಚಳವಳಿಯು ಪ್ರತಿಪಾದಿಸಿದ ಪ್ರಗತಿಪರ ಮೌಲ್ಯಗಳನ್ನು ಬಿಂಬಿಸುವ ವ್ಯಕ್ತಿಚಿತ್ರಣಗಳಾಗಿದ್ದು, (Profiles) ಪ್ರಭುತ್ವವನ್ನು ಅದರ ಎಲ್ಲ ಅಂತರ್ ಸಂಬಂಧಿ ನೆಲೆಗಳ ಸಹಿತ ಮಾರುವ ಪ್ರಕ್ರಿಯೆಯ ಪ್ರಮುಖ ಕೊಂಡಿಗಳೂ ಆಗಿವೆ.

**ಬಸವಣ್ಣ ಬಿಜ್ಜಳರ ನಡುವಿನ ಸಂಘರ್ಷ** ✓

ಬಸವಣ್ಣನ ಸರ್ವ ಸಮಾನತೆಯ ತತ್ವನ್ನು ಎತ್ತಿ ಹಿಡಿಯುವ ಸಂಬೋಳಿ ನಾಗಿದೇವನ ಪ್ರಸಂಗದಿಂದ ಹಿಡಿದು ವಿಪ್ರರು ಬಸವಣ್ಣನ ಕಾರ್ಯ ವೈಖರಿ ಕುರಿತು ಅರಸ ಬಿಜ್ಜಳನಿಗೆ ದೂರು ನೀಡುವವರೆಗೂ ಸಂಘರ್ಷಗಳು ಉದ್ಭವಿಸುತ್ತಲೇ ಇರುತ್ತವೆ. ಉದಾ: 'ಸಂಬೋಳಿ' ಎಂಬುದು ಅಸ್ಪೃಶ್ಯರು ಊರೊಳಗೆ ಬರುವಾಗ ನೆಲಕ್ಕೆ ಕುಟ್ಟುತ್ತ ಸದ್ದು ಮಾಡಿಕೊಂಡು ಬರುವ ಒಂದು ಊರುಗೋಲು."[೧೫೪] ಇದರಿಂದ ಮೇಲ್ವರ್ಗದ ಜನರಿಗೆ ಅಸ್ಪೃಶ್ಯ ಬರುವ ಸಂಕೇತ ತಲುಪುತಿತ್ತು. ಇಂತಹ ಅಸ್ಪೃಶ್ಯರಲ್ಲಿ ನಾಗಿದೇವ (ನಾಗಯ್ಯ)ನೂ ಒಬ್ಬ. ಆತನೂ ಆ ಕಾಲದ ಅನೇಕ ಕೆಳಜಾತಿಯ ಜನರಂತೆ ಜಾತಿ ಕಾರಣದಿಂದ ಅವಮಾನಕ್ಕೆ, ಅಮಾನವಿಯ ಹೀನಾಯಕ್ಕೆ ತುತ್ತಾಗಿದ್ದನು.

ಜಂಗಮ ಪ್ರೇಮಿ ಬಸವಣ್ಣನು ಒಮ್ಮೆ ಶರಣರ ಬರುವಿಕೆಯನ್ನು ಹಾರೈಸುತ್ತ ಹಿರಿಯ

ಮಾಹೇಶ್ವರರ ಕೇರಿಯಿಂದ ಸಾಗುತ್ತಿದ್ದನು. ಅಲ್ಲಿ ಮನೆಯೊಂದರಿಂದ ಓಹಿಲಯ್ಯ, ಉದ್ಭಟಯ್ಯ, ಬಸವರಾಜರಿಗೆ ಒಳಿತಾಗಲಿ, ಶುಭವಾಗಲಿ ಎಂದು ಹಾಡುತ್ತ ಲಿಂಗಕ್ಕೆ ಪೂಜೆ ಸಲ್ಲಿಸಿ ಆರೋಗಣೆ ನಡೆಸುವ ಸದ್ದು ಕೇಳಿಬರುತ್ತದೆ. ತಕ್ಷಣ ಆ ಮನೆಯಲ್ಲಿ ಹೊಕ್ಕು ಪೂಜೆಯಲ್ಲಿ ಭಾಗಿಯಾಗಿ ಮನೆಯವರೊಡನೆ (ಅವರು ಅಸ್ಪೃಶ್ಯನ) ಸಹಪಂಕ್ತಿ ಭೋಜನ ಕೈಕೊಳ್ಳುತ್ತಾನೆ.

ಬೇಹುಗಾರರಿಂದ ಇದನ್ನರಿತ ವಿಪ್ರಕುಲದವರೆಲ್ಲ ಒಂದಾಗಿ ಬಿಜ್ಜಳನ ಹತ್ತಿರ ಬಂದು ಬಸವನ ನಡವಳಿಕೆ ದಿನದಿನಕ್ಕೆ ವಿಪರೀತವಾಗಿರ್ಪುದು' ಎಂದು ಮತ್ತು ಆತ ಎಲ್ಲರ ಜಾತಿ ಕೆಡಿಸುತ್ತಿದ್ದಾನೆಂದು ಆರೋಪಿಸುತ್ತಾರೆ. ರಾಜ ಕುಪಿತನಾಗಿ ಬಸವಣ್ಣನನ್ನು ವಿಚಾರಿಸಿದರೆ. ಆತ ತನ್ನ ಕೃತ್ಯ ಸಮರ್ಥಿಸಿಕೊಂಡು ಭಕ್ತರಲ್ಲಿ ಭೇದ ಭಾವವಿಲ್ಲ ಎಂದು ತಿಳಿಸುತ್ತಾನೆ. "ಭಕ್ತರ ಮೈಯಲ್ಲೇನು ರಕ್ತದ ಬದಲಾಗಿ ಹಾಲು ಸುರಿವುದೇ ? ಎಂದು ರಾಜ ಬಿಜ್ಜಳ ಮೂದಲಿಸಿ ಕೇಳುತ್ತಾನೆ. ಬಸವಣ್ಣ ಬಿಜ್ಜಳನ ಮಾತನ್ನೆ ಸವಾಲಾಗಿ ಸ್ವೀಕರಿಸಿ, ಎಲ್ಲರೊಂದಿಗೆ ಹಿರಿಯ ಕೇರಿಗೆ ಬರುತ್ತಾನೆ. ಎಲ್ಲರೆದುರು ವಿಪ್ರರು ರಕ್ತದಲ್ಲಿ ಬಾಲಹುಳಗಳಿರುವುದನ್ನು ತೋರಿಸಿ, ನಾಗಿದೇವನ ಕಾಲಿನಿಂದ ರಕ್ತಕ್ಕೆ ಬದಲು ಹಾಕು ತೆಗೆದು ತೋರುವನು. ಬಿಜ್ಜಳನು ಇದನ್ನು ಕಂಡು ಕೌತುಕ– ಭಯಗಳಿಂದ ತೆಪ್ಪಗಾಗುತ್ತಾನೆ. ಮೇಲ್ನೋಟಕ್ಕೆ ಇದೊಂದು ಬಸವ ಪವಾಡ ಸಾಮಾನ್ಯ ಘಟನೆ ಎಂದು ತೋರಬಹುದು. ಆದರೆ, ಇದು ಬಸವಣ್ಣನ ವ್ಯಕ್ತಿತ್ವ, ತತ್ವ, ಭೋದೆ, ನಡೆನುಡಿಗಳ ಸಮನ್ವಯಕ್ಕೆ ಬಹುಮುಖ್ಯ ಬೆಳಕಿಂಡಿಯಾಗಿದೆ.

ಬಸವಣ್ಣ ಭಂಡಾರಿಯಾಗಿ ನೆಲೆನಿಂತು ಅಲ್ಲಿಯ ಧಾರ್ಮಿಕ, ಸಾಮಾಜಿಕ ಜೀವನವನ್ನು ಅಮೂಲಾಗ್ರವಾಗಿ ಬದಲಾಯಿಸ ತೊಡಗಿ, ಎಲ್ಲ ವರ್ಣ, ವರ್ಗಗಳ ಜನರಿಗೆ ಸಮಾನತೆ, ಸ್ವಾತಂತ್ರ್ಯ ಕಲ್ಪಿಸತೊಡಗಿದನು. ಆದರಿಂದ ದೂರ ದೂರದ ದೇಶಗಳಿಂದ ಶರಣರು ತಂಡೋಪ ತಂಡವಾಗಿ ಬರುತ್ತಿದ್ದರು. ಹೀಗೆ ಶರಣರನ್ನು ಹಾರೈಸುತ್ತ ಬಸವಣ್ಣ ನಡೆದು ಬರುತ್ತಿದ್ದರೆ. ಹಿರಿಯ ಮಾಹೇಶ್ವರರ ಕೇರಿಯು ಮನೆಯಿಂದ ಭಕ್ತರಿಗೆ, ಶರಣರಿಗೆ ಜಯಘೋಷ ಮಾಡುವ ಶಿವಲಿಂಗದ ಆರೋಗಣೆ ಸಂದರ್ಭ ಗಮನಕ್ಕೆ ಬರುತ್ತದೆ. ಕೆಳವರ್ಗದ ದಲಿತರು ಶಿವಪೂಜೆಯಲ್ಲಿ ಶಿವಶರಣರಿಗೆ ಜಯಸ್ತುತಿ ಮಾಡುವ ಅಂದಿನ ಪರಿಪಾಠವನ್ನೂ ಇದು ದಾಖಲಿಸುತ್ತದೆ. ಆ ಮನೆಯ ಜಾತಿ, ಕುಲ, ವರ್ಗ, ಅಂತಸ್ತುಗಳನ್ನು ಎಳ್ಳಷ್ಟು ವಿಚಾರಿಸದೆ, ತಕ್ಷಣ ಬಸವಣ್ಣ ಅಲ್ಲಿಗೆ ಹೋಗುತ್ತಾನೆ. ಶರಣರ ಸಂಗಕ್ಕೆ ಶರಣರ ಸೂಳ್ನುಡಿಗೆ ಆತನ ಮಿಗಿಲಾದ ತವಕ ಬೆರೆಸಿ 'ಭೋಜನ ಮಾಡಿ ಬಿಡುವುದಂತೂ ಅದ್ಭುತ, 'ಸಂಭೋಳಿ ಸಂಭೋಳಿ' ಎಂದು ಕೂಗುತ್ತ ತಿರುಗಾಡಬೇಕಾದ, ಉಚ್ಚ ವರ್ಣೀಯರಿಂದ ದೂರದಲ್ಲಿರಬೇಕಾದ, ಊರಾಚೆಗೆ ನೆಲೆಸಿದ

ಅಸ್ಪೃಶ್ಯ ದಲಿತನೊಬ್ಬನ ಮನೆಯನ್ನು ಪ್ರವೇಶಿಸುವುದಾಗಲಿ, ಅವರೊಂದಿಗೆ ಕೂತು ಏಕಪಂಕ್ತಿಯಲ್ಲಿ ಸಹಭೋಜನ ಮಾಡುವುದಾಗಲಿ ಆ ದಿನಗಳಲ್ಲಿ ಅಸಾಧ್ಯವಾದ, ಅಪರೂಪದ ಮಹದ್ ಘಟನೆ, ಒಟ್ಟು ಸ್ವರೂಪದಲ್ಲಿ ಅದು ವಿಲಕ್ಷಣ, ಕ್ರಾಂತಿಕಾರಿ ಎಂದರೆ ತಪ್ಪಾಗಲಾರದು.

ಜಡಗೊಂಡ ಮತ್ತು ಅಮಾನವೀಯ ವ್ಯವಸ್ಥೆಯನ್ನು ಸಂಪೂರ್ಣವಾಗಿ ಬದಲಾಯಿಸಲು ಇತಿಹಾಸಕ್ಕೆ ಗತಿಶೀಲತೆಯನ್ನು ನೀಡಲು ಬಸವಣ್ಣ ಕೈಗೊಂಡಿದ್ದ ಹಲವು ಯೋಜನೆಗಳಲ್ಲಿ ಒಂದಾದ 'ಸಹಭೋಜನ'ದ ಕ್ರಾಂತಿಕಾರಿ ಸ್ವರೂಪವನ್ನು ಕವಿ ಇಲ್ಲಿ ಚಿತ್ರಿಸಿದ್ದಾನೆ. ಹಸಿವು, ತೃಷೆಗಳು ಮನುಷ್ಯ ಜೀವಿಗಳಿಗೆ ಸಮಾನವಾದುದರಿಂದ ಆರೋಗಣೆಯಲ್ಲಿ ಅಹಂ ಬಿಟ್ಟು ಸಹಭೋಜನ ಮಾಡುವುದು ಮುಖ್ಯವಾಗಿದೆ. ಈ ತತ್ವ ಹರಿಹರ ಕವಿಯಲ್ಲಿ ರೂಪಕದಂತೆ ಬಂದಿದೆ. ಇದನ್ನು ಮೇಲುವರ್ಗದ ಪಟ್ಟಭದ್ರರು ಪ್ರತಿಭಟಿಸುವುದು ಸಹಜ. ಎಲ್ಲರೂ ಒಂದು, ಅಸಮಾನತೆ ಇಲ್ಲ ಎಂಬುದಾದರೆ ದಾಮೋದರ ಭಟ್ಟ ಮುಂತಾದ ದರ್ಭೆಯ ನಿರ್ಭಾಗ್ಯರೆಲ್ಲ ರಾಜ ಬಿಜ್ಜಳನಿಗೆ ದೂರು ಸಲ್ಲಿಸಿ, ಇಂತಹ ಅನಾಚಾರ, ಧರ್ಮಬಾಹಿರದ ಅಕೃತ್ಯ ತಡೆಯದಿದ್ದರೆ.. .. .. . ನಾವಿಲ್ಲಿ ಇರುವಂತಿಲ್ಲ.. .. .. .. ಎಂದು ಹೆದರಿಸಿ ಒತ್ತಡ ತರುತ್ತಾರೆ. ರಾಜನಾದವನಿಗೆ ಸದಾಕಾಲ ಪುರೋಹಿತರನ್ನು ಸಮಾಧಾನ ತೃಪ್ತಿಗೊಳಿಸುವ ಅನಿವಾರ್ಯತೆ ಇರುತ್ತದೆಯೋನೋ ! ರಾಜ ಬಿಜ್ಜಳ ಬಸವಣ್ಣನನ್ನು ಕರೆಯ ಕಳಿಸುತ್ತನೆ. ಹೊಲಗೇರಿಗೆ ಹೋಗಿ ಅಸ್ಪೃಶ್ಯರೊಂದಿಗೆ ಊಟ ಮಾಡಿ ಬಂದಿರುವ ಬಸವನ ವಿಚಾರಣೆ ಅರಮನೆ ಒಳಗೆ ಎಂದಿನಂತೆ ನಡೆದುದಾದರೆ ಪಾವಿತ್ರ್ಯ ಮಡಿಹುಡಿ ನಾಶವಾಗುವುದೆಂದು ಭಾವಿಸಿ, ಸಿಂಹಾಸನವನ್ನು ಬಯಲಿಗೆ ತಂದು ಒಡ್ಡೋಲಗ ನಡೆಸುತ್ತಾನೆ.

ಅಸ್ಪೃಶ್ಯತೆಯ ತೀವ್ರತೆಗೆ, ವ್ಯಾಪಕತೆಗೆ ಇರುವ ನಿದರ್ಶನ, ಬಸವಣ್ಣ ವಿಚಾರಣೆಯನ್ನು ಧೀರನಾಗಿ, ದೃಢವಾಗಿ ಎದುರಿಸುತ್ತಾನೆ. ಆತನ ಹೇಳಿಕೆ ಧ್ವನಿಪೂರ್ಣವಾಗಿದೆ. "ಬುದ್ಧಿ ಇಲ್ಲದ ಹಿತ್ತಾಳೆ ಕಿವಿಯ ಮರುಳ ರಾಜನೆ, ನಾನು ನೀನು ತಿಳಿದಂತೆ ಹೊಲಗಲುಸುವ ಕೆಲಸ ಮಾಡಿಲ್ಲ. ನಾನೇನು ಹರನನ್ನು ತಿಳಿಯದ ನೈಜ ಹೊಲೆಯರಾದ ಸೌರಿಪೆದ್ದಿ, ಮುಕುಂದ ಭಟ್ಟ, ದಾಮೋದರ ಭಟ್ಟರ ಮನೆಯ ಹೊಕ್ಕು ಬಂದೆನೆ ? ವಿಪ್ರರನ್ನು ಸ್ಪರ್ಶಿಸಿದೆನೆ ? ಅವರಲ್ಲಿ ಊಟ ಮಾಡಿದೆನೆ ? ಎಂದು ಮರ್ಮಕ್ಕೆ ತಾಗುವಂತೆ ಉತ್ತರಿಸುತ್ತಾನೆ. ಇಲ್ಲಿ ಕವಿ ಬಿಜ್ಜಳನನ್ನು 'ವಿಪ್ರಪ್ರೇರಕ' ಎಂದು ಬಸವನನ್ನು 'ಶಿವಪ್ರೇರಕ' ಎಂದು ಕರೆದು ಅವರವರ ತಾತ್ವಿಕ ನೆಲೆಗಳನ್ನು ಸ್ಪಷ್ಟ ಪಡಿಸುತ್ತನೆ. ವಿಪ್ರರ (ಭವಿಗಳ) ಮತ್ತು ನಾಗಿದೇವನ (ಭಕ್ತರ) ರಕ್ತ ಪರೀಕ್ಷೆ ನಾಟಕೀಯತೆ ಸೂಕ್ಷ್ಮಗಳು ಅನನ್ಯವಾಗಿವೆ. ಈ ವಿಚಿತ್ರ ಪರೀಕ್ಷೆಗಾಗಿ ಸ್ವತಃ ಬಸವಣ್ಣ ನಾಗಿದೇವನನ್ನು ಕರೆತರಲು ಕೇರಿಗೆ ಹೋಗುತ್ತಾನೆ. ನಾಗಿದೇವನನ್ನು ಅಂದಣದಲ್ಲಿ ಕುಳ್ಳಿರಿಸಿ, ತಾನು ಅಂದಣದ ಪಕ್ಕದಲ್ಲೆ ನಡೆದು ಬರುತ್ತಾನೆ. ಪರೀಕ್ಷೆ

ಮುಕ್ತಾಯಗೊಂಡ ಮೇಲೆ ನಾಗಿದೇವನನ್ನು ನಗರದಲ್ಲೆಲ್ಲ ಮೆರವಣಿಗೆ ಮಾಡಲಾಗುತ್ತದೆ. ಮಹಾಮನೆಗೆ ಕರೆ ತಂದು ಉಡಲು, ಉಣ್ಣಲು ನೀಡಿ ಸತ್ಕರಿಸಿ ಕಳಿಸುತ್ತಾನೆ. ರಾಜ ಮತ್ತು ವಿಪ್ರರ (ರಾಜಸತ್ತೆ ಮತ್ತು ಪುರೋಹಿತ ಶಾಹಿ) ಎದುರಲ್ಲಿ ಅಸ್ಪೃಶ್ಯನನ್ನು ಅಂದಣ ಆನೆಗಳ ಮೇಲೆ ಮೆರವಣಿಗೆ ಮಾಡುವುದೇ ಬಹುದೊಡ್ಡ ಸಂಘರ್ಷಮಯ ವಾತಾವರಣ ಸೃಷ್ಟಿಯಾಗುತ್ತದೆ.

ಈ ಪ್ರಸಂಗದ ಚಿತ್ರಣದಲ್ಲಿ ಕವಿ, ಜಾತಿಮೂಢರ ಸ್ವಾರ್ಥ ಮತ್ತು ಭ್ರಮೆಗಳನ್ನು ಚೆನ್ನಾಗಿ ಎತ್ತಿತೋರಿ, ಅವುಗಳನ್ನು ನುಚ್ಚು ನೂರಾಗಿಸುತ್ತಾನೆ. ಇನ್ನೊಂದೆಡೆಗೆ ಅಸ್ಪೃಶ್ಯನಾದ ನಾಗಿದೇವನಿಗೆ, ಅಪಾರ ಗೌರವಾದರ ನೀಡಿ ಎತ್ತಿ ಹಿಡಿಯುತ್ತಾನೆ. ಮೇಲು ಜಾತಿಯ ಜನರ ಪೊಳ್ಳು ಪ್ರತಿಷ್ಠೆ ಮತ್ತು ಅಮಾನವೀಯ ವರ್ತನೆಗೆ ಪ್ರತಿಯಾಗಿ ಬಸವಣ್ಣ ಹಠ ಹಿಡಿದು ಕೆಳಜಾತಿಯವರ ಆತ್ಮಗೌರವ ಆತ್ಮ ಶಕ್ತಿಯನ್ನು ಕಾಪಾಡುತ್ತಾನೆ. ಬಸವಣ್ಣನ ವಚನಗಳ ತತ್ವಾದರ್ಶಗಳು ಈ ರಗಳೆಯಲ್ಲಿ ಹರಳುಗಟ್ಟುತ್ತವೆ. ಇವನಾರವ... ಇವರನಾರವ... ಇವನಾರವನೆಂದನಿ ಸದಿರಯ್ಯ; ಎಂತಹ ನಾದಡೇನು ಲಿಂಗ ಮುಟ್ಟಿದವನೇ ಕೀಳುಜಾತಿ; ಅಪ್ಪನು ಡೋಹರ ಕಕ್ಕಯ್ಯ; ಉತ್ತಮ ಕುಲದಲ್ಲಿ ಹುಟ್ಟಿದನೆಂಬ; ಮೇಲಾಗಲೊಲ್ಲೆನು ಕೀಳಾಗಲೊಲ್ಲದೆ ಇತ್ಯಾದಿ ವಚನಗಳ ಆಶಯವಿಲ್ಲ.

ಫಲಿತಗೊಂಡಿದೆ. ಹರಿಹರನು ಅನನ್ಯ ಪ್ರತಿಭೆ ದರ್ಶನಗಳಿಂದ ವಿರುದ್ಧ ಸ್ವಭಾವ ವರ್ತನೆಗಳ ಸಂಘರ್ಷವನ್ನು, ತಾತ್ವಿಕತೆಯ ಚೌಕಟ್ಟಿನಲ್ಲಿಟ್ಟು, ಜಾತಿ ಭೇದವನ್ನು ಸರಿಯಾದ ರೀತಿಯಲ್ಲಿ ಮಟ್ಟ ಹಾಕುತ್ತಾನೆ. ರಗಳೆಯ ಮುಂದಿನ ಸ್ಥಲದಲ್ಲಿ ಬಸವಣ್ಣ ಕೆಳವರ್ಗದ ದಲಿತ ಶರಣರೊಂದಿಗೆ ಹೊಂದುವ ಸಂಬಂಧ ಚರ್ಚೆಗಳನ್ನು ಮುಖ್ಯವೆಂಬಂತೆ ಚಿತ್ರಿಸಲಾಗಿದೆ. ಸಂಬೋಳಿ ನಾಗಿದೇವನ ಪ್ರಸಂಗ ತರಾವಾಯ ಕಿನ್ನರಿಬೊಮ್ಮಯ್ಯನ ಈರುಳ್ಳಿಯ ಘಟನೆ ಬರುತ್ತದೆ. ಮುಂದೆ ಬಸವಣ್ಣ, ಬಿಬ್ಬಿಬಾಚಯ್ಯ, ಡೋಹರ ಕಕ್ಕಯ್ಯ, ಮೋಳಿಗಿ ಮಾರಯ್ಯ, ಮಡಿವಾಳ ಮಾಚಿದೇವ ಇತ್ಯಾದಿ 'ಉತ್ತಮೋತ್ತಮ ಶರಣರೊಳು ಕುಡಿಯಾಡುತಂ' ಸಮಯವನ್ನು ಸಾರ್ಥಕ ಪಡಿಸಿಕೊಳ್ಳುವನು ಕವಿಯ ಒಲವು ಸಹಾನುಭೂತಿಗಳು ಯಾರ ಪರವಾಗಿದೆ ಎಂಬುದನ್ನು ಸುಲಭವಾಗಿ ಅರಿಯಬಹುದು.

### ಚಂದಿಮರಸ–ಕೆಂಬಾವಿ ಭೋಗಣ್ಣರ ನಡುವಿನ ಸಂಘರ್ಷ

ಕನ್ನಡ ನಾಡಿನ ಶಿವಶರಣರ ಚರಿತ್ರೆಗಳಲ್ಲಿ ಕೆಂಭಾವಿ ಭೋಗಣ್ಣನ ವೃತ್ತಾಂತ ಮಹತ್ವ ಪಡೆದಿದೆ. ಕೆಂಬಾವಿ ಗ್ರಾಮದ ಜಂಗಮಪ್ರೇಮಿ ಬೋಗಣ್ಣ ಎಂಬ ಶಿವಶರಣರ ಕಾಯಕ ಮಾಡಿ ತನ್ನ ವ್ಯಕ್ತಿತ್ವವನ್ನು ವೃದ್ಧಿಸಿಕೊಂಡಿರುತ್ತಾನೆ. ಹೀಗಿರಲು ಒಂದು ದಿನ ಶಿವಭಕ್ತನು ಕಾಯಕವನ್ನು

ಪರೀಕ್ಷಿಸಲು ಒಂದು ಸಲ ಶಿವನು ಶ್ವಪಚನ ವೇಷಧರಿಸಿ ಬೋಗಣ್ಣನ ಮನೆಗೆ ಬರುತ್ತಾನೆ. ಭೋಗಣ್ಣ ಅವನನ್ನು ಒಬ್ಬ ಶಿವಭಕ್ತನೆಂದು ಭಾವಿಸಿ, ಮನೆಯೊಳಗೆ ಬರಮಾಡಿಕೊಂಡು ಆರೋಗಣೆ ನೀಡಿ ಉಪಚರಿಸುತ್ತಾನೆ. ಇದರಿಂದ ವಿಪ್ರರೆಲ್ಲ ಕೆರಳಿ ರಾಜನಾದ ಚಂದಿಮರಸನ ಹತ್ತಿರ ಹೋಗಿ ಅವನ ವಿರುದ್ಧ ದೂರು ಸಲ್ಲಿಸುತ್ತಾರೆ. ವಿಪ್ರರ ಒತ್ತಾಯಕ್ಕೆ ಮಣಿದು ರಾಜ ಭೋಗಣ್ಣನ ವಿಚಾರಣೆ ನಡೆಸಿ, ಊರಿನಿಂದ ಹೊರಟು ಹೋಗುವ ಬಹಿಷ್ಕಾರದ ಶಿಕ್ಷೆ ವಿಧಿಸುತ್ತಾನೆ. ಶಿಕ್ಷೆಯನ್ನು ಒಪ್ಪಿ ಊರಿನಿಂದ ಹೊರಟು ನಿಂತರೆ ಆತನನ್ನು ಊರಿನ ಶಿವಲಿಂಗಗಳೆಲ್ಲ ಬೆಂಬತ್ತುತ್ತವೆ. ಲಿಂಗಗಳೊಂದಿಗೆ ಆತ ಊರಾಚೆ ಹೋಗಿಬಿಡುವನು. ಲಿಂಗಗಳೆಲ್ಲ ದೇವಾಲಯಗಳನ್ನು ಕಂಡು, ವಿಪ್ರರು ದಿಗಿಲುಗೊಂಡು ರಾಜನಿಗೆ ಮೊರೆಯಿಡುತ್ತಾರೆ.

ರಾಜನು ಸಕಲರೊಂದಿಗೆ ತೆರಳಿ ಭೋಗಣ್ಣನಲ್ಲಿ ಕ್ಷಮೆತೋರಿ ಅವನನ್ನು ಕರೆತರುತ್ತಾನೆ. ಲಿಂಗಗಳೆಲ್ಲ ತಾವಾಗಿಯೇ ಮರಳಿ ಬಂದವು ಬೋಗಣ್ಣನಿಗೆ ಗಣಪದವಿ ದೊರೆಯುತ್ತದೆ ಇದು ರಗಳೆಯ ಕಥಾ ವಸ್ತುವಾಗಿದೆ. ಆರಂಭದಲ್ಲಿ ಭೋಗಣ್ಣನನ್ನು ಪರಿಚಯಿಸುವಾಗಲೇ ಕವಿ ಆತನ ವ್ಯಕ್ತ ವಿಶೇಷತೆಯನ್ನು ಚೆನ್ನಾಗಿ ಎತ್ತಿ ತೋರಿದ್ದಾನೆ. ಬಹುಕಾಲದ ಆತನ ಶಿವಭಕ್ತ 'ಪೂತು ಫಲವಾಗುವ' ಕಾಲ ಒದಗಿ ಬರಲು ಕಾರಣವೂ ಇತ್ತು. ಅದು ಭೋಗಣ್ಣನ ತತ್ವವೂ ಹೌದು; ವ್ಯಕ್ತಿತ್ವವೂ ಹೌದು.

"ಶಿವಭಕ್ತರೊಡನೆ ಜಾತಿಯ ವಿಚಾರಿಪುದಿಲ್ಲ

ಶಿವಭಕ್ತರೊಳಗೆ ಭೇದವ ಕಲ್ಪಿಸುವುದಿಲ್ಲ"

ಎಂಬ ಸಮದೃಷ್ಟಿ ಆತನ ಭಕ್ತಿಯೂ ಶಕ್ತಿಯೂ ಆಗಿತ್ತು. ಸಾಧನೆಯೂ ಸಿದ್ಧಿಯೂ ಆಗಿತ್ತು. ಭಕ್ತರೆಂದರೆ ಆತನಿಗೆ ಪ್ರಾಣ, ಭಕ್ತರ ಲಾಂಛನ ಕಂಡರೆ ಅವನು ಕರಗಿ ಬಿಡುತ್ತಿದ್ದ ಅವರಿಗೆಲ್ಲ ಜಾತಿ ಪಾತಿ ಲಕ್ಷಿಸದೆ ಸೇವೆ ಸಲ್ಲಿಸುತ್ತಿದ್ದ. ಈ ವರ್ತನೆಯೇ ಭೋಗಣ್ಣನಿಗೆ ಮುಳುವಾಗಿ ಬಿಡುತ್ತದೆ. ಭಕ್ತ ವೇಷದಲ್ಲಿದ್ದ ಶ್ವಪಚನನ್ನು ಕಾಲು ತೊಳೆದು, ಆರೋಗಣೆ ನೀಡಿ ಆತನ ಪ್ರಸಾದ ಪಡೆದು ಶಿವನಿಷ್ಠೆ, ಜಂಗಪ್ರೇಮ ಮೆರೆಯುತ್ತಾನೆ. ಆತನಿಗೆ ಈ ಯಾವ ಸಂದರ್ಭದಲ್ಲಿಯೂ 'ಜಾತಿ' ನೆನಪಾಗುವುದಿಲ್ಲ. ಅಂಥ ಹೀನಾಯ ಅವನ ಒಳ ಹೊರಗೆ ಸುಳಿಯುವುದಿಲ್ಲ. ಆದರೆ ಇದನ್ನು ಕಣ್ಣಾರೆ ಕಂಡು ಕೆಂಬಾವಿಯ ವಿಪ್ರರು ಸುಮ್ಮನಿದ್ದಾರೆಯೇ ? 'ಮಟ್ಟೆಯ ಮರುಳ್ಗಳ್' ನೆರೆದು, ಧರ್ಮ ಬಾಹಿರ ವರ್ತನೆಗೆ ಶಿಕ್ಷಿಸಬಹುದಾದ ವ್ಯಕ್ತಿಯೊಬ್ಬ ತಮ್ಮ ಕೈಗೆ ಸಿಕ್ಕನೆಂಬ ಸಂತೋಷ ಮಿಗಿಲಾಗಿ ರಾಜನ ಹತ್ತಿರ ಬರುತ್ತಾರೆ. ಭೋಗಣ್ಣನ ಅಕೃತ್ಯ ತಿಳಿಸಿ 'ಕೇಳರಸ

ನಿಮ್ಮೂರೊಳಿರವಾಗದೆಮಗೆಲ್ಲ' ಎಂದು ಹೆದರಿಸಿ, ಭಕ್ತಿಯೆಂದು ಊರೆಲ್ಲ ಹೊಲೆಗಲಿಸಿದವನಿಗೆ ಶಿಕ್ಷೆಯಾಗಬೇಕು. ಇಲ್ಲವಾದರೆ ಅರಸನ ಕುಲವೆಲ್ಲ ನಿರ್ಮಾಲನವಾದೀತೆಂದು ಸಾರುತ್ತಾರೆ. ಈ ಒತ್ತಡ ತಂತ್ರ ಮತ್ತು ಧಾರ್ಮಿಕ ದಬ್ಬಾಳಿಕೆಯನ್ನು ಪುರೋಹಿತ ಶಾಹಿಯ ಕುತಂತ್ರವೆ ಸರಿ, ಜಾತಿವ್ಯವಸ್ಥೆಯು ಅತ್ಯಂತ ಭದ್ರವಾಗಿರುವಂತೆ, ಶೋಷಣೆ ಸದಾ ನಡೆಯುವಂತೆ ನೋಡಿಕೊಳ್ಳುವ ಹುನ್ನಾರವಿದ್ದು, ಭೂಸುರರ ಒತ್ತಡಕ್ಕೆ ರಾಜ ಮಣಿಯುತ್ತಾನೆ. ಹೀಗಾಗಿ ಭೋಗಣ್ಣನ ವಿಚಾರಣೆ ನಡೆಯುತ್ತದೆ. ಈ ವಿಚಾರಣೆಯೂ ಏಕ ಪಕ್ಷೀಯವಾಗಿತ್ತು, ರಾಜ ಅಸಮಾಧಾನದಿಂದ ಕೇಳುವನು.

"ಏನಯ್ಯಾ ಪುರದೊಳಗೆ ಕೃತ್ಯವಂ ಮಾಳ್ವದೆ

ಏನಾದಡಂ ಹೊಲೆಯರಂ ಹೊಗಿಸಿ ಬಾಳ್ವರೆ"೧೫೫

ಇದು ಆರೋಪ, ವಿಪ್ರರ ಚಾಡಿಮಾತಿನಿಂದ ವಿಚಾರಣೆ ನಡೆಸುತ್ತಿರುವ ರಾಜನ ಆರೋಪ, ಇದಕ್ಕೆ ಭೋಗಣ್ಣನೂ ಅವರಿಗೆ ಮುಟ್ಟಿ ನೋಡಿಕೊಳ್ಳುವ ಉತ್ತರವನ್ನೇ ನೀಡುತ್ತಾನೆ. 'ಅರಸನೇ ನಾನು ನನ್ನ ಮನೆಯಲ್ಲಿ ಯಾವ ಹೊಲೆಯರನ್ನು ಹೊಗಿಸಿಲ್ಲ. ನಾನೇನು ಕೃಷ್ಣ ಪೆದ್ದಿಗಳನ್ನು ಕರೆದೆನೆ ? ವಿಷ್ಣು ಭಟ್ಟರನ್ನು ಸೋಂಕಿದೆನೆ ? ಶಿವನನ್ನರಿಯದ ಹೊಲೆಯರನ್ನು ಮನೆಗೆ ಹೋಗಿಸಿಲ್ಲ. ಬದಲಿಗೆ ಒಳ್ಳೆಯ ಶಿವಭಕ್ತನೊಬ್ಬನನ್ನು ಉಪಚರಿಸಿರುವೆ" ಇದು ದಿಟ್ಟವಾದ ಉತ್ತರ. ಈ ಉತ್ತರವು ಜಾತಿ ವ್ಯವಸ್ಥೆಯ ತಲೆಗೆ ಮೊಳೆಯಿಟ್ಟು ಹೊಡೆದ ಹಾಗಿದೆ" ವಿಪ್ರರೆದುರು ನಿಂತು 'ನೀವೇ ನಿಜವಾದ ಹೊಲೆಯರು' ಎನ್ನುವ ಭೋಗಣ್ಣನನ್ನು ರಾಜ ಶಿಕ್ಷಿಸುವುದು ಅನಿವಾರ್ಯವಾಗುತ್ತದೆ. ವಿಚಾರಣೆಗಾಗಲಿ, ಆರೋಪಕ್ಕಾಗಲಿ, ಮುಂದಿನ ಶಿಕ್ಷೆಗಾಗಲಿ ಭೋಗಣ್ಣ ಸ್ವಲ್ಪವೂ ಅಂಜುವುದಿಲ್ಲ; ಅಳುಕುವುದಿಲ್ಲ. ಭೋಗಣ್ಣ ತನಗೆ ವಿಧಿಸಿದ ಬಹಿಷ್ಕಾರದ ಶಿಕ್ಷೆಯನ್ನು ಸಂತೋಷದಿಂದ ಸ್ವೀಕರಿಸಿ, ಊರು ಬಿಟ್ಟು ಹೊರಟು ಬಿಡುತ್ತಾನೆ. ಇಲ್ಲಿಂದ ಮುಂದೆ ನಡೆಯುವುದೆಲ್ಲ ಮಹಾಕವಿ, ಹರಿಹರನ ದರ್ಶನಲೀಲೆ. ಭೋಗಣ್ಣ ಊರಿನಿಂದ ಹೊರಟು ನಿಂತರೆ ಅದರ ಪರಿಣಾಮವಾಗುವುದು ಆ ಊರಿನ ದೇವಾಲಯಗಳ ಮೇಲೆ.

"ಒಂದಡಿಯನಿಡೆ ಪುರದ ಲಿಂಗಮಾಡನುಬ್ಬಿದವು.

.. .. .. .. .. .. .. .. .. .. .. .. ..

ನಡೆಯೆ ನಡೆದವು ಪುರದ ಶಿವಲಿಂಗವೊಂದಾಗಿ"

ಲಿಂಗಗಳೆಲ್ಲ ಪೀಠಬಿಟ್ಟು, ಉರುಳುರುಳುತ್ತ ಭೋಗಣ್ಣನ ಬೆನ್ನು ಹತ್ತಿದವು. ಜಂಗಮವು ಲಿಂಗಕ್ಕೆ ಲಿಂಗವಾ ಜಂಗಮಕ್ಕೆ ತತ್ವ ಸಾಕಾರಗೊಂಡು ಮುಂದೆ ಭಕ್ತ ನಡೆದರೆ ಅವನ ಹಿಂದೆ ಲಿಂಗಗಳು ಹೊರಟವು. ತನ್ನೊಂದಿಗೆ ಬರುತ್ತಿದ್ದ ಲಿಂಗ ಸಮೂಹ ಕಂಡು ಭೋಗಣ್ಣ ಇಳೆಗೆ ಪೊಸತಿಂಗೆ ಪೊಸತು ಮಾಡಿ ನೋಳ್ಪರೇ ಎಂದು ಕೇಳಿ ಎಡಬಲದ ಲಿಂಗಗಳನ್ನು ಎಡಬಲದ ಕೈಗಳಿಂದ, ತನ್ನೆದುರಿಗೆ ಇರುವ ಲಿಂಗಗಳನ್ನು ಎದೆಯಿಂದ, ಹಿಂದಿನವುಗಳನ್ನು ಬೆನ್ನಿನಿಂದ ಅಪ್ಪಿಕೊಂಡು ಮುಂದೆ ಸಾಗುತ್ತಾನೆ. ವಿಚಿತ್ರವೆಂದರೆ ಲಿಂಗಗಳಿಗೆ ನೆರಳಾಗಿ ಊರಿನ ಗಿಡಮರಗಳೆಲ್ಲ ನಡೆದು ಬರುತ್ತವೆ. !

ಕೆಂಭಾವಿಯಲ್ಲಿ ಬೆಳಗಾಯಿತು. ವಿಪ್ರರು ಎಂದಿನಂತೆ ಪೂಜೆಗೆ ನಡೆದರು. ದೇವಾಲಯಗಳ ಬಾಗಿಲು ತೆರೆದು ನೋಡುತ್ತಾರೆ; ಲಿಂಗಗಳಿಲ್ಲ, ಬಲಿದಾನ ಪೀಠಗಳಿವೆ. ಭಯಗೊಂಡು ರಾಜನ ಹತ್ತಿರ ಓಡಿಬರುತ್ತಾರೆ; ತಮ್ಮ ಗೋಳು ಹೇಳುತ್ತಾರೆ. ಸರ್ವರಿಗೂ ಭೋಗಣ್ಣನ ಸತ್ವ ಶಕ್ತಿಗಳ ಅರಿವಾಗುತ್ತದೆ. ರಾಜನಂತೂ ವಿಪ್ರರ ಮಾತುಕೇಳಿ ತಾನು ಮೂಢನಾದೆನೆಂದು ತಿಳಿಯುತ್ತಾನೆ. ತಾನೆ ಸ್ವತಃ ಪರಿಜನ-ಪುರಜನರೊಂದಿಗೆ ವಾದ್ಯ, ಕಲಶ, ಕನ್ನಡಿಗಳೊಂದಿಗೆ (ರಾಜಮರ್ಯಾದೆಯಿಂದ) ಭೋಗಣ್ಣನನ್ನು ಕರೆತರಲು ಬರುತ್ತಾನೆ. ಊರ ಹೊರವಲಯದಲ್ಲಿ ಶಿವಲಿಂಗ ಸಾಮ್ರಾಜ್ಯದಲ್ಲಿ ವಿರಮಿಸುತ್ತಿದ್ದ ಭೋಗಣ್ಣ, ಲಿಂಗಕ್ಷೇಮ ನೆನೆದು ಊರಿಗೆ ಮರಳಿ ಬರುತ್ತಾನೆ. ಲಿಂಗಗಳೆಲ್ಲ ನಾಮುಂದೆ ತಾಮುಂದೆ ಎಂದು ಓಡಿಬಂದು, ಊರು ಸೇರಿ ಪೀಠಗಳನ್ನೆರುತ್ತವೆ. ಭೇದ ಭಾವಗಳಲ್ಲಿ ನಂಬಿಕೆಯಿಲ್ಲದೆ, ಭಕ್ತರೆಲ್ಲ ಒಂದು ಎಂಬ ಭಾವದ ಭೋಗಣ್ಣ ಶ್ವಪಚನಿಗೆ ಊಟಕ್ಕಿಕ್ಕಿ, ವಿಚಾರಣೆಯಲ್ಲಿ ಅದನ್ನು ಸಮರ್ಥಿಸಿಕೊಂಡು, ಸಂಕುಚಿತ ಬುದ್ಧಿಯ ಮೇಲು ಜಾತಿಯವರನ್ನು ಹೊಲೆಯರೆಂದು ಜರಿದು, ತನ್ನ ತಾತ್ವಿಕ ಬದ್ಧತೆಗಾಗಿ ಶಿಕ್ಷೆ ಅನುಭವಿಸುವುದು, ಕೊನೆಗೆ ಗೆಲ್ಲುವುದು ಇವೆಲ್ಲ ಸಾಮಾಜಿಕ ಪಿಡುಗಿನ ವಿರುದ್ಧ ಆತ ನಡೆಸುವ ಬಹುದೊಡ್ಡ ಸಂಘರ್ಷವಾಗಿದೆ. ಇಂತಹ ಭಕ್ತನ ಬೆಂಬತ್ತು ಲಿಂಗಗಳು, ಲಿಂಗಗಳನ್ನು ಬೆಂಬತ್ತುವ ಗಿಡಮರಗಳು ಅದ್ಭುತ ಪ್ರತೀಕಗಳಾಗಿವೆ.

## ಅಕ್ಕಮಹಾದೇವಿ ಕೌಶಿಕರ ನಡುವಿನ ಸಂಘರ್ಷ

ಮಹಾದೇವಿಯಕ್ಕನ ರಗಳೆ ಹರಿಹರನ ಕಾವ್ಯಾಂಬುಧಿಯಿಂದ ಉದ್ಭವಿಸಿದ ಹಲವು ರಸಾತ್ಮಕ ಕೃತಿಗಳಲ್ಲಿ ಒಂದು. ಬಸವರಾಜ ದೇವರ ರಗಳೆ, ನಂಬಿಯಣ್ಣನ ರಗಳೆಗಳನ್ನು ಬಿಟ್ಟರೆ ಇದು ಮೂರನೆಯ ಬಹುಮುಖ್ಯ ಕೃತಿ. ಇದರಲ್ಲಿ ಏಳು ಸ್ಥಲಗಳಿವೆ. ಈ ಏಳು ಸ್ಥಲಗಳಲ್ಲಿ ಮಹಾದೇವಿಯಕ್ಕನ ಮಹೋನ್ನತ ಬದುಕನ್ನು ಅವಳಡಿಸಿರುವುದನ್ನು ಕಾಣಬಹುದು.

ಕೈಲಾಸದಲ್ಲಿ ರುದ್ರಕನ್ನಿಕೆಯಾಗಿದ್ದ ಮಹಾದೇವಿ, ಗುಪ್ತಭಕ್ತ ನೆಂದರಿಯದೆ ಒಬ್ಬ ಗಣೇಶ್ವರರನ್ನು ಭವಿಯೆಂದು ನಿಂದಿಸಿದ ತಪ್ಪಿನ ಪರಿಮಾರ್ಜನೆಗಾಗಿ ಭೂ ಲೋಕದಲ್ಲಿ ಶಿವಭಕ್ತ ದಂಪತಿಗಳ ಉದರದಲ್ಲಿ ಜನಿಸಿ, ಭವಿಯ ಹೆಂಡತಿಯಾಗಿ ಬಾಳಿ ಕೈಲಾಸಕ್ಕೆ ಬರಬೇಕು ಎಂದು ಪಾರ್ವತಿದೇವಿ ಶಾಪವಿಕ್ಕುತ್ತಾಳೆ. ಹೀಗೆ ಕಥೆ ಆರಂಭವಾಗುತ್ತದೆ. ಇಲ್ಲಿ ಮುಖ್ಯವಾಗಿ ಅಕ್ಕಮಹಾದೇವಿಯನ್ನು ಕೌಶಿಕ ತನ್ನೆಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸುವ ಸನ್ನಿವೇಶ. ಆ ಸಂದರ್ಭದಲ್ಲಿ ರಾಜ ಕೌಶಿಕ ಮಹಾದೇವಿ, ತಂದೆ ತಾಯಿಗಳಿಗೆ ಬೆದರಿಕೆ ಹಾಕಿ ಮಹಾದೇವಿಯನ್ನು ವಿವಾಹವಾಗುವ ಸಂದರ್ಭದಲ್ಲಿ ಏರ್ಪಡುವ ಸಂಘರ್ಷ, ರಾಜನ ಆಜ್ಞೆಗೆ ಬೆದರಿದ ಮಂತ್ರಿಗಳು, ಮಂತ್ರಿಗಳ ಆದೇಶಕ್ಕೆ ತಲೆಬಾಗಿ ವಸಂತಕರು, ಮಹಾದೇವಿ ತಂದೆ ತಾಯಿಯನ್ನು ಸೆಳೆಯುವ ಪ್ರಯತ್ನ, ಇದ್ಯಾವುದೂ ಕೈಗೂಡದಿದ್ದಾಗ. ಅರಸು ಕೌಶಿಕನಿಗೆ ಮಗಳನ್ನು ಕೊಟ್ಟು ಮದುವೆ ಮಾಡುವುದು. ಇಂತಹ ಸಂದರ್ಭದಲ್ಲಿ ಉದ್ಭವಿಸಿದ ಸಂಘರ್ಷಗಳ ಬಗ್ಗೆ ಪ್ರಸ್ತಾಪಿಸಲು ಯತ್ನಿಸಲಾಗಿದೆ.

ಉಡುತಡಿಯಲ್ಲಿ ವಾಸವಾಗಿದ್ದ ಶಿವಭಕ್ತೆ ಮತ್ತು ಶಿವಭಕ್ತ ಎಂಬ ದಂಪತಿಗಳಿಗೆ ಮಗಳಾಗಿ ಹುಟ್ಟುತ್ತಾಳೆ. ಹುಟ್ಟಿದ ಮಗುವಿಗೆ ಮಹಾದೇವಿಯೆಂಬ ಹೆಸರಿಟ್ಟು ಪರಮ ಪ್ರೀತಿಯಿಂದ ಸಲುಹುತ್ತಾರೆ. ಇಲ್ಲಿಂದ ಮಹಾದೇವಿಯಕ್ಕನ ಬಾಲ್ಯದ ಬದುಕು ಪ್ರಾರಂಭವಾಗುತ್ತದೆ. ಮಗುವಿನ ಬಾಲ್ಯ ಕಳೆದು ಯೌವ್ವನ ಪ್ರಾಪ್ತಿಯಾಗುತ್ತದೆ. ಬಟ್ಟನಡು ಬಡವಾಗಲಿರ್ದುಪುದು ಬಾಸೆಯ ಸೀಮೆ ಸಾಲಱಪಲಿರ್ದುದು ಕುಚಸ್ಥಲಂ ಸೀಮಾರೇಖೆಯಂ ಕುಱ ಹಿಡಿಲಿರ್ದುವು. ಬರಿಯ ಮೇಲುದು ವಕ್ಷದೇಶಮಂ ಬಾಸಣಿಸಲಿರ್ದುದು ಕಕ್ಷಮೂಲಂ ಕಬ್ಬುರಿಸಲಿರ್ದುದು ತೋಳು ಡಾಳವೇಅಲಿರ್ದುವು. ............................ ಸೂಸುವ ನೋಟಂ ವಕ್ರತೆಯಂ ಮಱಗೊಳಲಿರ್ದುದು"[೧೫೬] ಹೀಗೆ ತುಂಬ ಆಕರ್ಷಣೀಯವಾಗಿ ಬೆಳೆಯುತ್ತಾಳೆ. ಇಂಥ ಅಪ್ರತಿಮ ಸುಂದರಿ ಒಮ್ಮೆ ವೈಹಾಳಿಯಿಂದ ಬರುತ್ತಿದ್ದ ಕೌಶಿಕನ ಕಣ್ಣಿಗೆ ಬೀಳುತ್ತಾಳೆ. ಅವಳನ್ನು ನೋಡುತ್ತಿದ್ದಂತೆಯೇ ಕೌಶಿಕ ಅವಳ ಮೋಹಕ್ಕೆ ಒಳಗಾಗುತ್ತಾನೆ. ಇಲ್ಲಿಂದ ಸಂಘರ್ಷ ಆರಂಭವಾಗುತ್ತದೆ. ಕೌಶಿಕ ಮಹಾದೇವಿಯೊಡನೆ ಮದುಮಗಳಾಗಲು ಬಯಸಿ, ಆಕೆಯ ಒಪ್ಪಿಗೆ ಪಡೆಯಲು ತನ್ನ ಸಹವರ್ತಿಗಳನ್ನು ಕೌಶಿಕ ಮಹಾದೇವಿಯ ಮನೆಗೆ ಕಳಿಸುತ್ತಾನೆ. ಮಹಾದೇವಿ ಭವಿಯಾದ ಕೌಶಿಕನನ್ನು ಮದುವೆಯಾಗಲು ಒಪ್ಪುವುದಿಲ್ಲ. ಮತ್ತೆ ಮತ್ತೆ ಕೌಶಿಕ ಮಂತ್ರಿಗಳ ಮೂಲಕ ಪ್ರಯತ್ನ ಮಾಡುತ್ತಾನೆ.

ಎಷ್ಟು ಪ್ರಯತ್ನಿಸಿದರೂ ಮಹಾದೇವಿ ಒಪ್ಪುವುದಿಲ್ಲ. ಆಗ ಕೌಶಿಕ ಬಲವಂತದಿಂದಲಾದರೂ ಮಹಾದೇವಿಯನ್ನು ಕರೆತರುವಂತೆ ಮಂತ್ರಿಗಳಿಗೆ ಸೂಚಿಸುತ್ತಾನೆ. ಅಂತೆಯೇ ಮಂತ್ರಿಗಳು ಮಹಾದೇವಿಯಕ್ಕನ ತಂದೆ, ತಾಯಿ ಬಳಿ ಬಂದು, ರಾಜನನ್ನು ಎದುರು ಹಾಕಿಕೊಳ್ಳುವುದು

ಸೂಕ್ತವಲ್ಲ ಎಂಬ ಅರ್ಥದಲ್ಲಿ ಬೆದರಿಸುತ್ತಾರೆ. ತಂದೆ, ತಾಯಿಯರ ಇಕ್ಕಟ್ಟನ್ನು ಅರ್ಥ ಮಾಡಿಕೊಂಡ ಮಹಾದೇವಿ ಮೂರು ಷರತ್ತುಗಳನ್ನು ಹಾಕಿ, ಕೌಶಿಕನೊಡನೆ ಮದುವೆಯಾಗುತ್ತಾಳೆ.

ಸ್ವಲ್ಪ ಕಾಲ ಅರಮನೆಯಲ್ಲಿರುತ್ತಾಳೆ. ಅಲ್ಲಿ ಶಿವಪೂಜೆಯಲ್ಲಿ ನಿರತಳಾಗುತ್ತಾಳೆ. ಕಾಮದವಾಸನೆ ಮೈಗಂಟಿದ ಕೌಶಿಕನಿಗೆ ಮಹಾದೇವಿ ಶಿವಪೂಜೆಯಲ್ಲಿ ನಿರತಳಾದಷ್ಟು ಕಾಮ ಬಯಕೆ ಹೆಚ್ಚುತ್ತಲೇ ಇರುತ್ತದೆ. ಕಾಮೋತ್ಕಟತೆಯಲ್ಲಿ ಮಹಾದೇವಿ ಹಾಕಿದ ಮೂರು ಷರತ್ತನ್ನು ಮುರಿಯುತ್ತಾನೆ. ಇದು ಮಹಾದೇವಿಯು ಕೌಶಿಕನ ಸೆರೆಯಿಂದ ಬಿಡಿಸಿಕೊಂಡು ಅರಮನೆಯನ್ನು ಬಿಟ್ಟು ಹೋಗುವುದಕ್ಕೆ ಮಾರ್ಗವಾಗುತ್ತದೆ. ಕೂಡಲೇ ಅರಮನೆಯನ್ನು ಬಿಟ್ಟು ಕೇಶಾಂಬರೆಯಾಗಿ ಶ್ರೀ ಪರ್ವತಾಭಿಮುಖವಾಗಿ ನಡೆಯುತ್ತಾಳೆ. ಮಗಳ ಮನಸನ್ನು ಬದಲಿಸಲು ಮಹಾದೇವಿಯಕ್ಕನ ತಂದೆ ತಾಯಿಯರು ಮತ್ತೆ ಅವಳಿರುವಲ್ಲಿಗೆ ಹೋಗುತ್ತಾರೆ. ಆಗ ಮಹಾದೇವಿಯಕ್ಕ "ಶಿವಭಕ್ತರಾಗಿಯಂ ನೀವಿಂತು ನುಡಿವರೇ...... ಇರ್ಪುದಂ ಕಡಿಸುವರ್ ಮಾತೆ ಪಿತರೆನಗಲ್ಲ".[೧೫೭] ಎಂದು ಕಠಿಣವಾಗಿ ನುಡಿಯುತ್ತಾಳೆ. ಹಾಗೆಯೇ ಕಪಟವೇಷ ಧರಿಸಿ ಬಂದ ಕೌಶಿಕನನ್ನು ಎಲೆಲೆ ಕೌಶಿಕ ಹೋಗು ಹೋಗು ನೀನೆಕೆ ನಾನೇಕೆ ......................... ತಮವೆತ್ತ ಬೆಳಗೆತ್ತ ಶಿಬಿಯತ್ತ ತಂಡೆತ್ತ, ಭ್ರಮೆಯೆತ್ತ, ತಿಳಿವೆತ್ತ, ಬಿಸಿಲೆತ್ತ ಶಶಿಯತ್ತ"[೧೫೮] ಎಂದು ನುಡಿದು ಚನ್ನಮಲ್ಲಿಕಾರ್ಜುನನ ಧ್ಯಾನದಲ್ಲಿರುತ್ತಾಳೆ. ಮಹಾದೇವಿಯಕ್ಕನ ಸರಳವಾದ ಈ ಜೀವನ ಚಿತ್ರಣದೊಳಗೆ ಹರಿಹರ ಅವಳ ವ್ಯಕ್ತಿತ್ವವನ್ನು ಸೆರೆ ಹಿಡಿದಿದ್ದಾನೆ.

ಕವಿ ಹೇಳುವಂತೆ ಮಹಾದೇವಿಯಕ್ಕ ಭಕ್ತಿಯ ಭಾವಕಿ. ಅವಳ ಭಕ್ತಿ ಹೃದಯವನ್ನು ವರ್ಣಿಸಲು ಒಂದು ಸ್ಥಲವನ್ನೇ ಮೀಸಲಿಟ್ಟಿದ್ದಾನೆ. ಪರಮಭಕ್ತೆಯಾದ ಮಹಾದೇವಿ ಚನ್ನಮಲ್ಲಿಕಾಜುನನ್ನು ಒಲಿದವಳು ಅವಳು. ನಗೆಯ ಬೆಳಗಿನೊಳಗೆ ಶಶಿಯ ಬೆಳಗು ಬೆಳಗನೆತ್ತಿ ಕಟ್ಟೆ ಮಲ್ಲಿನಾಥನ ಥಲ ಭಕ್ತಿ ಬಗೆದು ನೆನೆದು ಒಪ್ಪತೆರದಿ ಎಲ್ಲ ತೆರದಿ ಸಿಂಗರಂಗಳೊಪ್ಪಿ ನೆಗೆದು ಒಪ್ಪ ತೆರದಿ ಶಿವನ ಸುಖದ ಮುಖದ ಕಣ್ಣ ಬೆಳೆಬೆಳೆದು ನಡೆದ ತೆರದಿ, ಭವನ ಪೂಜರೂಪ್ಪವಡೆದು ಒರ್ವ ತಂದೆ ಬಂದು ಏಕನಿಷ್ಠೆ ನೇಮದಿಂ..............................."[೧೫೯] ಹೀಗೆ ಮಲ್ಲಿಕಾರ್ಜುನನ ಮುಂದೆ ಕುಳಿತು ಅವನನ್ನು ಬಳ್ಳಿವರಿವ ನೇಹದುಸಿಕ ಧೂಪದಿಂದ ಪೂಜಿಸುತ್ತಾಳೆ. ಮನದಲ್ಲೆಲ್ಲಾ ಮಲ್ಲಿಕಾರ್ಜುನನೇ ಆವರಿಸಿರಲು, ಅಂತರಂಗದಲ್ಲಿನ ಭಕ್ತ ಆರ್ಚನೆಯೇ ಬಾಹ್ಯಾರ್ಚನೆಯಾಗಿ ಶಿವನನ್ನು ಆಕೆ...

ದೇವಾ ಎನ್ನ ಹೃದಯ ಕಮಲದೊಳಗೆ ಪ್ರಜ್ವಲಿಪ್ಪ ಬೆಳಗೆ
ದೇವಾ ಎನ್ನ ಮನದ ಮನೆಯೊಳಪ್ಪು ತಿರ್ಪ ಬೆಳಗಿನೊಳಗೆ

ಗುರುವೇ ಬಾರಾ ಪರವೆ ಬಾರಾ ವರವೆ ಬಾರಾ ದೇವ ದೇವಾ

ಹರನೆ ಬಾರಾ ಸ್ವಕೃತ ಸಾರಾ ಸರ್ವ ಬಾರಾ ಬಾರ ದೇವ

..............................................................................

ಬಾರ ಸಿದ್ದ ಭವ ವಿರುದ್ಧ ಸುತ ಸಿದ್ಧ ಮಲ್ಲಿನಾಥ

ಬಾರಾ ಮುಡುಹು ಮುಂದಲೆಗಳ ಕುರುಳ ನೀವೆ ಮಲ್ಲಿನಾಥ"[೧೬೦]

ಎಂದು ಆರ್ದ್ರ ಹೃದಯದಿಂದ ಬಗೆಬಗೆಯಾಗಿ ತನ್ನ ಪ್ರಾಣ, ಗತಿ, ಮತಿ, ಪತಿ ಎಲ್ಲವೂ ಆದ ಮಲ್ಲಿಕಾರ್ಜುನನ್ನು ಕರೆಯುವಳು, ಅವಳ ಮೊರೆ ಎಷ್ಟು ತೀವ್ರವಾದುದೆಂದರೆ ಅದನ್ನು ಬೇರೆ ಯಾವ ರೀತಿಯಲ್ಲೂ ತರಲಾಗದು, ಆ ವೈಭವದ ಪೂಜೆಯನ್ನು ಓದುತ್ತಿದ್ದಂತೆ ಆ ಶಕ್ತಿ ನಮ್ಮನ್ನು ಪರವಶವಾಗಿಸುತ್ತದೆ. ಅನುಪಮವಾದ ಭಕ್ತಿಯಲ್ಲಿ ವಿರಕ್ತೆಯಾದ ಮಹಾದೇವಿ ನೆಲೆಗೊಂಡು, ಮೈಯಲ್ಲೆಲ್ಲಾ ಪುಳಕ ತುಂಬಲು ಮಲ್ಲಿನಾಥನನ್ನು ನೋಡಿ

ದೇವಾ ಭವನೆ ಭವಿಯ ಸಂಗವೆಂದು ಮಣ್ಬುದೆನ್ನ ತಂದೆ

ದೇವ ಬೆರಡೆಯಿಲ್ಲ ದಚ್ಚ ಭಕುತಿ ಸುಖವೆಂದು ತಂದೆ

ಪೂಜೆಯೊಳಗೆ ಮೆಚ್ಚಿ ಬೆಚ್ಚಿ ಮನವನೆಂದು ತೆಗೆವನಯ್ಯ

ಪೂಜೆಯೊಳಗೆ ನಟ್ಟ ದಿಟ್ಟಗಳನದೆಂತು ಕೀಳ್ವೆನಯ್ಯ"[೧೬೧]

ಎಂದು ಹಾಡುತ್ತಾಳೆ. ಈ ಹಾಡು ಅವಳ ಅಂತರಂಗದ ಮೊರೆಯಂತಿದೆ. ಚೆನ್ನಮಲ್ಲಿಕಾರ್ಜುನನಲ್ಲಿ ಅವಳ ಮನ ಬೆಸಗೊಂಡಿರುವುದು ಇಲ್ಲಿ ಕಂಡುಬರುತ್ತದೆ. ಭಕ್ತಿ ಹೇಗೆ ಅವಳಲ್ಲಿ ತುಂಬಿಕೊಂಡಿದೆಯೋ ಹಾಗೆಯೇ ಸಹಿಸುವ ಹಾಗೂ ಸಿಡಿಯುವ ಗುಣಗಳೂ ಇವೆ. ಅವಳ ಸಮಯ ಪ್ರಜ್ಞೆ ಅಪೂರ್ಣವಾದುದು. ಮಹಾದೇವಿಯಕ್ಕನನ್ನು ಕೌಶಿಕನೊಡನೆ ಮದುವೆಯಾಗುವಂತೆ ಕೌಶಿಕನ ಮಂತ್ರಿಗಳು ಕೇಳಲು ಬಂದಾಗ, ಆಕೆ ಸಹಜವಾಗಿ ಕೌಶಿಕನನ್ನು ನಿರಾಕರಿಸುತ್ತಾಳೆ. ಭವಿಯ ಸಂಗವನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದಾಗ, ಕೌಶಿಕ ಅನ್ಯ ಮಾರ್ಗವಿಲ್ಲದೆ ಬಲವಂತದಿಂದಲಾದರೂ ಅವಳನ್ನು ತರುವಂತೆ ಮಂತ್ರಿಗಳಿಗೆ ಸೂಚಿಸುತ್ತಾನೆ. ಅದರಂತೆ ಮಂತ್ರಿಗಳು

ಮಹಾದೇವಿಯಕ್ಕನ ತಂದೆ, ತಾಯಿಯರನ್ನು ಕರೆಸಿ, ಕೌಶಿಕನನ್ನು ಮಹಾದೇವಿ ಮದುವೆಯಾಗದಿದ್ದರೆ ಮುಂದಾಗುವ ಅನಾಹುತಗಳ ಬಗೆಗೆ ತಿಳಿಸುತ್ತಾರೆ. ಆಗ ಮಹಾದೇವಿಯಕ್ಕನ ತಂದೆ, ತಾಯಿಯರು ಒಂದೆಡೆ ಪ್ರೀತಿಯ ಮಗಳ ಛಲ, ಇನ್ನೊಂದೆಡೆ ಅರಸನ ಬೆದರಿಕೆ. ಮುಂದೆ ಏನಾಗುತ್ತದೆಯೋ ಎಂಬ ಭಯದ ನೆರಳಲ್ಲಿ ಸಿಕ್ಕಿ ನಲುಗುತ್ತಾರೆ. ಹೇಳಿಕೊಳ್ಳಲಾಗದೆ ಸಂಕಟಪಡುತ್ತಾರೆ. ಕೊನೆಗೆ ಮಹಾದೇವಿಯನ್ನೇ ಕಂಡು ಕೌಶಿಕನನ್ನು ಮದುವೆಯಾಗುವಂತೆ ಕೇಳಿಕೊಳ್ಳುತ್ತಾರೆ.

ಇಂಥ ಸನ್ನಿವೇಶದಲ್ಲಿ ಮಹಾದೇವಿ ಮರುಗುವ ಗುಣ ಮೆಚ್ಚುವಂತಹದ್ದು, ಆಕೆ ತಂದೆ, ತಾಯಿಯರಿಗೆ ತನ್ನಿಂದಾಗಿ ಒದಗಲಿರುವ ಸಂಕಟಕ್ಕೆ ಮರುಗುತ್ತಾಳೆ. ಅವರಿಗಾಗಿ ತನಗಾಗಲಿರುವ ಹಿಂಸೆಯನ್ನೆಲ್ಲ ಸಹಿಸಿಕೊಳ್ಳಲು ಸಿದ್ಧವಾಗುತ್ತಾಳೆ. ಮನಸ್ಸಿಲ್ಲದ ಮನಸ್ಸಿನಲ್ಲಿ ಮೂರು ಷರತ್ತುಗಳೊಡನೆ ಕೌಶಿಕನನ್ನು ಮದುವೆಯಾಗಲು ಒಪ್ಪುತ್ತಾಳೆ. ಮಹಾದೇವಿಯ ಈ ಸಮಯ ಪ್ರಜ್ಞೆ ಮುಂದಾಗುವ ಎಲ್ಲ ದುರಂತಗಳನ್ನು ಉಪಶಮನ ಗೊಳಿಸುತ್ತದೆ. ಇಲ್ಲದಿದ್ದಲ್ಲಿ ಕಾಮಾಂಧ ಕೌಶಿಕನಿಂದ ಮಹಾದೇವಿಯಕ್ಕನನ್ನು ಬಲತ್ಕಾರದಿಂದ ಕೊಂಡೊಯ್ಯುವುದಾಗಲಿ, ಅವಳೆದುರಿಗೆ ಅವಳ ತಂದೆ ತಾಯಿಯರನ್ನು ಹಿಂಸಿಸುವ ಸಾಧ್ಯತೆಗಳನ್ನಾಗಲೀ ತಳ್ಳಿ ಹಾಕುವಂತಿರಲಿಲ್ಲ. ಮದುವೆಯೆಲ್ಲಾ ಮುಗಿದು ಸಾಧ್ಯತೆಗಳನ್ನಾಗಲಿ ತಳ್ಳಿಹಾಕುವಂತಿರಲಿಲ್ಲ. ಮದುವೆ ಮುಗಿದು ಮಹಾದೇವಿಯಕ್ಕ ಕೌಶಿಕನ ಅರಮನೆಗೆ ಬರುತ್ತಾಳೆ. ಷರತ್ತಿನಂತೆ ಅರಮನೆಯಲ್ಲಿ ತನ್ನ ನಿಷ್ಠೆ ನೇಮಗಳನ್ನು ಮುಂದುವರಿಸುತ್ತಾಳೆ. ಈ ಬಂಧನದಿಂದ ಬಿಡುಗಡೆ ಹೊಂದುವ ದಿನಗಳಿಗಾಗಿ ಕಾಯುತ್ತಾಳೆ. ಹಾಗಿರುವಾಗ ಕೌಶಿಕನಿಂದ ಮೂರು ಷರುತ್ತುಗಳು ಮುರಿದು ಬೀಳುತ್ತವೆ.

ಮೂರನೇ ಘಟನೆಯಲ್ಲಿ ಕೌಶಿಕ ಮಹಾದೇವಿಯ ಮೈಮುಚ್ಚಿಕೊಳ್ಳಲು ಎಳೆದು ಕೊಳ್ಳುತ್ತಿದ್ದ ದುಕೂಲಿವನ್ನು 'ತೆಗೆ ತೆಗೆ ನಿನಗೇನತ್ಯಂತ ಭಕ್ತೆಗೆ' ಎಂದು ಕಟಕಿಯಾಡಿ ಕಿತ್ತುಕೊಳ್ಳಲು ಹೋಗುತ್ತಾನೆ. ಆಗ ಮಹಾದೇವಿ ಆ ದುಕೂಲವನ್ನು ಅಲ್ಲಿಯೇ ಬಿಟ್ಟು ಕೇಶಾಂಬರೆಯಾಗಿ ಹೊರಗೆ ನಡೆಯುತ್ತಾಳೆ. ಇಲ್ಲಿಂದ ಮಹಾದೇವಿಯ ದಿಟ್ಟ ವ್ಯಕ್ತಿತ್ವದ ಬದುಕು ಆರಂಭವಾಗುತ್ತದೆ. ಮಹಾದೇವಿ ಅರಮನೆಯಿಂದ ಹೊರಡುವಾಗ, ಅವಳು ನಡೆದುಕೊಂಡ ರೀತಿ ಅವಳ ವ್ಯಕ್ತಿತ್ವಕ್ಕೆ ಕನ್ನಡಿಹಿಡಿದಂತಿದೆ. ಹೊರಡುವ ಆ ಸನ್ನಿವೇಶದಲ್ಲಿ ಅವಳು ಎಲ್ಲರನ್ನು ಪ್ರೀತಿಯಿಂದ ಕಾಣುತ್ತಾಳೆ. ತಂದೆ, ತಾಯಿಯರಿಗೆ ತಿಳಿಸಿ, ಗುರುಗಳ ಚರಣಕ್ಕೆ ಎರಗಿ, ಅವರ ಅನುಜ್ಞೆಯನ್ನು ಪಡೆದುಕೊಳ್ಳುತ್ತಾಳೆ. ಪುರದ ಜನರನ್ನು ಲೆಕ್ಕಿಸದೆ, ಭವದ ಆಸೆಯನ್ನು ಕಿತ್ತೆಸೆದು ಶಾಂತ ಮನಸ್ಕಳಾಗಿ ಹೊರಡುತ್ತಾಳೆ. ಎಲ್ಲರನ್ನು ಬಿಟ್ಟು ಹೋಗುತ್ತಿದ್ದೇನೆ ಎಂಬ ಬೇಸರವಾಗಲಿ, ಆತಂಕವಾಗಲಿ, ನೋವಾಗಲಿ, ಅವಳಲಿಲ್ಲ. ಚನ್ನಮಲ್ಲಿಕಾರ್ಜುನನಿಗಾಗಿ ಶ್ರೀಗಿರಿಯಲ್ಲಿ ಅವಳು,

ಇರುವಾಗ, ತಂದೆ-ತಾಯಿಯರು ಮತ್ತೆ ಮಹಾದೇವಿಯನ್ನು ಹುಡುಕಿಕೊಂಡು ಬರುತ್ತಾರೆ. ಇಲ್ಲಿಯವರೆಗೆ ಎಲ್ಲವನ್ನು ಸಹಿಸಿಕೊಂಡಿದ್ದ ಮಹಾದೇವಿ..

ಶಿವಭಕ್ತರಾಗಿಯುಂ ನೀವಿಂತು ನುಡಿವರೇ

ಭವಿಯ ಸಂಗಂ ತಪ್ಪಿ ಭವನ ಸಂಗವನಪ್ಪಿ

ಶಿವಭಕ್ತಿ ರಸಭರಿತ ಶರನಿಧಿಯ ನಡುವೊಪ್ಪಿ

ಇರ್ಪುದಂ ಕೆಡಿಸುವರ್ ಮಾತೆ ಪಿತರೆನಗಲ್ಲ"೧೨

ಎಂದು ತಂದೆ, ತಾಯಿಯರಿಗೆ ಈವರೆಗೂ (ಎದುರಾಡಿರುವುದಿಲ್ಲ) ಎದುರಾಡುತ್ತಾಳೆ. ಹಾಗೆಯೇ ಕಪಟ ವೇಷಧರಿಸಿ ಬಂದ ಕೌಶಿಕನಿಗೆ ನಿಂದಿಸಿ ಕಳುಹಿಸುತ್ತಾಳೆ. ಈವರೆಗೂ ಅಸಹಾಯಕತೆಯಿಂದ ಬಾಯಿಕಟ್ಟಿ ಕುಳಿತಿದ್ದ ಮಹಾದೇವಿ ಈಗ ನೇರವಾಗಿ ನುಡಿಯ ತೊಡಗಿದ್ದಾಳೆ. ಇದು ಆಕೆ ಅನೇಕ ದಿನಗಳಿಂದ ಹೊರಗೆಡಹಲಾಗದೆ ಅದುಮಿಟ್ಟುಕೊಂಡಿದ್ದ ಅವಳ ನೋವಿನ ಕತೆಯಾಗಿದೆ.

**ಅಕ್ಕಮಹಾದೇವಿ ರಗಳೆಯಲ್ಲಿ ಕೆಲವು ಸನ್ನಿವೇಶಗಳ ಬಗ್ಗೆ ಇಲ್ಲಿ ದಾಖಲಿಸಲಾಗಿದೆ.**

೧). ಮಹಾದೇವಿ ಮತ್ತು ಕೌಶಿಕರಿಬ್ಬರೂ ಸುರತ ಸುಖದೊಳಿರಬೇಕಾದರೆ ದೂರ ದೇಶದಿಂದ ಮಾಹೇಶ್ವರರು ಬಂದು, ತಾವು ಬಂದಿರುವುದಾಗಿ ಮಹಾದೇವಿಯಕ್ಕನಿಗೆ ತಿಳಿಸುವಂತೆ 'ಪಡಿಯರರಿಗೆ' ಹೇಳಿ ಕಳುಹಿಸುತ್ತಾರೆ. ಆಗ ಕೌಶಿಕನು ಬಂದು, ಒಂದು ದಿನವಾದರೂ ದೇವಿಯರು ಸುಖ ನಿದ್ರೆಯಲ್ಲಿರಲಿ ಹೋಗು ಹೋಗು ಎಂದು ಪಡಿಯರರನ್ನು ಘರ್ಜಿಸಿ ಕಳುಹಿಸುವ ಸನ್ನಿವೇಶ.

೨). ಒಮ್ಮೆ ಮಹಾದೇವಿ ಪೂಜಾ ನಿರತಳಾಗಿರುವಾಗ ಕಾಮಾಂಧನಾದ ಕೌಶಿಕ ಹಿಂದಿನಿಂದ ಬಂದು ಅವಳನ್ನು ಅಲಂಗಿಸುವ ಸನ್ನಿವೇಶ.

೩). ದೂಕೂಲವನ್ನು ತೆಗೆದುಕೊಳ್ಳಲು ಬಂದ ಮಹಾದೇವಿಯನ್ನು ಕೌಶಿಕ ಅತಿಭಕ್ತಿಗೆ ದುಕೂಲವೇಕೆ ? ಎಂದು ಜರೆಯುವ ಸನ್ನಿವೇಶ.

೪). ಶ್ರೀಗಿರಿಯ ಕಡೆಗೆ ಹೋದ ಮಹಾದೇವಿಯನ್ನು ಮತ್ತೆ ಒಲಿಸಿಕೊಳ್ಳಲು, ಕೌಶಿಕ ಕಪಟವೇಷ ಧರಿಸಿ ಮಹಾದೇವಿಯ ಬಳಿಗೆ ಬರುವ ಸನ್ನಿವೇಶ.

ಈ ನಾಲ್ಕು ಸನ್ನಿವೇಶಗಳ ಮೂಲಕ ಹರಿಹರ ಕೌಶಿಕನನ್ನು ವಿಷಯಲಂಪಟ, ಕಾಮಾಂಧ, ದುರ್ಗಣಿ, ಅಮಾನವೀಯ ವ್ಯಕ್ತಿ ಎಂಬ ಅರ್ಥದಲ್ಲಿ ಚಿತ್ರಿಸಿದ್ದಾನೆ.ಆದರೆ, ಕಾವ್ಯದೊಳಗೆ ಹರಿಹರನ ಈ ಉದ್ದೇಶ ಅಷ್ಟೊಂದು ಸಫಲವಾಗುವುದಿಲ್ಲ ಎಂದು ಕಾಣಿಸುತ್ತದೆ. ಏಕೆಂದರೆ ಅವನಲ್ಲಿ ಕೂಡ ಕೆಲವೊಂದು ಮಾನವೀಯ ಗುಣಗಳು ಕಂಡುಬರುತ್ತವೆ.

ಕೌಶಿಕ ಎಲ್ಲರಿಗೂ ಗೊತ್ತಿರುವಂತೆ ಆ ವಾತ್ಸಲ್ಯದ ಅರಸ ಕಾಲದ ಪರಿಮಿತಿಯಲ್ಲಿ ಹೇಳುವುದಾದರೆ, ಕೌಶಿಕ ಮಹಾದೇವಿಯಕ್ಕನ ವಿಚಾರದಲ್ಲಿ ಇನ್ನೂ ಕ್ರೂರವಾಗಿ ವರ್ತಿಸಬಹುದಿತ್ತು. ತಂದೆ–ತಾಯಿಯರ ಅನುಮತಿ ಇಲ್ಲದೆ ಅವಳನ್ನು ತನ್ನ ಅರಮನೆಯೊಳಕ್ಕೆ ತಂದುಕೊಳ್ಳಬಹುದಿತ್ತು. ಆದರೆ, ಕೌಶಿಕ ಅಂಥ ಮಾರ್ಗವನ್ನು ಹಿಡಿಯುವುದೇ ಇಲ್ಲ. ತನ್ನಿಂದ ಎಷ್ಟು ಸಾಧ್ಯವೋ ಅಷ್ಟೋ ಅವಳ ಮನಸ್ಸನ್ನು ಒಪ್ಪಿಸಲು ಪ್ರಯತ್ನಿಸುತ್ತಾನೆ. ಅಷ್ಟಾದರೂ ಅವನ ಉದ್ದೇಶವಾದರೂ ಏನು ? ಮಹಾದೇವಿಯನ್ನು ತನ್ನ ಭೋಗಲಾಲಸೆಗಾಗಿ ಬಳಸಿಕೊಳ್ಳುವುದಿಲ್ಲ. ಬದಲಾಗಿ ಅವಳನ್ನು ಮದುವೆಯಾಗಿ ಅವಳೊಡನೆ ಸುಖವಾಗಿ ಬಾಳುವುದು, ಇದು ಮಾನವ ಸಹಜ ಬಯಕೆ.

ಆದರೆ ಈ ಬಯಕೆಗೆ ಮಹಾದೇವಿ ಸರ್ವರೀತಿಯಿಂದಲೂ ಒಪ್ಪದೇ ಹೋದಾಗ ಸ್ವಲ್ಪ ಮಟ್ಟಿಗೆ ಅವಳನ್ನು ಬೆದರಿಸುವ ಪ್ರಯತ್ನ ಮಾಡುತ್ತಾನೆ. ಇದು ಅವನ ಅಸಹಾಯಕತೆಯಿಂದ ಆದ ಪ್ರಮಾದದಂತೆ ಕಾಣಿಸುತ್ತದೆಯೋ ಹೊರತು, ಕ್ರೂರತ್ವದಿಂದ ಆದ ಪ್ರಮಾದದಂತೆ ಕಾಣುವುದಿಲ್ಲ. ಒಮ್ಮೆ ಮಹಾದೇವಿಯನ್ನು ಹುಡುಕಿಕೊಂಡು ದೂರದೇಶದಿಂದ ಮಾಹೇಶ್ವರರು ಬರುತ್ತಾರೆ. ಅವರನ್ನು ಕಂಡ ಕೌಶಿಕ ಸಮಯವಿಲ್ಲ ಎಂದು ಹೇಳಿ ಕಳುಹಿಸಿ ಬಿಡುತ್ತಾನೆ. ಆಗ ಮಹಾದೇವಿ ಕೌಶಿಕನನ್ನು "ಪಚ್ಚಪಸಿಯ ಪಾತಕನೆ ನಿನ್ನ ಸಂಗದಿಂ ಭಕ್ತರನಿಂದೆಯಂ ಕೇಳ್ವಂತಾದುದು"[೧೬೩] ಎಂದು ನಿಂದಿಸುತ್ತಾಳೆ. ಆಗ ಕೌಶಿಕ ನಡೆದುಕೊಂಡ ರೀತಿಯಂತೂ ಮರುಕ ಹುಟ್ಟುತ್ತದೆ.

ಅವನ ಘನತೆಗೆ ವಿರುದ್ಧವಾಗಿ ಆತ ಮಹಾದೇವಿಯ ಕಾಲಿಗೆ ಬಿದ್ದು, ಆದ ಅಪರಾಧವನ್ನು ಮನ್ನಿಸುವಂತೆ ಬೇಡಿಕೊಳ್ಳುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಕೌಶಿಕನು ಶಿವನ ವೇಷಧರಿಸಿ ಶ್ರೀಗಿರಿಯ ಕಡೆಗೆ ಮಹಾದೇವಿಯನ್ನು ಹುಡುಕಿಕೊಂಡು ಹೋಗುತ್ತಾನೆ. ಅಲ್ಲಿ ಮಹಾದೇವಿಯನ್ನು ಕಂಡು "ಭಕ್ತನಾದೆಂ ಮಹಾದೇವಿ ಕರುಣಿಪುದೆನಗೆ/ ಭಕ್ತಿಯಿಲ್ಲದ ಕಿಂಕರಂಗೆ ಕರುಣಿಸುವೆನಗೆ/ ಸುಖದ ಸುಗ್ಗಿಯಸದಾವರವೆ ಕರುಣಿಪುದೆನಗೆ"[೧೬೪] ಎಂದು ಕಾಲು ಹಿಡಿದು ಬೇಡಿಕೊಳ್ಳುತ್ತಾನೆ.

ಆಗಲೂ ಮಹಾದೇವಿ ಕೌಶಿಕನನ್ನು ನಿಂದಿಸುತ್ತಾಳೆ. ಇಲ್ಲಿ ಹರಿಹರ ಹೇಳುವಂತೆ ಕೌಶಿಕ ದುಷ್ಟ ಮನದಿಂದ ವೇಷ ಬದಲಿಸಿ ಮಹಾದೇವಿಯಕ್ಕನ ಬಳಿ ಸುಳಿದಿದ್ದೇ ಆಗಿದ್ದರೆ ಅವಳು ನಿಂದಿಸಿ ಕ್ರೂರವಾಗಿ ವರ್ತಿಸಬೇಕಾಗಿತ್ತು. ಆದರೆ ಕೌಶಿಕ ಆ ಹಾದಿಯನ್ನು ಹಿಡಿಯುವುದಿಲ್ಲ. ಅದಕ್ಕೆ ಬದಲಾಗಿ ಕಲುಮಠದ ರಾಜಗುರುಗಳಿಗೆ ಹುಲುಮಠದ ಮುಖ್ಯರಿಗೆ ಲಂಚವನ್ನಿತ್ತು. ಒಪ್ಪಿಸುವ ಪ್ರಯತ್ನ ಮಾಡುತ್ತಾನೆ. ಕೌಶಿಕನ ಈ ವರ್ತನೆಯಲ್ಲಿ ಅಸಹ್ಯವಿದೆ.

ಆದರೆ, ಕ್ರೂರತ್ವವಿಲ್ಲ. ಅಂಥ ಕ್ರೂರತ್ವದಲ್ಲಿ ತನಗಾದ ನಿರಾಸೆಗೆ, ಅವಮಾನಕ್ಕೆ ಕುಲಮಠದ ರಾಜಗುರುಗಳು, ಹುಲುಮಠದ ಮುಖ್ಯರಿಗೆ ಬದಲಿಗೆ ದುರ್ಜನರನ್ನು ಕಟ್ಟಿಕೊಂಡು ಮಹಾದೇವಿಯನ್ನು ಬಲತ್ಕಾರದಿಂದ ತರಬಹುದಿತ್ತು. ಕಥೆಯ ಉದ್ದಕ್ಕೂ ಸಾಗುವ ಅವನ ವಿರಹಯಾತನೆ ಸಹೃದಯದ ಕನಿಕರಕ್ಕೆ ಪಾತ್ರವಾಗುತ್ತದೆ. ಕೌಶಿಕ ಮಹಾದೇವಿಯೊಡನೆ ಎಷ್ಟೋ ಭಾರಿ ಸಂಧಾನ ನಡೆಸಿದರೂ ಪ್ರತಿಫಲಸಿಗದೆ ಹತಾಶೆಗೊಳಗಾಗುವಂತ ಸನ್ನಿವೇಶವನ್ನು ಕಾವ್ಯದಲ್ಲಿ ನೋಡಬಹುದು. ಇಲ್ಲಿ ರಾಜಪ್ರಭುತ್ವ ಎಷ್ಟೆ ತಂತ್ರ, ಕುತಂತ್ರ ಬಳಸಿ ಪಡೆಯಲು ಯತ್ನಿಸಿದರೂ ಕೂಡ ಮಹಾದೇವಿ ಒಲಿಯುವುದಿಲ್ಲ. ಹೀಗಾಗಿ ಇವರಿಬ್ಬರ ನಡುವಿನ ಸಂಘರ್ಷ ಹೆಚ್ಚು ಉದ್ಭವವಾಗುವುದನ್ನು ಇಲ್ಲಿ ವಿಶ್ಲೇಷಿಸಿಸುವ ಪ್ರಯತ್ನ ಮಾಡಲಾಗಿದೆ.

## ಇರಿಭಕ್ತಯ್ಯ ಮತ್ತು ಪಗಲ್ಚೋಳರ ನಡುವೆ ಸಂಘರ್ಷ

ಚೋಳದೇಶದ ಕರವೂರ ಗ್ರಾಮದ ಅಪ್ಪಟ ಶಿವಭಕ್ತ ಇರಿಭಕ್ತಯ್ಯ. ಈತ 'ಶಿವನಿಂದೆಯನ್ನು ಕೇಳಲಾರೆ' ಎಂಬ ಕಟ್ಟುಗ್ರ ನೇಮವನ್ನು ಕೈಗೊಂಡ ವಿರಕ್ತ. ಭಕ್ತರಿಗೆ ವಜ್ರ ಕವಚವಾಗಿ, ಭಕ್ತರ ಆಳಾಗಿ, ಭಕ್ತರ ಕಿಂಕರನಾಗಿ ಸೇವೆ ಸಲ್ಲಿಸುತ್ತಿರುವ ಮಹಾನ್ ಶಿವಭಕ್ತ ಎಂದರೆ ತಪ್ಪಾಗಲಾರದು. ಭಕ್ತರಲ್ಲದ ಭವಿಗಳೊಡನೆ ಜಗಳಕ್ಕೆ ನಿಂತರೆ ಹೊಸೆದು ಹುಡಿಗಟ್ಟುವನು. ಇಷ್ಟಲ್ಲದೆ ಶಿವದೂಷಕರನ್ನು ಸಂಪೂರ್ಣ ನಾಶಮಾಡಬೇಕೆಂದು ಗುರಿಯಿಟ್ಟುಕೊಂಡವನು. ಈತ ಭವಿಗಳನ್ನು ಕೊಲ್ಲಲೆಂದೇ ಕೊಡಲಿಯೊಂಬ ಆಯುಧವನ್ನು ಇಟ್ಟುಕೊಂಡಿದ್ದ.

ದಕ್ಷಯಜ್ಞ ನಾಶಮಾಡಿದ ವೀರಭದ್ರನೇ ಇಂಥ ಹರಿತ ಕೊಡಲಿ ಮಾಡಿಕೊಟ್ಟನೇನೋ ಎಂಬಂತೆ ಹೊಳೆಹೊಳೆವ ಕೊಡಲಿಯನ್ನು ಅಲ್ಲಿ ಚಂದದಿಂದ ತೆಗೆದುಕೊಂಡು ಬಂದ ಶಿವನ ಮುಂದೆ ತಂದಿರಿಸಿ ಚಂದ್ರಧರನೆ ಕೇಳು, ಎಂದು ಹೇಳುತ್ತ ನೇಮವನ್ನು ಮಾಡಿ ಶಿವಪ್ರಸಾದ ಸೇವಿಸಿ ಪರಶುಧರನಾಗಿ ಮರಳುತ್ತಿದ್ದ. ಹಣೆಯ ಮೇಲೆ ವಿಭೂತಿಧರಿಸಿದವರು ಕಂಡರೆ ಹರುಷ ತಾಳುತ್ತಿದ್ದ. "ಶಿವಧಾ" ಎಂದು ಎಲ್ಲಿಯಾದರೂ ಶಬ್ದ ಕೇಳಿದರೆ ಇವನ ಕೊಡಲಿ ಕೈಗೆ ಬರುತಿತ್ತು.

ಎಲ್ಲಿಯಾದರೂ ಹರನಿಂದೆ ಗೈದಿದ್ದು ಕಂಡು ಬಂದರೆ ಹಿಂದುಮುಂದೆ ನೋಡದೆ ನಿಂದಕರನ್ನು ಕೊಲ್ಲುತ್ತಿದ್ದ ಹೀಗೆ ಕೊಲ್ಲುವ ಕೊಡಲಿಯಿಂದಾಗಿ ಆತ, ಹೆಸರಿಗೆ ತಕ್ಕಂತೆ ಇದ್ದನು.

ಒಮ್ಮೆ ಇರಿಭಕ್ತ ದಾರಿಯಲ್ಲಿ ಬರುವಾಗ ಎದುರಿಗೆ ಒಬ್ಬ ವೈಷ್ಣವ ಉದ್ದನಾಮ ಧರಿಸಿಕೊಂಡು ಬರುತ್ತಿದ್ದ. ಅವನನ್ನು ಕಂಡು ಉರಿಗೋಪದಿಂದ ಇರಿಭಕ್ತಯ್ಯ "ತೊಲಗು ತೊಲಗು ನಿನ್ನ ನಾಮದ ಬೊಟ್ಟನ್ನು ಒರೆಸಿಕೋ ನರಕಿ, ವಿಭೂತಿಯನ್ನು ಹಣೆಗೆ ಧರಿಸು, ಅನವರತ ನಿನಗೆ ಲೇಸು ಲೇಸಾಗುವುದು" ಎಂದು ಹೇಳಿ ಬಲವಂತ ಮಾಡಿದನು. ನಾನೇಕೆ ನೇಮವನ್ನು ಬರೆಯಿಸಿಕೊಳ್ಳಲಿ ? ಅದಾಗದು, ತೊಡೆಯಲಾರೆ ನಾನೊಲ್ಲೆ" ಎಂದುತ್ತರಿಸಿದನು. ಆಗ ಇರಿ ಭಕ್ತಯ್ಯ ಕೋಪದಿಂದ 'ಒಲ್ಲೆಯಾ, ಒಲ್ಲೆಯಾ, ಒಲ್ಲೆಯಾ ನೋರು" ಎಂದು ಕೊಡಲಿಯಿಂದ ತಲೆಗೆ ಬೀಸಿದಾಗ ಆತನ ತಲೆ ದುಟದುಟನೆ ಉರುಳಿತು. ಬೀದಿಯಲ್ಲಿ ನಡೆದ ಈ ಅನಾಹುತ ಅನೇಕ ಕಣ್ಣುಗಳಿಗೆ ಆಹಾರವಾಯಿತು. ನಾ ಕೂಡು ನೀ ಕೂಡೆಂದು ಜನವಲ್ಲಿ ನೆರೆಯಿತು. ತೀರಿಹೋದವನ ಕುಲಬಾಂಧವರು ಅಳುತ್ತಳುತ್ತ ನೆರೆದರು. ಆತನ ಸತಿಸುತರು ಶೋಕಸಾಗರದಲ್ಲಿ ಮುಳುಗಿದರು. ಕೂಡಿದ ಸಮೂಹ ಇರಿಭಕ್ತಯ್ಯನಿಗೆ ಅಡ್ಡಲಾಗಿ "ನಡೆನಡೆ ಚೋಳರಾಜನಲ್ಲಿಗೆ" ಎಂದು ದುಂಬಾಲು ಬಿದ್ದು, ಅವನನ್ನೊಡಗೊಂಡು ಮುನ್ನಡೆದರೆ ಹಿಂದಿನಿಂದ ಸತ್ತವನ ಶಿರವನ್ನು ಮತ್ತು ಉಳಿದ ಶರೀರವನ್ನು ಹೊತ್ತುಕೊಂಡು ಉಮ್ಮಳದಿಂದ ಜನ ಸಾಗಿದರು.

ಚೋಳ ಮಹಾರಾಜನ ಸಭಾಮಂದಿರದ ಮುಂದೆ ರುಂಡ-ಮುಂಡವನ್ನಿಳಿಸಿ ಸಭಾಭವನವನ್ನು ಹೊಕ್ಕು, ಅರಸನಿಗೆ ಮೊರೆಯಿಟ್ಟರು, ಅರಸು ಹೊರ ಬಂದು "ಏನಿದೇನಿದು ಅವಾಂತರ" ಎಂದು ಕೇಳಿದನು. ಆಗ ನೆರವಿ ನೋಡಿ ಈ ಕುಡುಗೋಲೆಯನ್ನು ಜನ ನೋಡುತ್ತಿರುವಂತೆ ಕೊಡಲಿಯಿಂದಿರಿದು ತಲೆಯುರುಳಿಸಿದ ಈ ಪುಣ್ಯಾತ್ಮ. ದೇವಾ ಈ ಕಡು ಮೂರ್ಖ ಮಾಡಿದ ಅವಾಂತರವಿದು, ನಿರಪರಾಧಿಯನ್ನು ಹೀಗೆ ಕೊಂದವರುಂಟೆ ? ಸತ್ತವನನ್ನು ಮರಳಿ ಪಡೆಯಬಹುದೆ ? ನೋಡಿ ಇಲ್ಲಿ ಶಿರವಿದೆ: ಶರೀರವಿರದೆ" ಎಂದು ಕೋಪೋದ್ರಿಕ್ತರಾಗಿ ನುಡಿದರು. ಚೋಳರಾಜ ಪ್ರಜೆಗಳ ಪ್ರಭುವಾಗಿರುವುದರಿಂದ ಅರಸು ವೃತ್ತಿಗೆ ಪ್ರಾಧಾನ್ಯತೆ ನೀಡಿ ವಿಚಾರಿಸುತ್ತಾನೆ. " ಎಲೆಭಕ್ತ ಕೋಪಾವೇಶದಲ್ಲಿ ನೀನು ಹೀಗೆ ಮಾಡುವುದೆ ? ಆತನ ತಪ್ಪಾದರೂ ಏನು ? ಹೇಳಿ ಎಂದು ಇರಿಭಕ್ತಯ್ಯನನ್ನು ಕೇಳಿದನು. (ಬಸವಣ್ಣ ಭಕ್ತರಿಗೆ ಧನಕನಕಾದಿಗಳನ್ನು ಹಂಚಿ ಬೊಕ್ಕಸ ಕಾಲಿಮಾಡುತ್ತಿದ್ದನೆ; ಎಂದು ಬಿಜ್ಜಳನಿಗೆ ಬ್ರಾಹ್ಮಣರು ದೂರಿದಾಗ ಬಸವಣ್ಣ ವಿಚಾರಣೆ ಗೊಳಪಡಿಸಿದಾಗ ಪ್ರತ್ಯುತ್ತರ ನೀಡಿದಂತೆ) 'ಹೇ ಚೋಳರಾಜ, ನಿನಗೆ ಮಿತಿ ಇಲ್ಲ. ನಿನಗೆ ಶಿವಭಕ್ತಿಯೂ ಯುಕ್ತಿಯೂ ತಿಳಿದಿಲ್ಲ. ನೋಡಲ್ಲಿ ಅವನ ಹಣೆ ಮೇಲಿನ ಹೊಲೆಬಟ್ಟನ್ನು.

ನನಗದು ನೋಡಲಾಗುವುದಿಲ್ಲ. ಅದು ನನ್ನ ನೇಮ. ಅದೇ ಅವನ ತಪ್ಪು. ಭಸ್ಮ ಧರಿಸಲೆಂದೇ ಶಿವನು ಈ ಹಣೆಯನ್ನು ಮಾಡಿದ್ದು, ಭಕ್ತಿಯಿಂದ ಸ್ತುತಿಸಲೆಂದೇ ಶಿವನು ಈ ನಾಲಿಗೆ ಮಾಡಿದ್ದು, ಶಿವನರ್ಚಿಸಲೆಂದೇ ಈ ಕೈಗಳನ್ನು ಮಾಡಿದ್ದು, ಅಂತಹ ಶಿವನನ್ನು ನೋಡಲೆಂದೇ ಈ ಕಣ್ಣುಗಳನ್ನು ಮಾಡಿದ್ದು, ಹೀಗೆ ಅವಯವಗಳನ್ನು ನೀಡಿದ ಈಶ್ವರನನ್ನು ಅರಿಯದ ಶಿವದ್ರೋಹಿಗಳು ತಪ್ಪು ಮಾಡಿದಾಗ ಈ ನರಕಿಗಳನ್ನು ಸಹಿಸಲು ನನ್ನಿಂದ ಆಗುವುದಿಲ್ಲ. ಹೀಗಾಗಿ ಕೊಂದೆ ಎಂದು ಹೇಳುತ್ತಾನೆ. ಹೀಗೆ ವಿವರಿಸಿದ್ದನ್ನು ಕಂಡ ಚೋಳರಾಜ ಸಂಘರ್ಷವನ್ನು ಮುಂದುವರಿಸದೇ ಭಕ್ತನ ಕಾಲಿಗೆ ಶರಣಾಗುತ್ತಾನೆ. ನಂತರ ಸತ್ತವನ ಗತಿ ಏನು ? ಎಂದು ರಾಜ ಮರು ಪ್ರಶ್ನಿಸಿದಾಗ ಆತ ಮರಳಿ ಜೀವಂತನಾದರೆ ಇದಕ್ಕಿಂತ ಸೌಭಾಗ್ಯ ಇನ್ನೇನಿದೆ ? ಎಂದು ಕೇಳಿದನು.

ಇದಕ್ಕೆ ಅರಸು ಮತ್ತು ನೆರೆದಿದ್ದವರ ಎದುರು ಸತ್ತ ವೈಷ್ಣವನ ಶಿರ ಮತ್ತು ಶರೀರವಿದ್ದ ತಾವಿಗೆ ಬಂದು, ಅವೆರಡನ್ನು ಜೋಡಿಸಿ ಇರಿಭಕ್ತಯ್ಯ, ತನ್ನ ಬಾಮುಗೊಡಲಿಯನ್ನು ಆ ಶರೀರಕ್ಕೆ ಮುಟ್ಟಿಸಿದನು. ಕೊಡಲಿ ಸೋಂಕಿದ್ದೆ ತಡ ನಿದ್ರೆ ತಿಳಿದು ಎಚ್ಚರಾದ ಹಾಗೆ ಸತ್ತಿರುವ ಆ ವೈಷ್ಣವ ಎದ್ದು ಕುಳಿತನು. ಆಗ ಅವನಿಗೆ ಪ್ರೀತಿಯಿಂದ ವಿಭೂತಿ ಧಾರಣೆ ಮಾಡಲಾಯಿತು. ಆತನು ಶಿವಭಕ್ತನಾಗಿ ಪರಿವರ್ತನೆಯಾದನು. ಶಿವಭಕ್ತ ವರ್ಗ "ಸತ್ತವನನ್ನು ಎತ್ತಿದವನು" ಎಂದು ಒಲಿದು ನಲಿದಾಡಿ ಇರಿಭಕ್ತನನ್ನು ಕೊಂಡಾಡುತ್ತಿದ್ದರೆ, ಪರಸಮಯರ ವಾದಿಗಳು ಆ ಜಾಗದಿಂದ ಹೆದರಿ ಓಡಿದರು. ಆಗ ಚೋಳರಾಜ ಇರಿಭಕ್ತಯ್ಯನ ಮೇಲೆ ಸವಾರಿ ಮಾಡದೆ ಆತನ ಭಕ್ತಿಗೆ ಮೆಚ್ಚಿದನು. ಹೀಗೆ ಕೆಲವು ಸನ್ನಿವೇಶಗಳು ಈ ರಗಳೆಯಲ್ಲಿ ಬರುತ್ತಿದೆ. ವಿಶೇಷವೆಂದರೆ ಶಿವಭಕ್ತನನ್ನು ಕಂಡರೆ ಪಂಚಪ್ರಾಣ. ಇವನ ಭಕ್ತಿಯನ್ನು ಚಿದ್ರಗೊಳಿಸುವುದು ಹೇಗೆ ಎಂದು ಚಿಂತಿಸಲಾಗುತ್ತದೆ.

ಒಮ್ಮೆ ಶಿವಬ್ರಾಹ್ಮಣ ಇರಿಭಕ್ತನನ್ನು ಸಂಹರಿಸಲೆಂದೆ ಶಿವಭಕ್ತವೇಷ ಹಾಕಿಕೊಂಡು ಅದರೊಂದಿಗೆ ಯುದ್ಧ ಮಾಡುತ್ತಾನೆ. ಅವನನ್ನು ಕೊಲ್ಲಲು ಯತ್ನಿಸುತ್ತಾನೆ. ಆದರೂ ಈತನಿಗೆ ಒಳಗೆ ಕತ್ತಿಯು ಅಲಗು ಇರಿದು ಕೊಲೆ ಮಾಡಲು ಯತ್ನಿಸುತ್ತಿದ್ದರೆ, ತನಗೆ ಸಂತೋಷವಾಗುತ್ತದೆ ಎಂದು ಹೇಳುತ್ತಾನೆ. ಆಗ ಇವನ ಮಾತಿಗೆ ತಲೆದೂಗಿದ ಶಿವ ಪ್ರತ್ಯಕ್ಷನಾಗಿ ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಇದು ಕಥೆ. ಪ್ರಭುತ್ವ ಸಂಘರ್ಷಕ್ಕೆ ಇಚಿಥ ಅನೇಕ ರಗಳೆಗಳನ್ನು ಉದಾಹರಣೆಯಾಗಿ ಕೊಡಬಹುದು. ವರ್ಣ ವ್ಯವಸ್ಥೆಯ ಚೌಕಟ್ಟಿನಲ್ಲಿ 'ರಾಜಾ ಪ್ರತ್ಯಕ್ಷದೇವತಾ' ಎಂಬುದು ಗಟ್ಟಿಗೊಂಡ ಒಂದು ಮೌಲ್ಯ. ಬ್ರಾಹ್ಮಣೇತರರನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ಬ್ರಾಹ್ಮಣರು ತಾವು 'ಭೂಸುರರು' ಎಂದು ಸ್ಥಾಪಿಸಿಕೊಂಡುದು ಇನ್ನೊಂದು ಮೌಲ್ಯ. ಇವೆರಡನ್ನು ಪ್ರಬಲವಾಗಿ ಪ್ರತಿಭಟಿಸಿದ ವಿವರ ರಗಳೆಗಳಲ್ಲಿದೆ.

ಶಿವಭಕ್ತರು ಅರಸುತನವನ್ನು ಒಪ್ಪಿದ್ದರೂ ಪ್ರಜೆಗಿಂತ ಪ್ರಭುಮೇಲಲ್ಲ. ಶಿವಭಕ್ತರಿಗಿಂತ ಭೂಸುರರು ಮೇಲಲ್ಲವೆಂದು ಭಾವಿಸಿದ್ದರು. ಇದು ಹರಿಹರನ ನಿಲುವು. "ಹುಸಿಯು ಹೊಲೆಯನಲ್ಲಿ ಹುಟ್ಟಿ, ಮಾದಿಗನಲ್ಲಿ ಎರಡೆಲೆ, ಸಮಗಾರನಲ್ಲಿ ನಾಲ್ಕೆಲೆ, ಅಗಸನಲ್ಲಿ ಅರೆಲೆ, ವ್ಯವಹಾರಿಯಲ್ಲಿ ಎಂಟೆಲೆಯಾಗಿ, ಹಾದರಿಗನಲ್ಲಿ ಸಸಿಯಾಗಿ ಮದ್ಯಪಾನಿಯಲ್ಲಿ ಗಿಡವಾಗಿ ಜೂಜುಕೋರನಲ್ಲಿ ಮರವಾಗಿತ್ತು. ಡೊಂಬನಲ್ಲಿ ಹೂಬಿಟ್ಟು, ಅಕ್ಕಸಾಲಿಯಲ್ಲಿ ಕಾಯಾಗಿ ಸೂಳೆಯಲ್ಲಿ ಹಣ್ಣಾಗಿತ್ತು. ಇಂತಹ ಹುಸಿಯೆಂಬ ಹಣ್ಣು ಅರಸನಲ್ಲಿ ತೊಟ್ಟು ಬಿಟ್ಟು ಕಳಚಿಬಿತ್ತು. ಈ ಹುಸಿಯನ್ನು ಬಿಟ್ಟವರು ನಮ್ಮ ಶರಣರು ಎನ್ನುತ್ತದೆ. ಚನ್ನಬಸವಣ್ಣನ ವಚನ.

ಅರಸನ ವ್ಯಕ್ತಿತ್ವ ಹೊಲೆಯನಿಗಿಂತ ಎಷ್ಟು ಪಟ್ಟು ಅವನತಿಗಿಳಿದಿದೆ ಎಂಬುದನ್ನು ಇಲ್ಲಿ ಅವಲೋಕಿಸಬೇಕು. ರಗಳೆಗಳಲ್ಲಿ ಇಂತಹ ಭೌತಿಕವಾಗಿ ಅರಸನಿಗೆ ವೇಳವಾಳಿಯಾಗಿರುವ ಮತ್ತು ದೃಷ್ಟಿಯಾಗಿರುವ ವ್ರತಸ್ಥರು ಇರುತ್ತಿದ್ದರೆಂಬ ವಿವರ ಬಸವೇಶ್ವರ ರಗಳೆಯಲ್ಲಿ ಬಂದಿದೆ. ಇವೇ ವ್ರತಗಳು ಅರಸನಿಂದ ದೂರ ಸರಿದು ದೇವರಿಗೆ ಮೀಸಲಾಗುವ ವ್ರತಗಳಾಗಿದ್ದನ್ನು ರಗಳೆಯಲ್ಲಿ ಕಾಣುತ್ತೇವೆ. ಬಸವಣ್ಣ, ಮಹಾದೇವಿ, ತೆಲುಗು ಜೊಮ್ಮಯ್ಯಗಳು ಲಿಂಗಪ್ರಾಣಿ ಜಂಗಮ ಪ್ರಾಣಿಗಳಾಗಿದ್ದರೆಂಬ ವಿವರಗಳನ್ನು ಹರಿಹರ ನೀಡುತ್ತಾನೆ. ಒಮ್ಮೆ ಶರಣರ ಮುಂದೆ ಬಸವಣ್ಣ ಅರಸನನ್ನು ಕುರಿತು "ಮಣ್ಣ ರೂಪ ನೀನು ಕಪ್ಪಡದ ಹಾಗೆ ನೀನು, ಕಲ್ಲ ಜಂತ್ರ, ಹುಲ್ಲ ಗೊಂಬೆ ನೀನು" ಎಂದು ನಿಂದಿಸುತ್ತಾನೆ. ಕಾಕ ಭಾಜನವಾಗಿ ಹೋಗುವ ಭಂಡಾರವನ್ನು ನಿಜವಾದ ಜಂಗಮಂಗೆ ವಿನಿಯೋಗಿಸಿದ್ದ ಬಸವಣ್ಣ. ಈ ಬಗ್ಗೆ ವೈದಿಕರ ದೂರು, ಆಗ ಬಸವಣ್ಣ ಶಿವಭಕ್ತರು ತಮ್ಮ ಒಡೆವೆಯನ್ನು ತಾವೇ ಕೊಂಡರು.

ನಿನ್ನೊಡನೆ ಆಸೆ ಮಾಡುವರೆ ? ಅಂದರೆ ಪ್ರಜೆಗಳು ತಮ್ಮ ಸಂಪತ್ತನ್ನು ತಾವು ತೆಗೆದುಕೊಂಡಿದ್ದಾರೆ ಎಂದು ಅರಸನಿಗೆ ನುಡಿಯುತ್ತಾನೆ. ಇಂತಹ ಚಿಂತನೆಗಳು ಪದಾರ್ಥವಾಗಿ ಅರಸನನ್ನು ಅಪಮೌಲ್ಯಕ್ಕೀಡಾಗಿಸುವತ್ತ, ಕಾಯಕವೇ ಕೈಲಾಸವೆಂಬ ಸಿದ್ಧಾಂತವನ್ನು ದೃಢೀಕರಿಸುತ್ತ ಬೆರಳು ತೋರುತ್ತವೆ. ರಾಜಸೇವೆಗಿಂತ ಶರಣಸೇವೆ ಮುಗಿಲೆಂದು ಭಾವಿಸಿದ ಕೊಂಡಗುಳಿ ಕೇಶಿರಾಜ ಸಚಿವ ಪದವಿಯನ್ನು ಆಸ್ಥಾನದಲ್ಲಿ ನಿಂತ ಕಾಲ ಮೇಲೆಯೇ ನಿರಾಕರಿಸಿದುದು. ಅವನ ಸ್ವತಂತ್ರ ಮನೋಧರ್ಮಕ್ಕೆ ಸಾಕ್ಷಿಯಾಗಿದೆ. ಅರಸನಿಗಿಂತ ಪ್ರಜೆ. ಪ್ರಜೆಗಳಿಗಿಂತ ಭಕ್ತ. ಅರಸನೊಡನಾಟಕ್ಕಿಂತ ಶಿವಗೋಷ್ಠಿ ಮೇಲೆಂದು ಭಾವಿಸುವ ಬಸವ, ಕೇಶಿರಾಜರಿಗೆ ಅರಸನೊಂದು ತೃಣ ಸಮಾನ. ಬಾಹೂರ ಬೊಮ್ಮಯ್ಯ ಅರಸನ ಪಟ್ಟದ ಆನೆಯನ್ನು ಬೀದಿಯಲ್ಲಿ ಕೊಂದು ಹಾಕುತ್ತಾನೆ. ತೆಲುಗು ಜೊಮ್ಮಯ್ಯ ಶಿವನಿಂದಗೆ ಆಸ್ಪದ ಮಾಡಿದ ಪೆರ್ಮಾಡಿರಾಯನ ಪುರಾಣಿಕನನ್ನು ಅರಮನೆಯಲ್ಲಿಯೇ

ಕೊಲ್ಲುತ್ತಾನೆ. ಕೌಶಿಕರಾಜನಂತೂ ತನ್ನ ಬೆರಳಲ್ಲಿರುವ ಶಿವಪಾದ ಮುದ್ರಿಕೆಗೆ ಮಣಿಯುತ್ತಾನೆ. ಅರಸನಿಗೆ ಎಂದೂ ವಂದಿಸುವುದಿಲ್ಲ-ಕವಿ ಹರಿಹರನ ಈ ನಿರೂಪಣೆಗಳು ಅವನ ಪಾತ್ರಗಳ ಸ್ವತಂತ್ರ ಮನೋಧರ್ಮದ ಮಾದರಿಗಳಾಗಿವೆ. ಅಳುವ ಅರಸನಿಗೆ ತಲೆಬಾಗದೆ ಸ್ವಾತಂತ್ರ್ಯ ಮತ್ತು ಸ್ವಾಭಿಮಾನ ಮೆರೆಯುವ ಭಕ್ತರು ಇವನ ಕಾವ್ಯಗಳಲ್ಲಿ ಬರುತ್ತಾರೆ.

ಶಾಸನಗಳಲ್ಲಿ 'ಆಳುತ್ತಮಿರೆ' ಎಂಬ ಪದವಿದ್ದರೆ ಅರಸನು ಆಳುವುದು ಎಂದರ್ಥ. ಹರಿಹರ ಬಳಸುವ 'ಆಳ್ದನ್' ಪದವು 'ನಮ್ಮನ್ನಾಳುವ ಪರಮಾತ್ಮ' ಎಂಬರ್ಥ ಸೂಚಿಸುತ್ತದೆ. ಪರಮಾತ್ಮನೇ ಆಳ್ದ, ಅಧೀಶ್ವರರಾಯ, 'ಸಾರ್ವಭೌಮನೆನ್ನುತ್ತಾನೆ. ಹರಿಹರ ಈ ಚಕ್ರವರ್ತಿಗಳು ಕವಿಯ ಕಣ್ಣಲ್ಲಿ ಕೇವಲ ಕ್ಷುದ್ರಜಂತುಗಳು, ಅಂತರಂಗದಲ್ಲಿ ಈ ನಿಲುವಿದ್ದರೂ ವಾಸ್ತವದಲ್ಲಿ ಹರಿಹರ ಅರಸು ತನವನ್ನು, ಅವನ ಆಡಳಿತ ಪದ್ಧತಿಯನ್ನು ಬೇರೊಂದು ರೀತಿಯಲ್ಲಿ ಒಪ್ಪಿಕೊಳ್ಳುತ್ತಾನೆ. ಅದೂ ಅರಸು ಒಬ್ಬ ಆಳು. ಪರಮಾತ್ಮನು ಒಡೆಯ (ಆಳ್ದ) ಅರಸುತನವೆಂಬುದು ಆಳ್ದನಾಗಿರುವ ಹರನು ಪ್ರಜೆಗಳನ್ನು ಕಾಪಾಡಲು ಅರಸನಿಗೆ ನೀಡಿರುವ ವೃತ್ತಿ ಎಂಬ ಭೂಮಿಕೆಯಲ್ಲಿ. ಹೀಗಾಗಿ ರಗಳೆಗಳಲ್ಲಿ ಪ್ರಭು ವೃತ್ತಿ, ಮಾನ್ಯ ವೃತ್ತಿ, ಸೇವಕ ವೃತ್ತಿ, ಸಮಗ್ರ ಪ್ರಭುವೃತ್ತಿ ಎಂಬ ಪದಗಳು ಪದೇ ಪದೆ ಕೇಳಿ ಬರುತ್ತಿವೆ.

ಶಿವಭಕ್ತರ ಚರಿತ್ರೆಯೊಂದಿಗೆ ಹರಿಹರ ತೋರಿದ ಸೈದ್ಧಾಂತಿಕ ನಿಲುವು, ರಾಜಕೀಯ ಸಂಗತಿಗಳನ್ನು ಆರ್ಥಿಕ ವಿಚಾರಗಳನ್ನು ಅಲೋಚಿಸಬೇಕು. ಆಳು-ಆಳ್ದ, ಪ್ರಭುವರ್ಗ-ಭಕ್ತವರ್ಗ. ಬ್ರಾಹ್ಮಣ-ಲಿಂಗವಂತ, ಭಕ್ತ-ಭವಿ ಹೀಗೆ ಪಕ್ಷ ಪ್ರತಿಪಕ್ಷಗಳು ರಗಳೆಯುದ್ದಕ್ಕೂ ಹುಟ್ಟಿಕೊಂಡು ಅಂದಿನ ಜನ ಜೀವನವನ್ನು ಕಣ್ಮುಂದೆ ಕಟ್ಟುವಂತೆ ಮಾಡುತ್ತವೆ. ಶಿವಭಕ್ತಿ ಗೆಲ್ಲುವುದಕ್ಕಾಗಿ ಗುರಿ ಸಾಧನೆಗಾಗಿ ಜನೋದ್ದೇಶಗಳನ್ನಿಟ್ಟುಕೊಂಡು ಹರಿಹರನ ಪಾತ್ರಗಳು ಬೆಳೆಯುತ್ತವೆ. ಶಿವಭಕ್ತಿಯಾದಿಕ್ಯವನ್ನು ಸಾಧಿಸುತ್ತ ಹೋಗುತ್ತವೆ. ಆಗೆಲ್ಲ ರಗಳೆಗಳಲ್ಲಿ ತುಂಬ ಹೋರಾಟದ ಅಂಗಣಗಳು ಕಂಡು ಬರುತ್ತವೆ. ಹೀಗೆ ಸಂಘರ್ಷದ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

## ಅಡಿಟಿಪ್ಪಣಿ

೧. ಹಸನ್‌ನಯಿ ಸುರಕೋಡ, ಡಾ.ರಾಮಮನೋಹರ ಲೋಹಿಯಾ, ಸಂಪುಟ -೫ ಪುಟ - ೧

೨. ಚಿದಾನಂದಮೂರ್ತಿ ಎಂ., ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪುಟ - ೬೬

೩. ಮಹಾದೇವಯ್ಯ ಕೆ.ಪಿ., ಹರಿಹರನ ರಗಳೆಗಳಲ್ಲಿ ಸಾಹಿತ್ಯಕ ಅಧ್ಯಯನ, ಪುಟ-೨೫

೪. ಕಲಬುರ್ಗಿ ಎಂ.ಎಂ. (ಸಂ), ಹರಿಹರನ ರಗಳೆಗಳು, ಪುಟ-ಪೀಠಿಕೆ

೫. ಕಲಬುರ್ಗಿ ಎಂ.ಎಂ. (ಸಂ), ಪೂರ್ವೋಕ್ತ, ಪುಟ - ಪೀಠಿಕೆ

೬. ಹಿರೇಮಠ ಆರ್.ಸಿ., ಬಸವೇಶ್ವರ ದೇವರ ರಗಳೆ, ಪುಟ - ೭೬

೭. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ - ೭೫ - ೭೭

೮. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ - ೭೫

೯. ಕೆಂಭಾವಿ ಭೋಗಣ್ಣನ ರಗಳೆ, ಪುಟ - ೨೨೮

೧೦. ಸುಂಕಾಪುರ ಎಂ.ಎಸ್., ಮಹಾಕವಿ ಹಂಪೆ ಹರಿಹರ ದೇವರ ನೂತನ ರಗಳೆಗಳು, ಪುಟ - ೪೯

೧೧. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ - ೭೫

೧೨. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ - ೨೬

೧೩. ಕಲಬುರ್ಗಿ ಎಂ.ಎಂ., ಬಸವ ಮಾರ್ಗ ಸಂಪುಟ -೨, ಪುಟ - ೨೬

೧೪. ಮಾದರ ಚೆನ್ನಯ್ಯನ ರಗಳೆ, ಪುಟ - ೨೦೩

೧೫. ಚಿದಾನಂದಮೂರ್ತಿ ಎಂ., ಮ.ಕ.ಸಾ.ಅ., ಪುಟ - ೪೯

೧೬. ನಾರಾಯಣ ಪಿ.ವಿ., ವಚನ ಸಾಹಿತ್ಯ, - ಒಂದು ಸಾಂಸ್ಕೃತಿಕ ಅಧ್ಯಯನ ಪುಟ - ೭೪

೧೭. ಕೆಂಭಾವಿ ಭೋಗಣ್ಣನ ರಗಳೆ, ಪುಟ - ೨೨೬

೧೮. ಕೆಂಭಾವಿ ಭೋಗಣ್ಣನ ರಗಳೆ, ಪುಟ - ೨೨೮

೧೯. ಕೆಂಭಾವಿ ಭೋಗಣ್ಣನ ರಗಳೆ, ಪುಟ - ೨೨೭

೨೦. ಬಸವೇಶ್ವರ ದೇವರ ರಗಳೆ, ಪುಟ - ೭೬ - ೭೭

೨೧. ಬಸವೇಶ್ವರ ದೇವರ ರಗಳೆ, ಪುಟ - ೭೫

೨೨. ಕೆಂಭಾವಿ ಭೋಗಣ್ಣನ ರಗಳೆ, ಪುಟ - ೨೨೮

೨೩. ಹಾವಿನಾಳ ಕಲ್ಲಯ್ಯನ ರಗಳೆ, ಪುಟ - ೪೫೮-೪೫೯

೨೪. ಹಾವಿನಾಳ ಕಲ್ಲಯ್ಯನ ರಗಳೆ, ಪುಟ - ೪೫೯

೨೫. ಮಾದರ ಚೆನ್ನಯ್ಯ ರಗಳೆ, ಪುಟ - ೨೦೫

೨೬. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೨

೨೭. ಪ್ರಭುದೇವರ ರಗಳೆ, ಪುಟ - ೪, ಮಹಾದೇವಿಯ ರಗಳೆ, ಪುಟ - ೧೦೮

೨೮. ಸಂಸಾರ ನಿರಸನ ರಗಳೆ, ಪುಟ - ೨೬೨

೨೯. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೭

೩೦. ಮಹಾದೇವಿಯ ರಗಳೆ, ಪುಟ - ೧೦೮

೩೧. ಬಸವೇಶ್ವರ ದೇವರ ರಗಳೆ, ಪುಟ - ೭೭-೭೮

೩೨. ಪ್ರಭುದೇವರ ರಗಳೆ, ಪುಟ - ೫

೩೩. ಬಸವೇಶ್ವರ ದೇವರ ರಗಳೆ, ಪುಟ – ೭೭

೩೪. ಮಹಾದೇವಿ ರಗಳೆ, ಪುಟ – ೧೦೮

೩೫. ಮಹಾದೇವಿಯ ರಗಳೆ, ಪುಟ – ೧೦೮

೩೬. ಹಾವಿನಾಳ ಕಲ್ಲಯ್ಯನ ರಗಳೆ, ಪುಟ –೪೪೬

೩೭. ಬಸವೇಶ್ವರ ದೇವರ ರಗಳೆ, ಪುಟ – ೨೭

೩೮. ಶಂಕರ ದಾಸಿಮಯ್ಯನ ರಗಳೆ, ಪುಟ – ೨೬೯

೩೯. ರೇವಣ ಸಿದ್ದೇಶ್ವರನ ರಗಳೆ, ಪುಟ – ೧೭೪

೪೦. ಶಂಕರ ದಾಸಿಮಯ್ಯನ ರಗಳೆ, ಪುಟ – ೨೬೯

೪೧. ಬಸವೇಶ್ವರ ದೇವರ ರಗಳೆ, ಪುಟ – ೩೦

೪೨. ಬಸವೇಶ್ವರ ದೇವರ ರಗಳೆ, ಪುಟ – ೪೦– ೪೧

೪೩. ಶಂಕರದಾಸಿಮಯ್ಯನ ರಗಳೆ, ಪುಟ – ೨೬೯

೪೪. ರೇವಣ ಸಿದ್ದೇಶ್ವರನ ರಗಳೆ, ಪುಟ – ೧೭೪

೪೫. ಬಸವೇಶ್ವರ ದೇವರ ರಗಳೆ, ಪುಟ – ೫೬

೪೬. ವೈಜಕವ್ವೆ ರಗಳೆ, ಪುಟ – ೨೨೮

೪೭. ಮಹಾದೇವಿ ರಗಳೆ, ಪುಟ – ೧೧೭

೪೮. ಮಹಾದೇವಿ ರಗಳೆ, ಪುಟ – ೧೧೭

೪೯. ಪ್ರಭುದೇವರ ರಗಳೆ, ಪುಟ – ೮

೫೦. ಬಸವೇಶ್ವರ ರಗಳೆ, ಪುಟ – ೪೭

೫೧. ರೇವಣಸಿದ್ದೇಶ್ವರ ರಗಳೆ, ಪುಟ - ೧೬೮

೫೨. ಕೋವೂರ ಬೊಮ್ಮಿ ತಂದೆ ರಗಳೆ, ಪುಟ - ೩೬೦

೫೩. ಚಿದಾನಂದಮೂರ್ತಿ ಎಂ., ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ- ೪೧೪

೫೪. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೫

೫೫. ವೈಜಕವ್ವೆ ರಗಳೆ, ಪುಟ - ೨೨೯

೫೬. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೭

೫೭. ಮಹಾದೇವಿ ರಗಳೆ, ಪುಟ - ೧೨೪

೫೮. ಮಹಾದೇವಿ ರಗಳೆ, ಪುಟ - ೧೨೪

೫೯. ಬಸವೇಶ್ವರ ದೇವರ ರಗಳೆ, ಪುಟ - ೪೦-೪೧

೬೦. ಮಹಾದೇವಿ ರಗಳೆ, ಪುಟ - ೧೨೩-೧೨೪

೬೧. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೭

೬೨. ಮಹಾದೇವಿ ರಗಳೆ, ಪುಟ - ೧೨೮

೬೩. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೮

೬೪. ಬಸವೇಶ್ವರ ದೇವರ ರಗಳೆ, ಪುಟ - ೯೩

೬೫. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೮೦

೬೬. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೦

೬೭. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೧೦೯

೬೮. ಆದಯ್ಯನ ರಗಳೆ, ಪುಟ – ೩೨೧

೬೯. ಮಹಾದೇವಿ ರಗಳೆ, ಪುಟ – ೧೨೮

೭೦. ವೈಜಕವ್ವೆ ರಗಳೆ, ಪುಟ – ೨೨೯

೭೧. ಮಹಾದೇವಿ ರಗಳೆ, ಪುಟ – ೧೨೩

೭೨. ಹೇರೂರು ಹೆಣ್ಣಿನ ರಗಳೆ, ಪುಟ – ೨೮೧

೭೩. ಆದಯ್ಯನ ರಗಳೆ, ಪುಟ – ೩೨೧

೭೪. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ – ೧೧೨

೭೫. ಇಡೀ ನಿಂಬಿಯಕ್ಕನ ರಗಳೆ

೭೬. ನಿಂಬಿಯಕ್ಕನ ರಗಳೆಯ ಇಡೀ ಕಥೆ

೭೭. ನಿಂಬಿಯಕ್ಕನ ರಗಳೆಯ ಇಡೀ ಕಥೆ

೭೮. ಪ್ರಭುದೇವರ ರಗಳೆ, ಪುಟ – ೫

೭೯. ಮಹಾದೇವಿ ರಗಳೆ, ಪುಟ – ೧೦೮

೮೦. ಬಸವೇಶ್ವರ ದೇವರ ರಗಳೆ, ಪುಟ – ೭೭

೮೧. ನಿಂಬಿಯಕ್ಕನ ರಗಳೆ, ಪುಟ – ೯೦

೮೨. ಮಹಾದೇವಿಯ ರಗಳೆ, ಪುಟ – ೫

೮೩. ಹಾವಿನಾಳ ಕಲ್ಲಯ್ಯನ ರಗಳೆ, ಪುಟ – ೪೪೬

೮೪. ತೆಲುಗು ಜೊಮ್ಮಯ್ಯನ ರಗಳೆ, ಪುಟ – ೩೯೮

೮೫. ಬಸವೇಶ್ವರ ದೇವರ ರಗಳೆ, ಪುಟ – ೧೦೫

೮೬. ಬಸವೇಶ್ವರ ದೇವರ ರಗಳೆ, ಪುಟ – ೩೯

೮೭. ಮಾರುಡಿಗೆ ನಾಚಿ ತಂದೆ ರಗಳೆ, ಪುಟ – ೨೯೫–೨೯೬

೮೮. ಶಂಕರ ದಾಸಿಮಯ್ಯನ ರಗಳೆ, ಪುಟ ೨೪೩–೨೪೪

೮೯. ತೆಲುಗು ಜೊಮ್ಮಯ್ಯನ ರಗಳೆ, ಪುಟ – ೩೮೭

೯೦. ರಹಮತ್ ತರೀಕೆರೆ, ಧರ್ಮ ವಿಶ್ವಕೋಶ–೩, ಪುಟ – ೧೫೨

೯೧. ಕೋವೋರ ಬೊಮ್ಮಯ್ಯನ ರಗಳೆ, ಪುಟ – ೩೭೨

೯೨. ಕೇಶಿರಾಜ ದಣ್ಣಾಯಕರ ರಗಳೆ, ಪುಟ – ೧೭೩

೯೩. ಕೇಶಿರಾಜ ದಣ್ಣಾಯಕರ ರಗಳೆ, ಪುಟ – ೧೯೪

೯೪. ಕೇಶಿರಾಜ ದಣ್ಣಾಯಕರ ರಗಳೆ, ಪುಟ – ೭೨

೯೫. ಮಾರುಡಿಗೆ ನಾಚಿ ತಂದೆ ರಗಳೆ, ಪುಟ – ೨೯೨

೯೬. ಕೇಶಿರಾಜ ದಣ್ಣಾಯಕರ ರಗಳೆ, ಪುಟ – ೧೯೩

೯೭. ಪ್ರಭುದೇವರ ರಗಳೆ, ಪುಟ – ೧೪–೧೫

೯೮. ವೈಜಕವ್ವೆ ರಗಳೆ, ಪುಟ – ೨೩೭–೨೩೮

೯೯. ಶಂಕರ ದಾಸಿಮಯ್ಯನ ರಗಳೆ, ಪುಟ – ೨೪೩

೧೦೦. ಕೋವೋರ ಬೊಮ್ಮಿ ತಂದೆ ರಗಳೆ, ಪುಟ – ೩೭೮

೧೦೧. ಕಲಬುರ್ಗಿ ಎಂ.ಎಂ., ನಂದಿಮೊಗವಾಡ ಸಂಶೋಧನಾ ವ್ಯಾಸಂಗ, ಪುಟ – ೩

೧೦೨. ಶಂಕರ ದಾಸಿಮಯ್ಯನ ರಗಳೆ, ಪುಟ – ೨೪೮

೧೦೩. ಶಂಕರ ದಾಸಿಮಯ್ಯನ ರಗಳೆ, ಪುಟ – ೮೧

೧೦೪. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ-೨, ಪುಟ - ೩೫೭

೧೦೫. ಏಕಾಂತ ರಾಮಯ್ಯನ ರಗಳೆ, ಪುಟ - ೩೪೫

೧೦೬. ಬಸವೇಶ್ವರ ದೇವರ ರಗಳೆ, ಪುಟ - ೨೯-೩೦

೧೦೭. ಮಹಾದೇವಿ ರಗಳೆ, ಪುಟ ೧೦೯

೧೦೮. ಮಹಾದೇವಿ ರಗಳೆ, ಪುಟ - ೧೦೯

೧೦೯. ಪ್ರಭುದೇವರ ರಗಳೆ, ಪುಟ - ೧೫-೧೬

೧೧೦. ಮಹಾದೇವಿ ರಗಳೆ, ಪುಟ - ೧೦೯

೧೧೧. ಪ್ರಭುದೇವರ ರಗಳೆ, ಪುಟ - ೧೩-೧೪

೧೧೨. ಪ್ರಭುದೇವ ರಗಳೆ, ಪುಟ - ೧೩

೧೧೩. ಬಸವೇಶ್ವರ ದೇವರ ರಗಳೆ, ಪುಟ - ೪೦

೧೧೪. ನಾರಾಯಣ ಪಿ.ವಿ., ಪೂರ್ವೋಕ್ತ, ಪುಟ - ೪೦೨

೧೧೫. ಹಾವಿನಾಳ ಕಲ್ಲಯ್ಯನ ರಗಳೆ, ಪುಟ - ೪೫೨

೧೧೬. ಬಸವೇಶ್ವರ ದೇವರ ರಗಳೆ, ಪುಟ - ೪೧

೧೧೭. ಹಾವಿನಾಳ ಕಲ್ಲಯ್ಯನ ರಗಳೆ, ಪುಟ - ೪೫೪

೧೧೮. ಕೇಶಿರಾಜ ದಣ್ಣಾಯಕರ ರಗಳೆ, ಪುಟ - ೧೮೯

೧೧೯. ಮಹಾದೇವಿ ರಗಳೆ, ಪುಟ - ೧೦೭

೧೨೦. ಕೇಶಿರಾಜ ದಣ್ಣಾನಾಯಕ ರಗಳೆ, ಪುಟ - ೧೯೧

೧೨೧. ಬಸವೇಶ್ವರ ದೇವರ ರಗಳೆ, ಪುಟ - ೮೩

೧೨೨. ಕೇಶಿರಾಜ ದಣ್ಣಾಯಕರ ರಗಳೆ, ಪುಟ – ೧೯೧–೧೯೨

೧೨೩. ಬಸವೇಶ್ವರ ದೇವರ ರಗಳೆ, ಪುಟ – ೩೭

೧೨೪. ಬಸವೇಶ್ವರ ದೇವರ ರಗಳೆ, ಪುಟ – ೩೧

೧೨೫. ಬಸವೇಶ್ವರ ದೇವರ ರಗಳೆ, ಪುಟ – ೬೨–೬೩

೧೨೬. ಕೇಶಿರಾಜ ದಣ್ಣಾಯಕರ ರಗಳೆ, ಪುಟ – ೧೯೮

೧೨೭ ಮಹಾದೇವಿ ರಗಳೆ, ಪುಟ – ೧೨೦

೧೨೮. ಮಾರುಡಿಗೆ ನಾಚಯ್ಯನ ರಗಳೆ, ಪುಟ – ೨೯೪

೧೨೯. ತೆಲುಗು ಜೊಮ್ಮಯ್ಯನ ರಗಳೆ, ಪುಟ – ೩೯೬

೧೩೦. ಸುರಗಿ ಚೌಡಯ್ಯನ ರಗಳೆ, ಪುಟ – ೪೩೮

೧೩೧. ಕೇಶಿರಾಜ ದಣ್ಣಾಯಕರ ರಗಳೆ, ಪುಟ – ೧೯೭

೧೩೨. ಹಾವಿನಾಳ ಕಲ್ಲಯ್ಯನ ರಗಳೆ, ಪುಟ – ೪೬೦

೧೩೩. ಹಾವಿನಾಳ ಕಲ್ಲಯ್ಯನ ರಗಳೆ, ಪುಟ – ೪೫೧–೪೫೨

೧೩೪. ಏಕಾಂತ ರಾಮಯ್ಯನ ರಗಳೆ, ಪುಟ – ೩೪೭–೩೪೮

೧೩೫. ಕೋವೂರ ಬೊಮ್ಮಯ್ಯನ ರಗಳೆ, ಪುಟ – ೩೭೪

೧೩೬. ಕೋವೂರ ಬೊಮ್ಮಯ್ಯನ ರಗಳೆ, ಪುಟ – ೩೭೫

೧೩೭. ತೆಲುಗು ಜೊಮ್ಮಯ್ಯನ ರಗಳೆ, ಪುಟ – ೩೮೫–೩೫೬

೧೩೮. ತೆಲುಗು ಜೊಮ್ಮಯ್ಯನ ರಗಳೆ, ಪುಟ – ೩೮೨

೧೩೯. ಶಂಕರ ದಾಸಿಮಯ್ಯನ ರಗಳೆ, ಪುಟ – ೨೫೧

೧೪೦. ಶಿವರುದ್ರಪ್ಪ ಜಿ.ಎಸ್., ಕನ್ನಡ ಕವಿಗಳ ಕಾವ್ಯಕಲ್ಪನೆ, ಪುಟ – ೫೦

೧೪೧. ಅರವಿಂದ ಮಾಲಗತ್ತಿ, ಡಾ.ಅಂಬೇಡ್ಕರ್ ವಿಚಾರಧಾರೆ, ಪುಟ – ೩೦

೧೪೨. ಶೂದ್ರ ಶ್ರೀನಿವಾಸ್(ಸಂ), ಆಧುನಿಕ ಪ್ರಭುತ್ವದ ಸಂದರ್ಭದಲ್ಲಿ ಹಿಂಸೆ ಮತ್ತು ಅಹಿಂಸೆ, ಪುಟ – ೩೨

೧೪೩. ವಿಚಾರ ಸಾಹಿತ್ಯ ಭಾಗ–೨, ಬೆಂಗಳೂರು ವಿವಿ ಪುಟ – ೧೬

೧೪೪. ಬಸವರಾಜ ಕಲ್ಗುಡಿ, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಪುಟ–೨೩೮

೧೪೫. ಚಿದಾನಂದಮೂರ್ತಿ ಎಂ., ಹೊಸತು ಹೊಸತು, ಪುಟ – ೩೯೦

## ಅಧ್ಯಾಯ – ೫

# ಹರಿಹರನ ರಗಳೆಗಳಲ್ಲಿ ಸ್ತ್ರೀಪರ ಧೋರಣೆ, ಹೋರಾಟದ ಭೂಮಿಕೆಗಳು

ಹೆಣ್ಣಿಗೆ ಅತ್ಯಂತ ಗೌರವ ಸಂದಕಾಲ ಹನ್ನೆರಡನೆ ಶತಮಾನ: ಕರ್ನಾಟಕ ಶಿವಶರಣರಿಂದ ಹೆಣ್ಣು– ಹೆಣ್ಣಲ್ಲ, ಅದು ಮಾಯೆಯೂ ಅಲ್ಲ. ರಾಕ್ಷಸಿಯಂತೂ ಅಲ್ಲವೇ ಅಲ್ಲ. ಅದು ದೇವತೆ ಎಂದು ಶಿವಶರಣರು ಹೆಣ್ಣನ್ನು ಕಂಡ ದೃಷ್ಟಿಯಾಗಿದೆ."[೧] ಮೊಲೆ ಮೂಡಿಬಂದ ದೇಹ ಹೆಣ್ಣಿರಬಹುದು. ಗಡ್ಡ ಮೀಸೆ ಬಂದ ದೇಹ ಗಂಡಿರಬಹುದು.

ಆದರೆ, ಅವರಿಬ್ಬರ ನಡುವೆ ಸುಳಿವ ಆತ್ಮಕ್ಕೆ ಈ ಗಂಡು, ಹೆಣ್ಣು ಎಂಬ ಭೇದವಿಲ್ಲವೆಂದು ಸಾರಿ ಹೆಣ್ಣಿಗೂ ಧಾರ್ಮಿಕ ಸ್ವಾತಂತ್ರ್ಯ ಕೊಟ್ಟವರು ಶಿವಶರಣರು."[೨] ಪರಸತಿಯರನ್ನು ಸಾಕ್ಷಾತ್ ಮಹಾದೇವಿ ಎಂದು ಬಗೆದವರು ಶಿವಶರಣರು. ಬಗೆದುದಷ್ಟೇ ಅಲ್ಲ ಕೃತಿ ರೂಪದಲ್ಲಿ ತಂದು ಸ್ತ್ರೀಪುರುಷರಿಬ್ಬರೂ ಸಮಾಜದ ಏಳ್ಗೆಗೆ ಸಮಾನ ವ್ಯಕ್ತಿಗಳೆಂದು ಮನವರಿಕೆ ಕಂಡವರು. "ಇದು ಭಾರತದ ಇಷ್ಟೆ ಅಲ್ಲ, ಜಾಗತಿಕ ಇತಿಹಾಸದಲ್ಲಿಯೇ ಅಪೂರ್ವವಾದ ದರ್ಶನವೆಂದು ಹೇಳಬಹುದು"[೩] ಪುರುಷರಂತೆ ಸ್ತ್ರೀಗೂ ಈ ಆಧ್ಯಾತ್ಮ ಸಾಧನೆಯ ಅವಕಾಶ ಕಲ್ಪಿಸಿಕೊಟ್ಟು ಅವರನ್ನು ಕೈಹಿಡಿದು ನಡೆಸಿದ ಶ್ರೇಯಸ್ಸು ಶಿವಶರಣರಿಗೆ ಸಲ್ಲುತ್ತದೆ.

ಶರಣರ ಸಾಧನೆಯ ಇನ್ನೊಂದು ಮುಖ್ಯವಾದ ಅಂಶವೆಂದರೆ ಸ್ತ್ರೀಯರಿಗೂ ಆಧ್ಯಾತ್ಮಿಕ ರಂಗದಲ್ಲಿ ಸಮಾನ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದು. ಆ ಯುಗದಲ್ಲಿ ಸ್ತ್ರೀಯರು ಬಹುಮಟ್ಟಿಗೆ ಧರ್ಮಕ್ಕೆ ಅನಧಿಕಾರಿಗಳಾಗಿ ಪರಿಣಮಿಸಿದ್ದರು. ಮೈತ್ರೇಯಿ, ಗಾರ್ಗಿ, ಇವರ ಕಾಲ ಎಂದೋ

ಮುಗಿದು ಹೋಗಿ ಸ್ತ್ರೀಯರಿಗೂ, ಶೂದ್ರರಿಗೂ ವೇದವನ್ನು ಓದುವ ಹಕ್ಕಿಲ್ಲ ಎನ್ನುವ ಮಟ್ಟಕ್ಕೆ ಇಳಿದಿದ್ದ ಕಾಲವದು. ಆಗ ಶರಣರು ಆಧ್ಯಾತ್ಮಿಕ ರಂಗದಲ್ಲಿ ಸ್ತ್ರೀಪುರುಷರೆಂಬ ಭೇದವಿಲ್ಲ–ವೆಂಬುದನ್ನು ಸಾರಿ, ಧರ್ಮದಲ್ಲಿ ಅವರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿಕೊಟ್ಟರು.

ಅನೇಕ ಶರಣೆಯರು ಆಧ್ಯಾತ್ಮದಲ್ಲಿ ಅನುಪಮವಾದ ಸಾಧನೆ ಮಾಡಿರುವುದು ಕಂಡುಬರುತ್ತದೆ. ಅಕ್ಕಮಹಾದೇವಿಯಂತೂ ಅತ್ಯುಜ್ವಲವಾದ ಹೆಸರು – "ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಸಂಸಾರದಿಂದ ಸಿಡಿದೆದ್ದ ಮಹಾನ್ ಚೇತನವದು. ಇತರ ಅನೇಕ ಶರಣೆಯರು ಈ ಲೋಕದ ಗಂಡಂದಿರಿಗೆ ಸತಿಯರಾಗಿದ್ದುಕೊಂಡೆ ತಮ್ಮ ನಮ್ರ ಕಾಯಕದಲ್ಲಿ ಮಗ್ನರಾಗಿ ಆಧ್ಯಾತ್ಮಿಕ ಸಾಧನೆಯಲ್ಲಿ ಮುಂದುವರಿದಿರುವುದು ಕಾಣುತ್ತದೆ."[೪] ಅದರಲ್ಲಿ ಪ್ರಮುಖರಾದವರು ಮುಕ್ತಾಯಕ್ಕ, ನೀಲಮ್ಮ, ರಾಣಿ ಮಹಾದೇವಿಯಮ್ಮ, ಲಕ್ಕಮ್ಮ ಮೊದಲಾದವರೆಂದು ಹೇಳಬಹುದು. ಹೀಗೆ ಶರಣರ ಕಾಲದಲ್ಲಿ ಸ್ತ್ರೀಯರಿಗೆ ನೀಡಿದ ಧಾರ್ಮಿಕ ಸ್ವಾತಂತ್ರ್ಯವನ್ನು ಹರಿಹರ ಮುಂದುವರಿಸಿಕೊಂಡು ಹೋಗಿದ್ದಾನೆ ಎಂಬುದಕ್ಕೆ ಅವನ ರಗಳೆಗಳೇ ಸಾಕ್ಷಿಯಾಗಿದೆ. ಕರ್ನಾಟಕದ ಮಧ್ಯಕಾಲದ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಅಧ್ಯಾಯಕ್ಕೆ ಅಗತ್ಯಪುರಾವೆ ಒದಗಿಸುವುದು ರಗಳೆ ಕಾವ್ಯದಲ್ಲಿ ಸ್ತ್ರೀಯರಿಗೆ ನೀಡಿದ ಸ್ಥಾನ ಮಾನವೇ ನಿದರ್ಶನವಾಗಿದೆ. ಹೀಗಾಗಿ ಹರಿಹರನು ಸ್ತ್ರೀಪರ ಧೋರಣೆಯುಳ್ಳವನಾಗಿದ್ದನು ಎಂದು ಹೇಳಬಹುದು.

ಈ ಅಧ್ಯಾಯದಲ್ಲಿ ಹರಿಹರ ಕವಿ ಚಿತ್ರಿಸಿರುವ ಸ್ತ್ರೀಪಾತ್ರಗಳ ಆಧಾರದಿಂದ ವೀರಶೈವ ಧರ್ಮ ಹಾಗೂ ಕನ್ನಡ ನಾಡಿನಲ್ಲಿ ಸ್ತ್ರೀಯರನ್ನು ನೋಡಿಕೊಂಡ ಬಗೆಗಿನ ಸಾಮಾಜಿಕ ಸ್ಥಿತಿಯನ್ನು ಕುರಿತು ಚರ್ಚಿಸಲಾಗಿದೆ. ಅಲ್ಲದೆ ಈ ಸ್ತ್ರೀಪಾತ್ರಗಳನ್ನು ಬಣ್ಣಿಸುವಲ್ಲಿ ಕವಿ ತೋರಿದ ಕಾವ್ಯ ಸೌಂದರ್ಯ, ಸಾಹಿತ್ಯದ ಸೊಬಗು, ಸಂಸ್ಕೃತಿಯ ಮಾಧುರ್ಯಗಳನ್ನು ಅಲ್ಲಲ್ಲಿ ಎತ್ತಿ ತೋರಿಸಲಾಗಿದೆ. ಅಲ್ಲದೆ ಸಾಧ್ಯವಾದ ಕಡೆಗೆಲ್ಲ ಹರಿಶ್ವರ ಕವಿ ಚಿತ್ರಿಸಿದ ಪಾತ್ರಗಳೊಡನೆ ಭಾರತೀಯ ಇತರ ಕವಿಗಳು [ಸಂಸ್ಕೃತ ಮತ್ತು ಕನ್ನಡ] ಚಿತ್ರಿಸಿದ ಸ್ತ್ರೀಯನ್ನು ಹೋಲಿಸಲಾಗಿದೆ. ಅದರಿಂದ ಈ ಕವಿ ಚಿತ್ರಿಸಿದ ಮಹಿಳೆಯರ ವೈಶಿಷ್ಟ್ಯಗಳು ಗೊತ್ತಾಗುತ್ತವೆ.ಕಥೆ ಪೌರಾಣಿಕವೇ ಇರಲಿ, ಅದರ ಹಿಂದೆ ಸಾಮಾಜಿಕ ವಿಷಯವಿರುತ್ತದೆ. ಕವಿಯಾದವನು ಅದಕ್ಕೆ ಕಣ್ಣುಮುಚ್ಚಿಕೊಂಡಿರಲಾರನು. "ನಮ್ಮ ದೇಶದಲ್ಲಿ ಸ್ತ್ರೀಯರಿಗೆ ಆದರ್ಶವೆನಿಸಿದ ಸೀತೆ ಪ್ರಾತ: ಸ್ಮರಣೀಯಳು. ಆಕೆ ವಾಲ್ಮೀಕಿಯಿಂದ ಮೊದಲ್ಗೊಂಡು ಬಾಸ, ಕಾಳಿದಾಸ, ಭವಭೂತಿ ಮೊದಲಾದ ಉದ್ದಾಮ ಕವಿಗಳ ಪ್ರತಿಭಾ ಸೃಷ್ಟಿಯಲ್ಲಿ ಮೂರ್ತಗೊಂಡು ಆಯಾ ಕಾಲದ ಸ್ತ್ರೀಸ್ಥಾನಮಾನಗಳನ್ನು ಪ್ರತಿನಿಧಿಸುತ್ತಿದ್ದಾಳೆ.; ಅಂತೆಯೇ ಮಾತೆ –ಸೀತೆಯ ವಿಷಯದಲ್ಲಿ ಸಿಗುವಷ್ಟು ಚಿತ್ರಣಗಳು ಬೇರೊಬ್ಬರ ವಿಷಯದಲ್ಲಿ

ದೊರೆಯಲಾರವು ಎಂದು ಅನಿಸಿದೆ"[9]. ಆಕೆಯ ಕಷ್ಟ-ಸಹಿಷ್ಣುತೆ ಅವಳ ವಿಶಿಷ್ಟ ಗುಣವೆಂದೇ ಅವಳನ್ನು 'ಭೂಜಾತೆ' ಎಂದು ವಿದ್ವಾಂಸರು ಸಾಂಕೇತಿಕವಾಗಿ ಕರೆದಿದ್ದಾರೆ. ಸ್ತ್ರೀ ಕಷ್ಟವನ್ನನುಭವಿಸುವುದರಲ್ಲಿ ಅವಳ ಮಹತ್ವವಿದೆಯೇ ಹೊರತು, ಎದುರಿಸಿ ಪ್ರತಿಭಟಿಸುವುದರಲಿಲ್ಲ ಎಂಬ ಭಾವನೆ ಪ್ರಾಚೀನ ಭಾರತದಲ್ಲಿತ್ತು. ಸೀತೆ ಸಾಧ್ವಿಮಣಿಯಾಗಿ, ಪತಿವ್ರತ ಶಿರೋಮಣಿಯಾಗಿ ಬೆಳಗುವುದು. ಅವಳ ಕಷ್ಟ ಸಹಿಷ್ಣುತೆಯಿಂದಲೇ ಎಂದು ಹೇಳಬಹುದು.

"ಸೀತೆಯ ಕಷ್ಟ ಸಹನೆಗೆ ಪತಿಪ್ರೇಮದ ಪೂರ್ಣವಿಶ್ವಾಸ ಅಗತ್ಯ ಎಂಬುದೇ ಭವಭೂತಿಯ ಅಭಿಮತವಾಗಿದ್ದಿರಬಹುದು. ಇಂದಿನ ದೃಷ್ಟಿಯಿಂದ ನೋಡಿದರೆ. 'ಭವ ಭೂತಿ-ಹೆಣ್ಣಿನ ಆತ್ಮಗೌರವಕ್ಕೆ ಸಾಕಷ್ಟು ಬೆಲೆ ಕೊಡಲಿಲ್ಲ' ಎಂಬ ಅಭಿಪ್ರಾಯವು"[7]- ಸೀತೆಯ ಬಗೆಗೇ ಬಂದಿರುವಾಗ ಕನ್ನಡ ಕವಿ ಹರಿಹರ ಸಂಸ್ಕೃತ ಸಾಹಿತ್ಯದ ಸವಿ ಅನುಭವಿಸಿ ಬೆಳೆದು, ಶಿವಶರಣರ ಅನುಭವ ಸಾಹಿತ್ಯದ ರಸಪಾಕದಿಂದ ತಣಿದು, ಸೃಷ್ಟಿಸಿರುವ ಮಹಿಳೆಯರು ಆಧುನಿಕ ಬದುಕಿಗೆ ಪ್ರೋತ್ಸಾಹ ನೀಡಬಲ್ಲರೋ? ಹೇಗೆ ? ಎಂಬುದನ್ನು ವಿಚಾರಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ.

"ಸಾಹಿತ್ಯವು ಸಮಾಜದ ಕನ್ನಡಿಯಾಗಿರುವುದರಿಂದ ಹರಿಹರನ ಕಾಲದ ಸಮಾಜದ ಕನ್ನಡಿಯನ್ನು ಆತನ ಸ್ತ್ರೀ, ಪಾತ್ರಗಳಲ್ಲಿಯೂ ಕಾಣಬಹುದಾಗಿದೆ. ಆತನ ವೈಯಕ್ತಿಕ ಬದುಕು ಅವನ ಸ್ತ್ರೀಪಾತ್ರಗಳ ಮೇಲೆ ಪರಿಣಾಮ ಬೀರಿದೆಯೇ ಇಲ್ಲವೋ ಹೇಳಲು ಈ ಹಂತದಲ್ಲಿ ಸಾಧ್ಯವಿಲ್ಲದಿದ್ದರೂ ಹರಿಹರನ ಮೇಲೆ ಆತನ ಅಕ್ಕ ರುದ್ರಾಣಿಯು, ಬಸವಣ್ಣನ ಮೇಲೆ ಆತನ ಅಕ್ಕ ನಾಗಾಂಬೆ ಬೀರಿದ ಪ್ರಭಾವದಂತೆ ಮಹತ್ವದ ಪ್ರಭಾವ ಉಂಟುಮಾಡಿದ್ದಳು ಎಂದು ಅನಿಸುತ್ತಿದೆ. ಆದುದರಿಂದ ಹರಿಹರನ ವೈಯಕ್ತಿಕ ಬದುಕಿನ ಅನುಭವ, ಅವನು ಚಿತ್ರಿಸಿದ ನಾರಿಯರ ಮೇಲೂ ಆಗಿದೆ ಎಂಬುದು ನಿಜವಾದರೂ ಆ ಪ್ರಭಾವವು ಇಂತಹದೇ ಪಾತ್ರದ ಮೇಲೆ ಆಗಿದೆ ಎಂಬುದನ್ನು ಗುರುತಿಸುವುದು ಕಠಿಣವಾಗಿದೆ. ಆದರೆ, ಹರಿಹರ ಕವಿ ಚಿತ್ರಿಸಿದ ಸ್ತ್ರೀ ಇಲ್ಲವೇ ಪುರುಷರ ಪಾತ್ರಗಳಲ್ಲಿ 'ಹರಿಹರತ್ವ'ವನ್ನು ಉಳಿಸಿರುವುದು ಗೋಚರವಾಗುತ್ತದೆ."[೬]

ಹರಿಹರ ಚಿತ್ರಿಸಿದ ಸ್ತ್ರೀಯರಿಗೆ ಆ ಕಾಲದಲ್ಲಿ ಯಾರಾದರೂ ಅಂತಹ ಮಾದರಿ ದೊರೆತಿದ್ದರೇ ಎಂಬುದು ವಿಚಾರಿಸಬೇಕಾದ ಅಂಶ. ಹಾಗಿದ್ದರೆ ಅವರಾರು ? ಅವನ ಕಣ್ಮುಂದೆ ಇದ್ದರೇ ? ಅಥವಾ ಅವರೆಲ್ಲ ಕವಿಯ ಪ್ರತಿಭಾ ಸೃಷ್ಟಿಯಲ್ಲಿ ಮೂಡಿದವರೇ ಎಂಬುದನ್ನು ವಿಚಾರಿಸಬೇಕು. ಈ ಅಧ್ಯಾಯದಲ್ಲಿ ಕವಿ ಚಿತ್ರಿಸಿದ ಮಹಿಳೆಯರ ಬಗೆಗೆ ಅವರ ಅಂತರಂಗ, ಬಹಿರಂಗಗಳನ್ನು ತೆರೆದಿರಿಸಲು ಯತ್ನಿಸಲಾಗಿದೆ. ಕವಿಯ ಮನೋಭಾವವನ್ನು ಎತ್ತಿ ತೋರಿಸಲು ಪ್ರಯತ್ನ ಮಾಡಲಾಗಿದೆ.

"ಸಮಸ್ತ ಭಾರತದಲ್ಲಿ ಭಕ್ತಿಪಂಥದ ಚಳವಳಿಯು ಸಾಮಾನ್ಯ ಜನರ ಕೆಲಸವಾಗಿತ್ತು. ಅದು ವರ್ಗ ವರಿಷ್ಠರದ್ದಾಗಿರಲಿಲ್ಲ. ಇದರ ಮುಖಂಡರು ಸಂತರಾಗಿದ್ದರು; ಕವಿಗಳಾಗಿದ್ದರು. ಇವರು ಸಮಾಜದ ಅಪಗಣವರ್ಗಕ್ಕೆ ಸೇರಿದವರಾಗಿದ್ದರು. ದರ್ಜಿ, ಬಡಗಿ, ಕುಂಬಾರ, ತೋಟಗಾರ, ಕ್ಷೌರಿಕ ಹಾಗೂ ಅಂತ್ಯಜ ಇವರೇ ಬ್ರಾಹ್ಮಣರಿಗಿಂತ ಅಧಿಕವಾಗಿದ್ದರು. ಈ ಕಾಲದ ಸ್ಫುರಣ ಕಲೆ, ಧರ್ಮ ತನ್ನ ಪ್ರಭಾವ ಬೀರಿದೆಯಲ್ಲದೆ ಜನರಲ್ಲಿ ಆತ್ಮವಿಶ್ವಾಸ ಹುಟ್ಟಿಸಿದೆ"[೮] ಅಕ್ಕಮಹಾದೇವಿ, ಮೀರಾ, ಅಂಡಾಳ್ ಇವರು ಪ್ರಥಮತಃ ಭಕ್ತಿಪಂಥದವರಾಗಿದ್ದು, ಅವರ ಸಾಹಿತ್ಯದಲ್ಲಿ ಕಾಂತವೂ, ಮಧುರವೂ ಆದ ಭಾವನೆಗಳು ವ್ಯಕ್ತವಾಗಿವೆ. ಈ ಭಕ್ತಿಪಂಥವು ನಮ್ಮಲ್ಲಿ ವರ್ಣಾತೀತ, ಜಾತ್ಯತೀತ ಭಾವನೆಗಳನ್ನು ಜಾಗ್ರತಗೊಳಿಸುತ್ತದೆಯಲ್ಲದೆ ಪ್ರಾದೇಶಿಕ ಭಾಷೆಗಳ ಮೇಲೆ ಅಭಿಮಾನವನ್ನೂ ಹುಟ್ಟಿಸುತ್ತದೆ. ಸರ್ವಸಮಾನತಾ ಭಾವದ ಬೆಳವಣಿಗೆಗೆ ಭಕ್ತಿಪಂಥದ ಅಭ್ಯಾಸ ಅತ್ಯವಶ್ಯ. ಈ ಹಿನ್ನೆಲೆಯಲ್ಲಿ ಆಧುನಿಕ ಕರ್ನಾಟಕಕ್ಕೆ ಹರಿಹರ ಕವಿಯ ಅಧ್ಯಯನ ಅತ್ಯವಶ್ಯವೂ, ಉಪಯುಕ್ತವೂ ಎನ್ನುವುದರಲ್ಲಿ ಸಂದೇಹವಿಲ್ಲ.

ಹರಿಹರ ಕವಿ, ಮರ್ತ್ಯದ ಮಾಹಿತಿಯನ್ನು, ವ್ಯಕ್ತಿಗಳು ಇಲ್ಲಿ ಸಾಧಿಸಬೇಕಾದುದನ್ನು ಪಾತ್ರಗಳ ಮೂಲಕ ಎತ್ತಿ ತೋರಿಸಿದ್ದಾನೆ. ಅದೊಂದು ಆತ್ಮ ಸಂಸ್ಕಾರ ಕ್ಷೇತ್ರ ಅವನಿಗೆ ರಗಳೆಗಳಲ್ಲಿ ಅವನ ಪಾತ್ರಗಳು ಭೋಗದಿಂದ ಯೋಗ, ವೃತ್ತಿಯನ್ನು ಯೋಗಕ್ಕೆ ಪರಿವರ್ತಿಸಿಕೊಂಡದ್ದನ್ನು ವರ್ಣಿಸಿದ್ದಾನೆ. "ಹರಿಹರನಿಗೆ ಭಕ್ತಿಗಿಂತ ಮಿಗಿಲಾದ ಮೌಲ್ಯವಿಲ್ಲ ಭಕ್ತನೇ ಚಕ್ರವರ್ತಿ. ಅದು ಲೋಕದಲ್ಲಿ ಏನೆಲ್ಲವನ್ನೂ ಒಂದಗಿಸುವಂತಹದು. ಭಕ್ತರು ಸಾಮಾನ್ಯರಲ್ಲ ಅವರನ್ನು ಅರಿಯಲು ಕಣ್ಣುಬೇಕು; ಭಕ್ತಿಬೇಕು. ಅದಿಲ್ಲದೆ ನೋಡುವುದು ಕುರಡನು ಸೌಂದರ್ಯದ ವಸ್ತುವೊಂದನ್ನು ಕಂಡಂತೆ ಈ ಮಾತು ಸ್ತ್ರೀ ಪುರುಷರಿಬ್ಬರಿಗೂ ಅನ್ವಯಿಸುತ್ತದೆ. ಶಿವನ ಅನುಗ್ರಹ ಸಂಪಾದಿಸಿದವನಿಗೆ ಕುಲ, ಜಾತಿ, ವರ್ಗ, ವರ್ಣ, ಯಾವ ಲೆಕ್ಕ ? ದಲಿತ ವರ್ಗದವರನ್ನೂ, ಸ್ತ್ರೀಯರನ್ನು (ಸಾಕಷ್ಟು ಸಂಖ್ಯೆಯಲ್ಲಿ) ಕಾವ್ಯದ ನಾಯಕರನ್ನು ಮಾಡಿಕೊಂಡು ಅವರ ಚರಿತ್ರೆ ಮುಂದಿನ ಪೀಳಿಗೆಗೆ ಅನುಕರಣೀಯ ಎಂಬ ಮೇಲ್ಪಂಕ್ತಿ ಹಾಕಿ ಕೊಟ್ಟ ಕವಿ ಈತ."[೯]

ಈ ಮೊದಲು ಕನ್ನಡದಲ್ಲಂತೂ ಸ್ತ್ರೀಯನ್ನೇ ಕಾವ್ಯದ ವಸ್ತುವನ್ನಾಗಿರಿಸಿಕೊಂಡು ಯಾರೂ ಕಾವ್ಯ ಬರೆದಿರಲಿಲ್ಲ. ಸಂಸ್ಕೃತದಲ್ಲಿ 'ವಾಸವದತ್ತ' 'ಕಾದಂಬರಿ' "ರತ್ನಾವಳೀ"ಯಂತಹ ಕೃತಿಗಳು ವಿರಳವಾಗಿ ದೊರೆಯುತ್ತವೆ.; ಕನ್ನಡದಲ್ಲಿ 'ಲೀಲಾವತಿ' ಹರಿಹರನ ತರುವಾಯ ಬಂದಿದೆ. ಸ್ತ್ರೀಯರೂ ದಲಿತ ವರ್ಗಕ್ಕೆ ಸೇರಿದವರೆಂಬ ಭಾವನೆಯನ್ನು ತೊಲಗಿಸಿದ ಕೀರ್ತಿ ಹರಿಹರನದು. ಹರಿಹರನ ಸ್ತ್ರೀಯರು ಎಲ್ಲರಂತೆ ಹುಟ್ಟಿ, ಕಷ್ಟಪಟ್ಟು, ತಾವು ತಾಪತ್ರಯಕ್ಕೊಳಗಾಗಿ ಸತ್ತವರಲ್ಲ. ಗುರುಭಕ್ತಿ,

ಲಿಂಗಭಕ್ತಿ, ಜಂಗಮ ಭಕ್ತಿಗಳಿಂದ ಕರ್ಮವನ್ನು, ಕಾಲವನ್ನು ಗೆದ್ದು, ಸಾಯುಜ್ಯ, ಸಾರೂಪ್ಯಗಳನ್ನು ಪಡೆದವರು, ಅವರು ತಾಕಿಕವಾಗಿ ಜನಿಸಿದ್ದರೂ ಲೋಕದ ಸಂಕಷ್ಟಗಳನ್ನು ಗೆದ್ದು, ಮೇಲೆ ಬಂದವರು, ಅವರ ವೇದನೆ–ಸಂವೇದನೆಗಳೇನಿದ್ದರೂ ಶಿವಭಕ್ತಿಗೆ ಸೀಮಿತ. ಅವರು ಲೋಕದ ಕಣ್ಣಿಗೆ ಅಪೂರ್ವ ಎನಿಸುತ್ತಾರೆ. ಅವರ ನಡತೆಯು ಎಷ್ಟೋ ಬಾರಿ ಪ್ರಶ್ನಾರ್ಹವೆನಿಸುತ್ತದೆ. ಅನುಭಾವಿಗಳಲ್ಲದವರಿಗೆ ಹೀಗೆ ಅನಿಸುವುದು ಸಹಜ. ಈ ಕಾರಣದಿಂದ 'ಗಾಡ್ ಇನ್‌ಟಾಕ್ಸಿಕೇಟೆಡ್' ಎನಿಸಿದ ಈ ವ್ಯಕ್ತಿಗಳು ವಿಮರ್ಶೆಗೆ ಎಟುಕದ ಅಲೌಕಿಕ ವ್ಯಕ್ತಿಗಳು. ಎಲ್ಲರಂತೆ ನುಡಿದು, ನಡೆದು, ಹೋರಾಡಿ ಸಾಯುವುದು ಲೌಕಿಕ. ಅದರಂತೆ ಸಾಯದೇ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಲು, ದೇವರ ಸಾಮ್ರಾಜ್ಯ ಸ್ಥಾಪಿಸಿಕೊಳ್ಳಲು ಹೆಣಗಾಡಿದವರು.; ಹೋರಾಡಿದವರು, ಹೋರಾಡಿ ಮಡಿದವರು ಅಲೌಕಿಕರು; ಹೀಗಾಗಿ ಹರಿಹರನ ಮಹಾದೇವಿಯಕ್ಕನಾಗಲಿ, ನಿಂಬಿಯಕ್ಕನಾಗಲಿ, ಮುತ್ತೈದೆಯಾಗಲಿ. ಪತಿಹಿತವೆಯಾಗಲಿ ಅವರ ವರ್ತನೆ ರಹಸ್ಯಮಯ (MYSTERIOUS) ಆಗಿ ಉಳಿಯುತ್ತದೆ.

"ಇಳೆಯಾಂಡ ಗುಡಿಮಾರ ಮಳೆಯಲ್ಲಿ ಮನೆಯ ಮಾಳಿಗೆಯನ್ನೇ ಹಿಡಿದು, ಬಂದ ಶಿವಭಕ್ತ ಅತಿಥಿಗೆ ಚಳಿ ನೀಗಿಸಲು ಉರಿ ಮಾಡಿದರೆ ಅವನ ಪತ್ನಿ ಸುಮ್ಮನಿರುತ್ತಾಳೆ. 'ಪತಿಹಿತವೆ'ಯನ್ನು ಬಂದ ಶರಣನಿಗೆ ಅರ್ಪಿಸಲು ಇಹಪಗೆಯಾಂಡರು ಮುಂದಾದಾಗ ಪ್ರತಿಭಟಿಸದ ಇವಳ ನಡತೆಗೆ ಏನೆನ್ನಬೇಕು ? ಬಂದವರು ಮಾನವರಲ್ಲ; ಶಿವನೇ, ಹರಿಹರನ ಭಕ್ತರನ್ನು ಪರೀಕ್ಷಿಸುವ ಶಕ್ತಿ ಶಿವನೊಬ್ಬನಿಗೆ ಮಾತ್ರ, ಆದುದರಿಂದ ಶಿವಾನುಭವದಲ್ಲಿ ಮಗ್ನರಾದ ಗಂಡ ಹೆಂಡಿರಿಬ್ಬರಿಗೂ ಬಂದವರು ಶಿವನೆಂದೇ ಗುರುತಿಸಿ ಕಾಣುವ ಕಣ್ಣಿದೆ"[೧೦]. ಭವಿ–ಭಕ್ತರ ಕೂಟವನ್ನು ಇಷ್ಟ ಕಾಯಕವೆಂದು ಕವಿ ವರ್ಣಿಸುವುದೇ ಇಲ್ಲ. ಯಾವುದಾದರೊಂದು ರೀತಿಯಲ್ಲಿ ಅಲ್ಲಿ ಪರಿವರ್ತನೆ ನಡೆಯಬೆಕು. ಆ ಪರಿವರ್ತನೆ ನಡೆಯದಿದ್ದರೆ. ಆ ದಾಂಪತ್ಯ ಭಗ್ನವಾಗುತ್ತದೆ. ಉದಾ॥ ಮಹಾದೇವಿಯಕ್ಕನ ಕಥೆ. ಆದುದರಿಂದ ಕಥಾ ನಾಯಕನ ಪತ್ನಿಯಲ್ಲಿ, ನಲ್ಲೆಯಲ್ಲಿ, ತಾಯಿಯಲ್ಲಿ, ಮಗಳಲ್ಲಿ ಇರುವುದಾಗಿ ಹರಿಹರ ಚಿತ್ರಿಸಿದ್ದಾನೆ.

ಭಕ್ತರ ನಡಾವಳಿಕೆ ನೋಡಿ ಅವರ ವ್ಯವಹಾರ ಜ್ಞಾನ ಶೂನ್ಯತೆಗೆ ಒಂದೆಡೆ ನಗು ಬಂದರೂ ಮತ್ತೊಂದೆಡೆ ಅವರ ನಡಾವಳಿಕೆಯ ಹಿಂದಿರುವ ನಿಷ್ಠೆಯನ್ನು ನೋಡಿ ಅಚ್ಚರಿಯಾಗುತ್ತದೆ. ಅವರು ಶಿವನಿಗಾಗಿ, ಶಿವಶರಣರಿಗಾಗಿ ಏನು ಬೇಕಾದರೂ ಮಾಡಲು ಸಿದ್ಧರು. ಅವರಿಗೆ ಕಷ್ಟ, ದಾರಿದ್ರ್ಯ. ಸಮಸ್ಯೆಗಳಾಗಿ ಕಾಣಿಸುವುದಿಲ್ಲ. ಆಧ್ಯಾತ್ಮಿಕ ಸಾಧನೆಗೆ ಒದಗಿ ಬಂದ 'ವರ' ಗಳೆಂದೇ ನಂಬಿಕೆ. ವೃತ್ತಿ ಹಾಗೂ ಪ್ರವೃತ್ತಿಗಳ ಸಾಮರಸ್ಯವೇ ಭಕ್ತಿಯ ಅತ್ಯುತ್ತಮ ಸ್ಥಿತಿ ಎಂಬುದು ಹರಿಹರನ ನಿಲುವು."[೧೦] 'ಪ್ರಾಚೀನ ಕರ್ನಾಟಕದ ಸ್ತ್ರೀ ವಿದ್ಯಾಭ್ಯಾಸ ಚಿತ್ರವು ಶೋಚನೀಯವಾದುದು; ಶೂದ್ರರಂತೆ

ಸ್ತ್ರೀಯರೂ ವೇದ ಮಂತ್ರಗಳನ್ನು ಉಚ್ಚರಿಸುವುದಿರಲಿ, ಕೇಳುವುದಕ್ಕೂ ಅನರ್ಹರಾದವರು' ಎಂಬ ಅಭಿಪ್ರಾಯಗಳಿವೆ. ಕರ್ನಾಟಕದಲ್ಲಿ ವಿದ್ಯಾವಂತರಾದ ಕೆಲವು ಸ್ತ್ರೀಯರ ಹೆಸರುಗಳು ದೊರೆಯುತ್ತಿದ್ದರೂ ಅವರೆಲ್ಲ ಉನ್ನತ ಮಟ್ಟದ ಕುಟುಂಬಗಳಿಗೆ ಸೇರಿದವರು; ಸಾಮಾನ್ಯರಲ್ಲ. ಹೊಯ್ಸಳರ ಕಾಲದಲ್ಲಿ ಶಾಂತಲೆ ಸಕಳಕಳಾಮಗಳಲ್ಲಿ ಪ್ರವಿಣಳಾಗಿದ್ದಳೆಂದರೂ ಜನಸಾಮಾನ್ಯ ಸ್ತ್ರೀಯರಿಗೆ ಲಭ್ಯವಿದ್ದ ವಿದ್ಯಾಭ್ಯಾಸದ ಕ್ರಮದ ಬಗೆಗೆ ಮಾಹಿತಿ ದೊರೆಯುವುದಿಲ್ಲ.

ದೇವಸ್ಥಾನ, ಮಠ, ಜಾತ್ರೆಗಳಲ್ಲಿ ಪುರಾಣ-ಶ್ರವಣ, ಕೀರ್ತನೆ, ಧಾರ್ಮಿಕ, ಪ್ರವಚನ ನಾಟಕಗಳ ಮೂಲಕ ಅವರಿಗೆ ಒಂದು ರೀತಿಯ ಶಿಕ್ಷಣ ದೊರೆಯಬಹುದಾಗಿತ್ತು. ೧೨ನೇ ಶತಮಾನದಲ್ಲಿ ಸ್ಥಿತಿ ಬದಲಾದುದು ಗೋಚರಿಸುತ್ತದೆ. ಇದಕ್ಕೆಲ್ಲ ಐತಿಹಾಸಿಕ ದಾಖಲೆಗಳನ್ನು ವಿವರಪೂರ್ಣ ನೀಡುವ ಸಾಮಗ್ರಿ ದೊರೆಯುತ್ತಿಲ್ಲವಾದುದರಿಂದ ನಾವು ವಚನ ಸಾಹಿತ್ಯ, ಹರೀಶ್ವರಾದಿ ಕವಿಗಳ ಕಾವ್ಯಗಳು ಒದಗಿಸುವ ಅಂಶಗಳಿಂದಲೇ ಹೆಕ್ಕಿ ತೆಗೆಯಬೇಕಿದೆ. ಹರಿಹರ ಪೂರ್ವದಲ್ಲಿ ಅನೇಕ ಸ್ತ್ರೀಯರೂ ಸಾಮಾಜಿಕ ಸುಧಾರಣೆ, ಧಾರ್ಮಿಕ ಸುಧಾರಣೆ ಕೈಗೊಂಡಿದ್ದರು. ಗುಡ್ಡಾಪುರದ ದಾನವ್ವೆ ಆಕೆಯ ಸಮಕಾಲೀನಳಾದ ಬಲವ್ವೆ ಇವರ ಹೆಸರುಗಳು ಮಹತ್ವವಾಗಿವೆ. ಈ ಅಧ್ಯಾಯದಲ್ಲಿ ವಿವರಿಸಿದ ಅನೇಕ ಮಹಿಳೆಯರು ಅಂದಿನ ವೀರಶೈವ ಸಮಾಜದಲ್ಲಿ ನಡೆದ ಬದಲಾವಣೆಯ ಪ್ರತೀಕವಾಗಿದ್ದಾರೆ."[೧೨]

ಬಸವಣ್ಣನ ಪೂರ್ವದಲ್ಲಿ ರಾಜಮನೆತನಕ್ಕೆ ಸಂಬಂಧಿಸಿದ ವಿಜಯಭಟ್ಟಾರಿಕೆ (೨ನೇ ಪುಲಿಕೇಶಿ ಸೊಸೆ) ವಿದ್ಯಾವಂತೆಯಾಗಿದ್ದಳೆಂದೂ, ಅಕ್ಕಮಹಾದೇವಿ (ಇರಿವಬೆಡಂಗ ಸತ್ಯಾಶ್ರಯನ ಸೋದರ ದಶವರ್ಮನ ಮಗಳು) ರಾಜ್ಯಭಾರ ಪ್ರವೀಣೆಯೆಂದು, ಕಲ್ಯಾಣಿ ಚಾಲುಕ್ಯರ ೬ನೇ ವಿಕ್ರಮಾದಿತ್ಯದ ಮಗಳು [೧೧೨೬- ೧೧೬೭] ಆಡಳಿತದಲ್ಲಿ ನಿಮುಣೆಯಾಗಿದ್ದಳೆಂದೂ ತಿಳಿದು ಬರುತ್ತದೆ'. ವಿದ್ಯೆ ಆಡಳಿತದಲ್ಲಿ ತರಬೇತಿ, ಸಂಗೀತ, ಸಾಹಿತ್ಯಗಳಲ್ಲಿ ತರಬೇತಿ ಇವು ಹೆಚ್ಚಾಗಿ ಮೇಲಿನ ವರ್ಗದವರಿಗೆ ಮೀಸಲಾಗಿದ್ದವು. ಹರಿಹರ ಕವಿಯ ಕಾವ್ಯದಲ್ಲಿ ಮಧ್ಯಮ ವರ್ಗದ ಮತ್ತು ಬಡಕುಟುಂಬಗಳ ಸ್ತ್ರೀಯರೂ ದೊರೆಯುತ್ತಿರುವುದು ಒಂದು ವಿಶೇಷ ಅಂಶ.

**ಹರಿಹರ ಕವಿಯ ಸ್ತ್ರೀಪಾತ್ರವನ್ನು ವಿಶ್ಲೇಷಣೆ ಮಾಡಲು ಕೆಲವು ವಿಭಾಗಗಳನ್ನಾಗಿ ಮಾಡಿಕೊಂಡಿದ್ದೇನೆ.**

೧. ಬಾಲಕಿಯರು.

೨. ಪ್ರಿಯತಮೆಯರು.

೩.　ಗೃಹಿಣಿಯರು.

೪.　ಮಾತೆಯರು.

೫.　ವಿಧವೆಯರು.

೬.　ವಿರಾಗಿಣಿಯರು.

ಹೀಗೆ ವಿಂಗಡಿಸಿಕೊಂಡು, ಹರಿಹರನ ಸ್ತ್ರೀಪರ ಧೋರಣೆಗಳ ಬಗ್ಗೆ ಚರ್ಚಿಸಿದ್ದೇನೆ. ಹರಿಹರನಿಗೆ ವೈರಾಗ್ಯದಲ್ಲಿ ಆಸಕ್ತಿ ಇರುವುದರಿಂದ ಅಂತಹವರನ್ನೊಂದು ಪ್ರತ್ಯೇಕ ವಿಭಾಗ ಮಾಡಿಕೊಂಡಿದ್ದೇನೆ. ಈ ವಿಭಾಗಗಳಲ್ಲಿ ಮತ್ತೆ ಸೂಕ್ಷ್ಮವಾಗಿ ವಿಭಾಗ ಮಾಡಿಕೊಂಡಿಲ್ಲ. ಶೈಶವಾಸ್ಥೆಯಿಂದ ವೈಧವ್ಯದ ವಿವಿಧ ಹಂತಗಳವರೆಗೆ ಹರಿಹರ ಕವಿ, ಸ್ತ್ರೀಯರು ಬಗೆಗಿನ ಭಾವನೆಗಳನ್ನು ನಿರೂಪಿಸಿದುದನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಿದ್ದೇನೆ. ಕನ್ನಡ ಸಾಹಿತ್ಯದಲ್ಲಿ ಹರಿಹರನ ಹೆಸರು ಚಿರಸ್ಥಾಯಿಯಾಗಿ ಉಳಿಯಲು ಕಾರಣವಾದ ಅಂಶಗಳಲ್ಲಿ, ಸ್ತ್ರೀವರ್ಗದ ಬಗ್ಗೆ ಅವನು ತಾಳಿದ ಅತ್ಯಂತ ಗೌರವ ಭಾವನೆ ಇರುವುದರಿಂದ ತನ್ನ ಕಾವ್ಯದಲ್ಲಿ ಸ್ತ್ರೀಯರಿಗೆ ವಿಶೇಷ ಮನ್ನಣೆ ನೀಡಿದ್ದಾನೆ. ಹಲವು ಬಗೆಯ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿ ಪರಂಪರೆಯಿಂದ ಬೆಳೆದುಕೊಂಡು ಬಂದಿದ್ದ. ಸ್ತ್ರೀಯರ ಮೇಲಿನ ಅಪವಾದಗಳ ಬಗ್ಗೆ ಅರಿವು ಮೂಡಿಸಿ ಕಳಂಕವನ್ನು ತೊರೆಯುವ ಪ್ರಯತ್ನ ಮಾಡಿದ್ದಾನೆ. ಹೀಗಾಗಿ ಈ ಅಧ್ಯಾಯದಲ್ಲಿ ಸ್ತ್ರೀಪರ ಧೋರಣೆಯ ಬಗ್ಗೆ ವಿಶ್ಲೇಷಣೆ ಮಾಡುವುದು ಅಗತ್ಯವೆನಿಸಿದೆ.

**ಬಾಲಕಿಯರು**

**ಕೋಳೂರು ಕೊಡಗೂಸು:** ಹರಿಹರ ಚಿತ್ರಿಸಿರುವ ಅತ್ಯಂತ ಚಿಕ್ಕ ವಯಸ್ಸಿನ ಬಾಲಕಿ ಎಂದರೆ ಕೋಳೂರು ಕೊಡಗೂಸು. ಇವಳು ಅತ್ಯಂತ ಮುಗ್ಧ ಬಾಲಕಿ ಈ ಕೂಸಿನ ಬಗೆಗೆ ಹರಿಹರ ಲಿಂಗಾರ್ಚನೆ ರಗಳೆಯಲ್ಲಿ ಕೊಡಗೂಸನ್ನು ಭಕ್ತಿಯಿಂದೊಸೆದು ಹಾಡುವುದಾಗಿ ಹೇಳಿದ್ದಾನೆ. 'ಭೃಂಗೀಶನ ರಗಳೆಯಲ್ಲಿ ಕನ್ನೆಯಳುತೆ ಹಾಲೆರೆದ ಪರಿಗಳಂ ಭೃಂಗೀಶನು ನಾಟ್ಯವಾಡಿ ತೋರಿಸಿದನೆಂದು ತಿಳಿಸಿದ್ದಾನೆ' ಶತಕಗಳಲ್ಲಿ ಆಕೆಯ ಭಕ್ತಿಯನ್ನು ಪ್ರಶಂಸಿಸಿದ್ದಾನೆ."[೧೩] "ಹರಿಹರ ಕವಿಯ ಮನದ ಮೇಲೆ ಮುಗ್ಧ ಭಕ್ತಿಯ ಪ್ರಭಾವವನ್ನು ಈ ಕೂಸು ಅಚ್ಚೊತ್ತಿದ್ದಾಳೆ. ಶರಣರ ಕಥೆಗಳಲ್ಲಿ ಈ ಕೂಸಿಗೆ, ಕವಿಯು ಮೇಲಾದ ಸ್ಥಾನವಿತ್ತುದು ಅವಳ ಹಿರಿಮೆಯ ಧ್ಯೋತಕವಾಗಿದೆ.

ಶ್ರೀ ಪಂಪಾಕ್ಷೇತ್ರದ ಉತ್ತರಕ್ಕೆ 'ಕೋಳೂರು' ಎಂಬ ಗ್ರಾಮವಿದ್ದು, ಅಲ್ಲಿ ಕಲ್ಲಿನಾಥನ

ಈಶ್ವರ ದೇವಾಲಯವಿದ್ದು, ಆ ಈಶ್ವರನನ್ನು ಪೂಜಿಸಿಕೊಂಡಿರ್ದ ಶಿವಭಕ್ತ' "ಶಿವಭಕ್ತೆಯರ ಮಗಳು ಕೊಡಗೂಸು. ಈ ಕೂಸು ಶರಣರಲ್ಲಿಯೇ ಅತಿ ಕಿರಿಯಳು. ಕೊಡಗೂಸಿನ ತಾಯಿ ಪ್ರತಿ ಸೋಮವಾರ ಕಲ್ಲಿನಾಥನಿಗೆ ಹಾಲುಣಿಸುವ ವ್ರತ ಪಾಲಿಸುತ್ತಾಳೆ. ಕೊಡಗೂಸು ಒಂದು ದಿನ ತಾಯಿಯನ್ನು ಆ ವ್ರತದ ಬಗೆಗೆ ಕೇಳಿದಾಗ ತಾಯಿಯು, ಶಂಕರಂಗೆ ಹಾಲೆರಿಯುವುದು ಎಂದು ತಿಳಿಸುತ್ತಾಳೆ. ಕೊಡಗೂಸು ಮತ್ತೆ ತಾಯಿಯನ್ನು"ದೇವನೆಂದರೆ ಆರು ಅವ್ವ" ?- ಎನ್ನುತ್ತಾಳೆ.

ತಾಯಿಯು ಆಗ "ಶಿವನೆಂದರೆ ಐದು ಮುಖ, ದಶಭುಜವುಳ್ಳವನು"೧೪ ಎಂದು ಮೊದಲಾಗಿ ಲಕ್ಷಣಗಳನ್ನು ವಿವರಿಸಿ. ದೇವನ ಮಹಿಮೆಯನ್ನು ತಿಳಿಸುತ್ತಾಳೆ. ಅಂದಿನಿಂದ ಕೊಡಗೂಸಿನ ಮನದಲ್ಲಿ ಇಂದುಧರನ ಮೂರ್ತಿಯ ಚಿತ್ರವೂ ಮೂಡಿ, ಹೃದಯಲ್ಲಿ ರೂಪುಗೊಂಡು, ದೇಹವನ್ನೆಲ್ಲ ವ್ಯಾಪಿಸುತ್ತದೆ. ಶಿವನನ್ನು ಸಾಕಾರದಲ್ಲಿ ಕಾಣುವ ತವಕವೂ ಹೆಚ್ಚುತ್ತದೆ. ಕೊಡಗೂಸೊರ್ವಳದೊಂದು ಬಟ್ಟಲೊಳ್ ಪಾಲಂ ತಂದು ಮುಂದಿಟ್ಟು, ನೀಂ ಕುಡಿಯೆಮ್ಮವ್ವೆ ದಿಟಂ ಕರಂ ಬಡಿವಳೆಂದುಳ್ತು, ಕಾರ್ಪಣ್ಯದಿಂ

ನುಡಿಯಲಾ ನುಡಿಗಂಜಿ, ತಾನರರೆ ಕಾರುಣ್ಯಾಕರಂ ಜೂಳಿಯಂ

ಕುಡಿದಂ ಪಾಲನದೇ॥ ಕೃಪಾಳುವೊ, ವಿರೂಪಾಕ್ಷಂ ಲಲಾತೇಕಣಂ"೧೫ ಪದ್ಯ ೬೭ (ರಕ್ಷಾಶತಕ) ಮಗು ಚಿಕ್ಕವಳೆಂಬ ಕಾರಣದಿಂದ ತಾಯಿಯೂ ಅವಳನ್ನು ಗುಡಿಗೆ ಕರೆದುಕೊಂಡು ಹೋಗಿರುವುದಿಲ್ಲ. ಕೊಡಗೂಸು ತಾನೆ ಸಹಜವಾಗಿ ಒರಳಕ್ಕಿ ಮಿದಿವಲ್ಲಿ, ನೆರೆದ ಮಕ್ಕಳ ನಡುವೆ ಹಾಡುವಾಗ, ಆಡುವಾಗ" ಕಲ್ಲಿನಾಥನನ್ನೇ ಕುರಿತು ಹಾಡುತ್ತಾಳೆ. ಈ ರೀತಿ ಹತ್ತು ವರುಷದ ಶಿವಭಾವದ ಹಸೂಳೆಯಾಗಿ ಬೆಳೆಯುತ್ತಾಳೆ. ಒಂದು ದಿನ ಕೊಡಗೂಸಿನ ತಾಯಿ ಮಾಣಿಕಂಗಂಡಿರುತ್ತಾಳೆ. (ಮುಟ್ಟಾಗಿರುತ್ತಾಳೆ) ತಾಯಿಯು ತನ್ನ ಮಗಳಿಗೆ ವ್ರತ ಪೂರೈಸಲು ತಿಳಿಸಿ, ಕಲ್ಲಿನಾಥಂಗೆ ಹಾಲನೆರೆ ಯವ್ವ" ಎಂದು ಹೇಳುತ್ತಾಳೆ. ಆಗ ಮಗಳಿಗೆ ತನ್ನ ಜೀವನದ ಮಹದಾಸೆ ಫಲಿಸಿದಷ್ಟೇ ಸಂತಸವಾಗು ತ್ತದೆ. ಇತರ ಕುವರಿಯಾರಿಗೆ ದೊರೆಯದ ದೇವಾರ್ಚನೆಯ ಭಾಗ್ಯ ತನಗೆ ದೊರೆಯಿತೆಂದು ಭಾವಿಸುತ್ತಾಳೆ. ಅರಿಷಿಣವನ್ನೇ ಮಿಂದು, ಮಡಿಯುಟ್ಟುಕೊಂಡು, ಅಲಂಕರಿಸಿಕೊಂಡು, ಭಸಿತವನ್ನು ಹೊಸಿಕೊಂಡು, ಹಾಲಗಡಿಗೆಯನ್ನು ಕೈಯಲ್ಲಿಡಿದು, ದೇವಾಲಯಕ್ಕೆ ಸಿದ್ಧಳಾಗಿ ಹೊರಡುತ್ತಾಳೆ.

ಕೈಯಲ್ಲಿ ಹಾಲಗಡಿಗೆ, ಮನದಲ್ಲಿ ಶಿವಮೂರ್ತಿ; ದೇಹದಲ್ಲಿ ಶಿವಭಕ್ತಿಯಾದರಿಸಿ, ದೇವಾಲಯಕ್ಕೆ ಬಂದು ಶಿವನಿಗೆ ವಂದನೆ ಸಲ್ಲಿಸಿ, ಭಯ, ಭಕ್ತಿಯಿಂದ ಬಟ್ಟಲಲ್ಲಿ ಹಾಲು ಹಾಕಿ ಶಿವನನ್ನು ರಮಿಸಿ, ರಮಿಸಿ ಹಾಲು ಕುಡಿಯಲು ಕೇಳಿಕೊಳ್ಳುತ್ತಾಳೆ. ಅವಳ ಮಾತಿನ ಸವಿಗೆ ಹೊಟ್ಟೆ

ತುಂಬಿಕೊಂಡು ಶಿವನು, ಹಾಲನ್ನೆ ಕುಡಿಯುವುದಿಲ್ಲ ಕೊಡಗೂಸು. ಆದುದರಿಂದ ಕುಂದಿ, ಕುಂದಿ ಬಸವಳಿದು ಅತ್ತು. "ಶಿವನೇ ನೀ ಹಾಲ್ಗುಡಿಯದಿರ್ದರೆ ಎಮ್ಮೆವ್ವೆ ಬಡಿದಪಳು; ಆದರಿಂದ ಮನೆಗೆ ಹೋಗಲು ಅಂಜುವೆ" ಎಂದು ತಿಳಿಸುತ್ತಾಳೆ.

ಶಿವನು ಭಕ್ತಿವರಿಸಿದ ಅವಳ ಮಾತಿನ ಅಮೃತವನ್ನು ಸವಿಯುತ್ತಾನೆ. ಕೊಡಗೂಸು ಶಿವನು ಹಾಲು ಕುಡಿಯಲಿಲ್ಲವೆಂದು ನಿಂದತ್ತು, ನೆನೆದತ್ತು, ಮುನಿರತ್ತು, ಸ್ನೇಹದಿಂದತ್ತು" ಮುಗ್ಧ ಭಕ್ತಿ ಪ್ರಕಟಿಸುತ್ತಾಳೆ. ಆಗ ಶಿವನು ಭಕ್ತಿವೆರಸಿದ ಅವಳ ಬಟ್ಟಲ ಹಾಲು ಕುಡಿಯುತ್ತಾನೆ. ಇಳೆಗೆ ಕೌತುಕ ಉಂಟಾಗುತ್ತದೆ. ಅನುಗ್ರಹಿಸಿದ ಶಿವನು ಕೊಡಗೂಸನ್ನು ಪುಷ್ಪಕದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಕೊಡಗೂಸಿನ ಬಂಧು ಜನಕ್ಕೆ, ಕೋಲೂರು ಜನಕ್ಕೆ ಅತಿ ಸಂತಸವಾಗುತ್ತದೆ. ಕೈಲಾಸದಲ್ಲಿ ಶಿವನು ನಂದೀಶ ಪಾರ್ವತಿಯರಿಗೆ ಈ ಕೂಸನ್ನು ಪರಿಚಯಿಸುತ್ತ;

ಏನಗೆ ಪಾಲ್ಗುಡಿಸಿದ ನಿಸ್ಸೀಮೆ"

ಇವಳು ಎಂದು ತಿಳಿಸಿ, ಕೊಡಗೂಸು ಹಾಲು ಕುಡಿಸಿದ ಬಟ್ಟಲಲ್ಲಿಯೇ ನಿತ್ಯ ತನಗೆ ಕುಡಿಯಲು ಹಾಲು ಕೊಡಬೇಕೆಂದು ಪಾರ್ವತಿಗೆ ತಿಳಿಸುತ್ತಾನೆ. ಆ ಬಟ್ಟಲನ್ನು ಭಂಡಾರದಲ್ಲಿ ತೆಗೆದಿರಿಸಲು ಕುಬೇರನಿಗೆ ಆಜ್ಞಾಪಿಸುತ್ತಾನೆ. ಕೊಡಗೂಸಿಗೆ ರುದ್ರಕನ್ನಿಕೆಯ ಸ್ಥಾನವನ್ನಿಯುತ್ತಾನೆ.

ಹರಿಹರ ಕವಿಯು ಮಹಿಳೆಯರಲ್ಲಿ ಇವಳು ಏನು ಅರಿಯದ ಹಾಲುಗಲ್ಲದ ಹಸುಳೆ, ಮುಗುದೆ; ತೊದಳ್ನುಡಿಯ ಶಿವಭಕ್ತಿ, ಅವಳ ಬಾಲಲೀಲೆ, ಬಾಲ್ಯದ ವಿಚಾರವೆಲ್ಲ ಶಿವಭಕ್ತಿಮಯ: ತನು, ಮನ, ಭಾವ, ಕ್ರಿಯೆಯಲ್ಲವೂ ಶಿವಮಯ; ಶಿವಪೂಜೆ ಶಿವದರ್ಶನಕ್ಕೆ ಅತ್ಯಾಸೆ ! ಕರ್ತವ್ಯದ ಕಡೆಗೆ ಅವಳ ದೃಷ್ಟಿ ಇದೆಯೇ ವಿನಾ ಮಗುವಿಗೆ ಇರಬೇಕಾದ ತಿಂಡಿ ತಿನಿಸುಗಳಿಲ್ಲ. "ಮಗಳೆ ಹಾಲನೆರೆ ಕಲ್ಲಿನಾಥಂಗೆ" ಎಂದು ತಾಯಿ ಹೇಳಿದರೆ, ಕೊಡಗೂಸು. 'ಹಾಲುಣಿಸು' ಎಂದೇ ಅರ್ಥ ಮಾಡಿಕೊಂಡಳು. ಕೊಡಗೂಸಿನ ತಾಯಿಯ ವ್ರತ ಪ್ರತಿ ಸೋಮವಾರ ಕಲ್ಲಿನಾಂಥಗೆ ಹಾಲನೆರೆಯುವುದು, ತಾನೆ ಶಿವನಿಗೆ ಹಾಲಿನ ಅಭಿಷೇಕ ಮಾಡುತ್ತಿದ್ದಳೋ. ಪೂಜಾರಿಯ ಮೂಲಕವೂ ಅದು ತಿಳಿಯದು. ಈ ಕಥೆಯಲ್ಲಿ ಪೂಜಾರಿಯ ಪ್ರಸ್ತಾಪವೇ ಇಲ್ಲ. ಶಿವರಾಧನೆಯನ್ನು ಈ ಸ್ತ್ರೀಯೇ ಮಾಡುತ್ತಿದ್ದಾಳೆ ಇಲ್ಲಿ. ಕೊಡಗೂಸು, ಹಾಲನೆರೆ ಎಂದುದಕ್ಕೆ 'ಹಾಲುಣಿಸು' ಎಂದು ಶಬ್ದಶಃ ಅರ್ಥಮಾಡಿಕೊಂಡಳು.

ಆಡಿದ ಶಬ್ದ, ಮಾಡಿದ ಅರ್ಥ ಎರಡೂ ಪಾವನವಾದವು.ಅವಳ ಮನಸ್ಸು ಶುದ್ಧವಾದುದು

ಭಾವ ಹಿರಿದಾದುದು. ಅವಳ ಹಾಲು ಇನಿದು, ಹಾಲಿಗಿಂತ ಮಾತು ಇನ್ನೂ ಇನಿದು. ಅವಳ ಮಾತು ಮುದ್ದಿನ ಮಾತು: ಲಲ್ಲೆ ಮಾತು. ಶಿವಾನುಗ್ರಹ ಪಡೆಯಲು ವಯಸ್ಸಿನ ಭೇದವಿಲ್ಲ ಎಂಬುದಕ್ಕೆ ಈ ಕಥೆ ಒಂದು ನಿದರ್ಶನ. ಶಿವನನ್ನು ಹಾಲು ಕುಡಿಯಲು ಮುದ್ದಿಸುವಲ್ಲಿ, ಅಳುವಲ್ಲಿ ಶಿವನ ಮೇಲಿದ್ದ ಅವಳ ಮಮತೆ ಮತ್ತು ಭಾವನೆಗಳನ್ನು ನಾವು ಕಾಣುತ್ತೇವೆ. ಶಿವನು ಹಾಲು ಕುಡಿಯಲಿಲ್ಲವೆಂದು ಈ ಕೂಸು ಅತ್ತುದುದು ವಿಚಿತ್ರವೇ ಸರಿ. ತನಗೇನೂ ಇಲ್ಲವೆಂದು ಅತ್ತವಳಲ್ಲ. ಅವಳು ಬಾಲಕಿಯಾಗಿದ್ದರೂ ಶಿವನಿಗೆ ಹಾಲು ಕುಡಿಸುವ ವಾತ್ಸಲ್ಯದಲ್ಲಿ ಮಾತೆಯಂತಿದ್ದಾಳೆ. ಕೊಡಗೂಸಿನ ಈ ಭಕ್ತಿಯ ವಿಕಸನಕ್ಕೆ ಆಕೆಯ ತಾಯಿಯ ವ್ರತವೇ ಕಾರಣವಾಗಿದೆ.

ಕೊಡಗೂಸಿನ ಅಳುವಿಗೆ ಶಿವನ ಚಿತ್ತವೇ ಕರಗುತ್ತದೆ; ಮನ ಕರಗುತ್ತದೆ. ಕೊಡಗೂಸಿನದು ಶ್ರೀಹಸ್ತ; ಹೊಲಸು ಹಸ್ತವಲ್ಲ. ಸವಿಮಾತು. ಅತಿಸ್ನೇಹ–ಇವು ತಾಯಿ ಕಲಿಸಿದ ಅಂಶಗಳು. ಅವಳದು ನಿಷ್ಕಾಮ ಭಕ್ತಿ. ಮುಕ್ತಿಯನ್ನು ಕೇಳುವಂತಹುದಲ್ಲ ಕೊಡಗೂಸಿನ ಪ್ರೀತಿಗೆ ಶಿವನು ಶಿಶುವಿನಹಾಗೆ ಹಾಲ್ಕುಡಿದ. ಅವಳ ಮೊರೆ ಅವನನ್ನು ಬಡಿದೆಬ್ಬಿಸಿತು. ಮೃಢನನ್ನು ಕಾಣುವ ತವಕ ಅವಳಲ್ಲಿ ಅತಿಯಾಗಿದೆ; ಅವಳ ಉತ್ಸಾಹ ಉಂಟುಮಾಡಿ; ಭಾವದಲ್ಲಿ ಶಿವನ ರೂಪು ಮೂರ್ತಿಗೊಂಡಿದೆ. ಬಾಲ್ಯದಲ್ಲಿ ಮಕ್ಕಳಿಗೆ ಊಟ–ಉಡಿಗೆ, ಆಟ–ತೊಡುಗೆ ಇದ್ದರೆ ಇನ್ಯಾವ ಚಿಂತೆ ? ಇಂತಹ ಕಾಲದಲ್ಲಿ ಶಿವನಿಗೆ ಹಾಲು ಕುಡಿಸಿಯೇ ತೀರಬೇಕೆಂಬ ಹಟ ಈ ಬಾಲಕಿಯದು. ಮಕ್ಕಳ ಮುಗ್ಧತೆ, ಇನಿದಾದ ಮಾತು, ಸಹಜತೆಗೆ ಹರಿಹರ ಕವಿಯ ಈ ಕಥೆ ಉತ್ತಮ ನಿದರ್ಶನ. ಶಿವನ ಅನುಗ್ರಹಕ್ಕೆ "ಹುತ್ತೇರಿ ಭತ್ತ ಬೆಳೆಯಬೇಕಿಲ್ಲ"– ಎಂಬ ತತ್ವವು ಈ ಕಥೆಯಲ್ಲಿ ಅಡಕವಾಗಿದೆ.

ಶಿವದಂಪತಿಗಳು ಮಗಳಿಗೆ ೭ ದಿನ ಹಾಲು ಕುಡಿಸಲು ತಿಳಿಸುತ್ತಾರೆ. ಅದುದರಿಂದ ಕೊಡಗೂಸು ಹಾಲುಣಿಸಬೇಕೆಂದೇ ಅರ್ಥ ಮಾಡಿಕೊಳ್ಳುತ್ತಾಳೆ. ಶಿವನು ಹಾಲು ಕುಡಿಯದಿದ್ದುದರಿಂದ ನಾನಾ ಪರಿಯಲ್ಲಿ ಮುದ್ದಿಸುತ್ತಾಳೆ: ರಮಿಸುತ್ತಾಳೆ. ಹೆಸರುಗ್ಗಿ, ಆಭರಣ, ಒಡವೆ ಕೊಡುವುದಾಗಿಯೇ ತಿಳಿಸುತ್ತಾಳೆ. ಬೇಕಾದರೆ ಚಿಗುಳಿ, ಚಕ್ಕುಲಿ, ಹಾಲವುಗ, ಮಂಡಿಗೆ, ತರಗು, ಇಡ್ಡಲಿಗೆ, ಘಾರಿಗೆ, ಪೂರಿ ಅವಲಕ್ಕಿ ಮೊದಲಾದ ತಿಂಡಿಗಳ ಆಸೆ ಹಚ್ಚುತ್ತಾಳೆ. ಒಂದು ಹೆಣ್ಣು ಕೂಸು ಚಿಕ್ಕಮಗುವನ್ನು ಮುದ್ದಿಸುವಂತೆ ಮಾತುಗಳನ್ನಾಡುತ್ತಾಳೆ. ಬಡ ಮಗುವು; ಬಾಲೆಯೆಂದು ಶಿವನು ಹಾಲು ಕುಡಿಯಲಿಲ್ಲವೆಂದು ಅಳುತ್ತಾಳೆ. ತಲೆಯನ್ನು ಶಿವಮೂರ್ತಿಗೆ ಅಪ್ಪಳಿಸಲು ಹೋದಾಗ ಶಿವ ಅವಳ ಬಟ್ಟಲ ಹಾಲು ಕುಡಿಯುತ್ತಾನೆ. ಅದು ಅವಳ ತಾಯ್ತಂದೆಗಳಿಗೆ ಅಚ್ಚರಿಯನ್ನೂ, ಕ್ರೋಧವನ್ನುಂಟು ಮಾಡಿ, ಮಗಳನ್ನು ಪರೀಕ್ಷಿಸಲು ದೇವಾಲಯಕ್ಕೆ ಹೋದಾಗ ಶಿವನು ಆಕೆಯನ್ನು ಎತ್ತಿ, ತನ್ನಲ್ಲಿಯೇ ಲೀನ ಮಾಡಿಕೊಂಡನೆಂದು ಭಾಮಕವಿ ಹೇಳಿದ್ದಾನೆ. ಹರಿಹರನ ಕಥೆಗಿಂತಲೂ

ಇಲ್ಲಿ ಕೊಡಗೂಸು ಶಿವನನ್ನು ರಮಿಸಿ ಮಾತನಾಡುವ ಸನ್ನಿವೇಶ ಚಿತ್ತಾಕರ್ಷಕವಾಗಿದೆ. ಭೀಮಕವಿಯಲ್ಲಿ ಮಕ್ಕಳ ಬುದ್ಧಿಗೆ ಏನು ತಿಳಿಯದೆಂಬ ಭಾವ ಇಲ್ಲಿ ವ್ಯಕ್ತವಾಗಿಲ್ಲ, ಗೌರವಕ್ಕೆ ವಯಸ್ಸು ಮುಖ್ಯವಲ್ಲ, ಅರಿವು ಮುಖ್ಯವಲ್ಲ ಎಂಬ ಶರಣರ ಸಿದ್ಧಾಂತವು ಈ ಕಥೆಯಲ್ಲಿ ಹೊರಹೊಮ್ಮಿದೆ.

## ೨. ನಿಂಬಿಯಕ್ಕ

ಬಸವಣ್ಣನವರು ಅತ್ಯಂತ ಗೌರವದಿಂದ ಈ ಶರಣೆಯನ್ನು "ಎಮ್ಮ ತಾಯಿ ನಿಂಬವ್ವೆ ನೀರನೆಱೆದುಂಬಳು"[೧೬] ಎಂದು ಕೊಂಡಾಡಿದ್ದಾರೆ. ಹರಿಹರದೇವ ಈ ಕಥೆಯಲ್ಲಿ ಈಕೆ ನೀರನ್ನು ತಂದು ಹಾಕುವ ಕಾಯಕವನ್ನೇ ಕೈಕೊಂಡುದುದನ್ನು ವರ್ಣಿಸಿದ್ದಾನೆ. ಆದುದರಿಂದ ಬಸವಣ್ಣನವರು, ಹೆಸರಿಸುವ ನಿಂಬವ್ವನೇ ನಿಂಬಿಯಕ್ಕನೆಂದು ಹೇಳಬಹುದು. ಬಸವಣ್ಣನವರಿಗಿಂತಲೂ ಈ ಶರಣೆ ಹಿರಿಯಳಾಗಿದ್ದಳೆಂದು ಇದರ ಆಧಾರದಿಂದ ಹೇಳಬಹುದಾಗಿದೆ. ಹರಿಹರ ಕವಿಯೇ ಈಕೆಯ ಹೆಸರನ್ನು ಭೃಂಗೀಶ್ವರನ ರಗಳೆಯಲ್ಲಿ ತಿಳಿಸುತ್ತ. ಭೃಂಗೀಶನು "ನಿಂಬಿಗೆ ಶಿವನು ಸೂರೆಯನಿತ್ತ ಪರಿಗಳಂ" ನಾಟ್ಯವಾಡಿ ತೋರಿದನೆಂದು ವರ್ಣಿಸಿದ್ದಾನೆ"[೧೭] ಅಲ್ಲದೆ ಲಿಂಗಾರ್ಚನೆಯ ರಗಳೆಯಲ್ಲಿ ಆಕೆಯ ಹೆಸರು ಹೇಳಿದ್ದಾನೆ.

ಕೈಲಾಸದಲ್ಲಿ 'ಮಧುರಮುಖಿ' ಎಂಬ ರುದ್ರಕನ್ನಿಕೆ'ಯು ಕೈಲಾಸದ ಅರಮನೆಯಲ್ಲಿ ಕಸಗೂಡಿಸುತ್ತಿರುವಾಗ 'ಕಲ್ಪಕುಜೆ' ಎಂಬ ಸತಿಯು ಓಲಗಕ್ಕೆ ಬರುತ್ತಿದ್ದಳು.; ಅಲ್ಲಿ ಧೂಳು ಎದ್ದಿರುತ್ತದೆ. ಆದ್ದರಿಂದ ಕೋಪಗೊಂಡ ಕಲ್ಪಕುಜೆಯು, ಎಲೆ ತೊತ್ತೆ, ಸಸಿನುಡುಗು" ಎಂದು ನುಡಿಯುತ್ತಾಳೆ. ಇದರಿಂದ ಮಧುರಮುಖಿಗೆ ನೋವಾಗುತ್ತದೆ. ಕಲ್ಪಕುಜೆಯು ಕೋಪದ ವರ್ತನೆಯನ್ನು ಕಂಡ ಪಾರ್ವತಿಯು ಎನ್ನ ತೊತ್ತಿರ್ ಲಕ್ಷ್ಮಿ ಸರಸ್ವತಿಯರಲ್ಲರೆ ? ತೊತ್ತೆಂದು ನುಡಿದೇಕೆ ಮರ್ತ್ಯದೊಳಗುದ್ಭವಿಸಿ ತೊತ್ತಾಗಿ ಬಾಳು, ನೀಚವೆನಿಸಿದ ನಿಂಬೆ ನಾಮದಿಂ ಸಂದು, ಭೂಚರರ ನಿಳಯದೊಳು ತೊತ್ತಾಗಿಸಲೆಸಂದು ಬಳಿಕೈತಪ್ಪುದನು ಭವಿಸಿ" ಎಂದು ಕಲ್ಪಕುಜೆಗೆ ಶಾಪವಿಯುತ್ತಾಳೆ".[೧೮]

ಕಲ್ಪಕುಜೆಯು, ಪಾರ್ವತಿಯ ಶಾಪವನ್ನು ಹೊತ್ತುಕೊಂಡು, ಭೂ ಲೋಕದಲ್ಲಿ (ಭರತ ಖಂಡದಲ್ಲಿ) ಉತ್ತರ ದಿಶಾಭಾಗದಲ್ಲಿ ಶಿವಪುರದಲ್ಲಿ ಶಿವಭಕ್ತನರಸಿಯ ಉದರದಲ್ಲಿ ಜನಿಸುತ್ತಾಳೆ. ತಂದೆ ಮಗುವಿಗೆ ನಿಂಬವ್ವೆ ಎಂದು ಹೆಸರಿಸುತ್ತಾನೆ. ನಿಂಬವ್ವೆ ನವಲತೆಯಂತೆ ಬೆಳೆಯುತ್ತಾಳೆ; ಇಂದು ಕಳೆಯಂತೆ ಶೋಭಿಸುತ್ತಾಳೆ. ತಂದೆ ಮಾಡುವ ಪರಮಭಕ್ತಿಯನ್ನು ನೋಡುತ್ತ, ಇಂಧುದರನಂಘ್ರಿಯಲ್ಲಿ ಸ್ನೇಹವನ್ನು ಮಾಡುತ್ತ, ಮನೆಯಲ್ಲಿ ಗಣಪರ್ವವನ್ನು ನೋಡಿ, ಹರುಷವನ್ನು

ತಳೆಯುತ್ತ ಬೆಳೆಯುತ್ತಿರುವಾಗಲೇ, ಪಾರ್ವತಿಯು ಶಾಪದ ಫಲವನ್ನುವಂತೆ ಜನನಿ ಮತ್ತು ಸೋದರರು ಸತ್ತು ಹೋಗುತ್ತಾರೆ. ತಂದೆ ಮತ್ತು ತಾನು ಇಬ್ಬರೇ ಉಳಿಯುತ್ತಾರೆ. ಅವರಿಗೆ ಕಡುಬಡತನವೂ ಆವರಿಸುತ್ತದೆ. ಇಂತಹ ಸ್ಥಿತಿಯಲ್ಲಿ ಬಡತನದಲ್ಲಿ ತಮ್ಮೂರಲ್ಲಿ ತಿರಿದುಂಡು ಬಾಳವುದಕ್ಕಿಂತ ಬೇರೆ ಊರು ಲೇಸೆಂದು ತಂದೆ ಮಗಳು ಬೇರೊಂದು ಪಟ್ಟಣಕ್ಕೆ ಆಗಮಿಸುತ್ತಾರೆ. ತಂದೆ ತಿರಿದು ಮಗಳನ್ನು ಜೋಪಾನ ಮಾಡುತ್ತಾನೆ.

ತಂದೆಗೆ ರೋಗ ಬರುತ್ತದೆ; ಆಗ ಮಗಳು ತಿರಿದು ತರಲು ಮನಸ್ಸು ಮಾಡಲಿಲ್ಲ, ತಂದೆ ಮಗಳೂ ಇಬ್ಬರಿಗೂ ಒಂದೆರಡು ಉಪವಾಸಗಳಾಗುತ್ತವೆ. ಪರಸ್ಪರರೂ ಮುಖ ನೋಡುತ್ತಾರೆ. ತಂದೆಯು, "ಮಗಳೆ ನಿಂಬೆವ್ವೆ, ನೀಂ ತೊತ್ತಾಗಿಯಾದಡಂ ಎನ್ನಕಾಯಿ; ನೀವು ಪೋಗು" ಎನ್ನುತ್ತಾನೆ. ನಿಂಬವ್ವೆ ಅಂಜಿ, ಭವಿಯೆನಿಪ ವಿಪ್ರನಿಗೆ ತೊತ್ತಾಗಿ, ತಂದೆಯನ್ನು ಅವರ ಆಶ್ರಯಕ್ಕೆ ಕರೇತರುತ್ತಾಳೆ."[೧೯] "ತೊತ್ತು ತನದೊಡನೆ ಅವಳಿಗೆ ಯೌವ್ವನವೂ ಪ್ರಾಪ್ತವಾಗುತ್ತದೆ. ಹರವಿಯನ್ನು ಹೊತ್ತು ನೀರು ಹಾಕುವುದು ಆಕೆಯ ಕೆಲಸವಾಗಿತ್ತು. ಈ ರೀತಿ ಉತ್ತಮ ಶಿವಾಚಾರ ವೃತ್ತಿ ಕೈಗೊಂಡಿದ್ದ ಕಾಲದಲ್ಲಿ ಮೃಡಭಕ್ತರು ಅವಳ ಮನೆಗೆ ಆಗಮಿಸುತ್ತಾರೆ."[೨೦] ತನ್ನ ಬಡತನದ ದುಃಖವನ್ನು ನೆನೆದೂ ಶಿವಭಕ್ತಿಯಿಂದ ಗಣಪರ್ವ ಮಾಡುತ್ತಾಳೆ. ಅಲ್ಲದೆ ಭಕ್ತರ್ಗೆ ಮಗಳಾಗಿ, ಭವಿಗಳಿಗೆ ತೊತ್ತಾಗಿ,

ಇಪ್ಪಂತೆ ಮಾಡಿದಾ ಶಿವನೆ, ಎನ್ನಂ ನೋಡಿ:

---------------------------------

ಒಪ್ಪ ಕಣ್ಣೀರಿಂದೆ ಶೋಕದೊಳಗಕ್ಕಾಡಿ.. .. .. ."[೨೧]

ದುಃಖಿಸುತ್ತಾಳೆ; ಶಿವನಲ್ಲಿ ತನ್ನ ಕೊರಗನ್ನು ನಿವೇದಿಸುತ್ತಾಳೆ. ಆಗ ಅವಳ ಮುಪ್ಪಿನ ತಂದೆಯು ಶಿವನನ್ನು ನೆನೆ, ಶಿವಾರ್ಚನೆಗೆ ಚಿತ್ತವನ್ನು ಸೇರಿಸು" ಎಂದು ತಿಳಿಹೇಳುತ್ತಾನೆ. ತಂದೆಯ ಬೋಧನೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಹರವಿಯೊಡನೆ ಕೆರೆಗೆ ಬಂದು, ಮುಖ ಮರ್ಜನ ಮಾಡಿಕೊಂಡು, ಹೂ ಪತ್ರೆ ತೆಗೆದುಕೊಂಡು, ಶಿವಾರ್ಚಾನೆ ಮಾಡಿ ತನ್ನ ತಾಪತ್ರಯವನ್ನು ಶಿವನಲ್ಲಿ ಇಂತು ನಿವೇದಿಸುತ್ತಾಳೆ.

ದೇವ, ಭಕ್ತರ್ಗೆ ಮಾಡುವೊಡೆನಗೆಯನುವಿಲ್ಲ;

ದೇವ, ಬೆಸಕೈವಡೆನಗರ್ಥ ವೆಳ್ಳನಿತಿಲ್ಲ;

ಎಂತಕ್ಕೆ ದೊರೆಕೊಂಡಿತೀ ಯೌವ್ವನಂ ತಂದೆ;

ಇಂದು ಮೊದಲಾಗಿಯೆನ್ನಯ ಕಾಯವಂ ದೇವ;

ಬಂದ ಜಂಗಮಕ್ಕೊಪ್ಪುಗೊಡವೆನಿಂತಲೆ ದೇವ;

ಇದು ಸತ್ಯವೆಂದೆನುತೆ ನೇಮಮಂ ಕೈಕೊಂಡು "[೨೨]

ಶಿವಭಕ್ತಿಯಿಂದ ಬದುಕನ್ನು ಸಾಗಿಸುತ್ತಾಳೆ.

"ಬೇಟವಾ ಜಂಗಮಕೆ ಸುಖಪೂಜೆ ಲಿಂಗಕ್ಕೆ"[೨೩]

ಆಗಿ ಕೆಲ ವತ್ಸರಗಳನ್ನು ಕಳೆಯುತ್ತಾಳೆ. ಅವಳ ಭಕ್ತಿಯು ಶಿವನಿಗೂ ಪ್ರಿಯವಾಗುತ್ತದೆ. ಒಂದು ದಿನ ಸೋಮವಾರದೊಳು ನಿಂಬವ್ವೆಯು ಎಂದಿನಂತೆ ನೀರು ತರುವ ಕಾಯಕಕ್ಕೆ ಹೋಗಿ, ಶಿವಾರ್ಚನೆ ಮಾಡಿ, ನೀರು ಕೊಡವನ್ನು ಹೊತ್ತು, ಹೊಸ ಹರೆಯದೊಡನೆ ಬರುತ್ತಿರುವಾಗ ಒಬ್ಬ ಜಂಗಮನು ಅವಳನ್ನು 'ಅಪೇಕ್ಷಿಸಿ' ನೋಡುತ್ತಾನೆ. ಅವಳಲ್ಲಿ ಮನಸೋತು ಅವಳೊಡನೆಯೆ ಬರುತ್ತಾನೆ. ಅವರನ್ನು ಮನೆಗೆ ಹೋಗಲು ಸೂಚಿಸಿ ತಾನು ಕೊಡವನ್ನು ಇಳುಹಿ. ಜಂಗಮದ ಮುಂದೆ ಆಗಮಿಸುತ್ತಾಳೆ. ಶಂಕರಾ, ಶಶಿಧರ, ಗಿರಿಜಾ ವರಾ, ಕರುಣಿಸೆನಗೆ ಎಂದು ಪ್ರಾರ್ಥಿಸುತ್ತಾಳೆ.

ಶಿವಭಕ್ತರು ಯಾರೇ ಇರಲಿ, ಯಾರೇ ಬರಲಿ ಅವರನ್ನು ಭಕ್ತಿಯಿಂದ ಕಾಣುತ್ತಾಳೆ. ನೀರು ಹಾಕುವ ಕೆಲಸವಿಲ್ಲದಿರುವಾಗ, ಭತ್ತವನ್ನು ಕುಟ್ಟುತ್ತಾಳೆ. ಹೀಗೆ ಕಾಯಕ, ಶಿವಭಕ್ತಿ ಎರಡೂ ಆಕೆಯಲ್ಲಿ ವೃದ್ಧಿಗೊಳ್ಳುತ್ತವೆ. ಅವಳ ಅನುರಾಗವು ವೈರಾಗ್ಯವಾಗಿ ಪರಿಣಮಿಸುತ್ತದೆ. ಹೀಗಿರುವಾಗ ಅವಳ ತಂದೆ ಕೈಲಾಸ ವಾಸಿಯಾಗುತ್ತಾನೆ. ನಿಂಬವ್ವೆಯು ದುಃಖಿತಳಾಗಿ, ತಂದೆಯ ಸಂಸ್ಕಾರವನ್ನು ನೆರವೇರಿಸುತ್ತಾಳೆ. ಶಿವಭಕ್ತಿ ಭಾವದಿಂದ ಶಿವಾಲಯದಲ್ಲಿ ತಂದೆಯ ಮರಣದ ಸ್ಮರಣಾರ್ಥ ಗಣಪರ್ವವನ್ನು ಕೈಗೊಳ್ಳುತ್ತಾಳೆ. ಎಂದಿನಂತೆ ತನ್ನ ತೊತ್ತು ಕಾರ್ಯಕೈಗೊಂಡು ಪೂರೈಸುತ್ತಾಳೆ. ಒಂದು ದಿನ ಕೆರೆಯಲ್ಲಿ ಕೈಕಾಲು ತೊಳೆದುಕೊಂಡು ಶಿವಧ್ಯಾನಿಯಾಗಿ ದೇವಾಲಯಕ್ಕೆ ಬಂದು ಭಸಿತವನ್ನು ಧರಿಸಿ ಶಿವನಿಗೆ ನಮಸ್ಕರಿಸುತ್ತಾಳೆ. ಆಗ ಶಿವವೇಷದ ಭಕ್ತನಿಗೆ ತನುವನರ್ಪಿಸುತ್ತಾಳೆ.

ಇದನ್ನು ಕಂಡ ಪಾರ್ವತಿಯು ಶಿವನಿಗೆ ಇಂತು ಕೇಳುತ್ತಾಳೆ;

ದೇವ, ನೀವು ಸಿರದಿರ್ದ ಪಿರಿ, ಎನಗೆ ತಿಳಿಯದಿದು !

ಪುರುಷರಿಗೆ ನೀತಿಯೇ ? ಸ್ತ್ರೀಯರಿಗೆ ಲಕ್ಷಣವೇ ?

ನೀನು ನೋಡುತಿರ್ಪುದಿದು ಗುಣವೇ ?"[೨೪] ಎಂದು.

ಆಗ ಶಿವನು ಮನದಲ್ಲಿ ಲಜ್ಜಾರಸದ ಭಾವವನ್ನು ತಾಳಿ, ಶಿವಲಿಂಗದಿಂದ ಮುಖವನ್ನು ಪಡೆದು, ಆ ಭಕ್ತನಿಗೆ ಹೇಸಿಕೆಯಾಗುವಂತೆ, "ಎಲೆ, ನಿಂಬಿ, ಆನಿದ್ದೆಡೆಯೊಳು ಇಂತು ಮಾಳ್ಪದು ಉಚಿತವೇ" ಎಂದೆನ್ನುತ್ತಾನೆ. ಅದಕ್ಕೆ ನಿಂಬವ್ವೆಯು "ದೇವಾ ಜಗದ್ಚರಿತ, ನೀನಿಲ್ಲದೆಡೆಯುಂಟೆ ? ದೇವಾ ಈ ಸುಖದ ಕೈಕೊಂಬರ್ ಪೆಱರುಂಟೆ ?" ಎಂದು ಮರುಗಿ ಪ್ರಶ್ನೆಗೇಳುತ್ತಾಳೆ. ಶಿವನು ಪ್ರತ್ಯುತ್ತರವನ್ನು ಕಾಣದೆ ವರವನ್ನು ಕೇಳಿಕೊಳ್ಳಲು ಹೇಳುತ್ತಾನೆ. ಆಗ ನಿಂಬವ್ವೆಯು "ಶಿವನೇ ಈ ಸೋಮವಾರ ಮೊದಲಾಗಿ ಆ ಸೋಮವಾರಂಬರಂ ಏಳು ದಿನಂ ಲೋಕವಱಿಯೆ ಎನಗೆ ಕೈಲಾಸಂ ಸೂಱೆಗೊಡುವುದು" ಎಂದು ಕೇಳುತ್ತಾಳೆ. ಶಿವನು ಕೊಡುವುದಾಗಿ ಮೂರು ಬಾರಿ ನುಡಿಯುತ್ತಾನೆ. ಶಿವನು ಅವಳಿಗೆ ಮುಕುತಿಯನ್ನು ನೀಡಿದುದು ಲೋಕದಲ್ಲಿ ಪ್ರಖ್ಯಾತವಾಗುತ್ತದೆ. ಆಕೆಯ ಇಚ್ಛೆಯ ಮೇರೆಗೆ ಶಿವನು ನಿಂಬವ್ವೆಯನ್ನು ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಕೈಲಾಸಕ್ಕೆ ಬಂದ ಮೇಲೆ ನಿಂಬವ್ವೆಯನ್ನು ಕುರಿತು ಶಿವನು ಇಂತು ಹೇಳುತ್ತಾನೆ;

ನೋಡು ನಂದೀಶ, ನಿಂಬವ್ವೆಯತಿ ಭಕ್ತಿಯಂ;

ನೋಡು ಎನ್ನವರೊಳೊಂದಿದ ತೆಱನ ಭಕ್ತಿಯಂ;

ಕಾಮದಿಂ ನಿಷ್ಕಾಮಿಯಾದರೆನಿಂ ತುಂಟೆ ?

ಪ್ರೇಮದಿಂ ನಿಷ್ಪ್ರೇಮಿಯಾದರೇನಿಂತುಂಟೆ ?

ಲಜ್ಜೆನಾಚಿಕೆಯೆಂಬಿವಂ ತೊಱೆದರಿಂ ತುಂಟೆ ?

ಸಜ್ಜನ ವನೆನ್ನ ಭಕ್ತರ್ಗೆ ಮಾಡಿದರುಂಟೆ ?"[೨೫] ಎಂದು ಹೊಗಳುತ್ತಾನೆ.

ಇಂತಹ ಸನ್ನಿವೇಶಗಳು ಹರಿಹರನ ಕಥೆಯಲ್ಲಿ ಬರುವುದರಿಂದ ನಿಂಬಿಯಕ್ಕನ ರಗಳೆಯೂ ಹರಿಹರಕೃತವೆಂದೆನಿಸುತ್ತದೆ. ಅವಳು ಭೂಲೋಕಕ್ಕೆ ಬರುವ ಮುನ್ನ 'ಕಲ್ಪಕುಜೆ' ಎಂಬ ಹೆಸರು

ತಾಳಿದ್ದಳು. ಕೈಲಾಸದಲ್ಲಿ ಶಾಪಕ್ಕೆ ಗುರಿಯಾಗಿ 'ನೀಚಮೆನಿಸಿದ ನಿಂಬಿನಾಮದಿಂ ಭೂಚರರ ನಿಳಯಕ್ಕೆ ತೊತ್ತಾಗಿ' ಭೂಲೋಕದಲ್ಲಿ ಜನಿಸುತ್ತಾಳೆ. ನೀಚವೆನಿಸಿದ ಹೆಸರು' ಎಂದು ಒಂದೆಡೆ ಪಾರ್ವತಿಯ ಮೂಲಕ ಕವಿ ಈ ಮಾತನ್ನು ಬಳಸಿದ್ದಾನೆ. ಆಕೆಗೆ 'ನಿಂಬಿ', 'ನಿಂಬವ್ವೆ' ಎಂಬ ಹೆಸರುಗಳೂ ಇವೆ. ಅವಳು ಜನಿಸಿದ ಮೇಲೆ ಅವಳ ಮನೆತನಕ್ಕೆ ದಾರಿದ್ರ್ಯ, ದುಃಖಗಳು ಒದಗುತ್ತವೆ. ತಾಯಿ, ಸೋದರರು ಸಾಯುತ್ತಾರೆ; ಅವರಿಗೆ ಶಿವನು ತಿರಿದುಣ್ಣುವ ಸ್ಥಿತಿ ತಂದೊದಗಿಸುತ್ತಾನೆ; 'ಕೆಟ್ಟು ಪಟ್ಟಣ ಸೇರು' ಎಂಬ ಗಾದೆಗನುಸಾರವಾಗಿ ಅವಳು ತಂದೆಯೊಡನೆ ಹುಟ್ಟೂರನ್ನೆ ತೊರೆದು ಜೀವನ ನಿರ್ವಹಣೆಗೆ ಬೇರೊಂದು ಪಟ್ಟಣವನ್ನುಆಶ್ರಯಿಸಬೇಕಾಗುತ್ತದೆ. ಆಪಟ್ಟಣದ ಹೆಸರೂ ಕವಿಗೆ ಅಷ್ಟೊಂದು ಮಹತ್ವದ್ದಾಗಿ ಕಾಣಿಸಲಿಲ್ಲ. ತಂದೆಗೆ ಮುಪ್ಪಡಿಸುತ್ತದೆ; ತಿರಿಯುವುದಕ್ಕೊ ಆಗದಂತೆ ವೃದ್ಧಾಪ್ಯವೂ ಆವರಿಸುತ್ತದೆ. ಆದುದರಿಂದ ತಂದೆ-ಮಗಳು ಇಬ್ಬರು ಒಂದೆರಡು ಉಪವಾಸಗಳನ್ನು ಮಾಡುತ್ತಾರೆ.

ವೃದ್ಧಾಪ್ಯದಲ್ಲಿ, ಬಡತನದಲ್ಲಿ ನಿಂಬಿಯಕ್ಕನ ತಂದೆಗೆ ರೋಗ ಬಾಧಿಸುತ್ತದೆ; ಬೋಳು ತಲೆಯವನಿಗೆ ಅಣಿಕಲ್ಲ ಮಳೆಯೂ ಪೆಟ್ಟು ಬಿದ್ದಂತೆ ! – ಶಿವಾಜ್ಞೆ ಅವರನ್ನು ಇಂತಹ ದೀನಾವಸ್ಥೆಗೆ ತರುತ್ತದೆ. ತಂದೆಯು ನಿಂಬವ್ವೆಗೆ "ಹೇಗಾದರೂ ಮಾಡಿ ನನ್ನನ್ನು ಬದುಕಿಸು ನಿನ್ನನ್ನ ನಾನು ರಕ್ಷಿಸುತ್ತೇನೆ –ಎನ್ನುತ್ತಾನೆ. ಆಗ ನಿಂಬವ್ವೆಗೆ ದೊಡ್ಡ ಸಂಕಟ, ಪರ ಊರು; ಮೇಲೆ ಚಿಕ್ಕವಳು; ತಿರಿದುಕೊಂಡು ಬಂದು ಜೀವಿಸುವುದಕ್ಕೆ ಆಸೆ ಮಾಡದೆ, ಭವಿಯಪ್ಪ ಒಬ್ಬ ವಿಪ್ರನ ಮನೆಯಲ್ಲಿ ತೊತ್ತಾಗಿ ಅವನ ಮನೆಗೆ ನೀರು ಹಾಕುವುದು –ಮೊದಲಾದ ಕೆಲಸ ಮಾಡಿಕೊಂಡಿರುತ್ತಾಳೆ.

### ಕಷ್ಟವಿದ್ದರೂ ಶಿವಭಕ್ತಿ ಮರೆಯದಿರಿ

ನಿಂಬವ್ವೆಯು ತನಗೊರಗಿದ ಬಡತನದಲ್ಲಿಯೇ ಶಿವಭಕ್ತರ ಯೋಗ ಕ್ಷೇಮವನ್ನು ಮರೆತಿರುವುದಿಲ್ಲ, ಶಿವಭಕ್ತರಿಗೆ ಮಗಳಾಗಿ, ಭವಿಗಳಿಗೆ ತೊತ್ತುಗುವಂತೆ ಮಾಡಿದೆಯಲ್ಲ ಶಿವನೇ ಎಂದು ಮರಗುತ್ತಾಳೆ. ಅವಳ ತಂದೆ ಆಕೆಗೆ ಕಾಯಕ ಮಾಡುವ ಭರದಲ್ಲಿ ಶಿವಧ್ಯಾನ, ಶಿವಪೂಜೆ ಮರೆಯಬಾರದು ಎಂದು ನಿವೇದಿಸುತ್ತಾನೆ. ಅದೇ ಅವರಿಗೆ ರಕ್ಷಣೆಯ ಕೋಟೆ. ದೇವರಿಗೆ, ಭಕ್ತರಿಗೆ ಮಾಡುವೊಡೆ ಎನಗರ್ಥವಿನಿತಿಲ್ಲ' ಎಂದು ದೇವರಲ್ಲಿ ಮೊರೆಯಿಡುತ್ತಾಳೆ. ತನಗೆ ಯೌವ್ವನವು ಪ್ರಾಪ್ತವಾದುದರಿಂದ ಪರರ ಮನೆಯಲ್ಲಿ ಊಳಿಗವನ್ನು ಮಾಡಿ ಜೀವನವನ್ನು ಹೊರೆದುಕೊಳ್ಳುವುದು ಆಕೆಯ ಪಾಲಿಗೆ ಬಂದುದರಿಂದ ದೇವರಿಗೆ ಕುಂತುವಂ ಪೇರ್ದಿಸದೆ ಸುಖದೊಳಿರಿಸೆಲೆ ತಂದೆ ಎಂದು ಬೇಡಿಕೊಳ್ಳುತ್ತಾಳೆ. "ಇಂದು ಮೊದಲಾಗಿಯೆನ್ನ ದೇಹಮಂ ಜಂಗಮಕ್ಕೆ ಒಪ್ಪುಗುಡುವೆಂ"[೧೭]

ಪ್ರಾರ್ಥಿಸುತ್ತಾಳೆ. ಕಾಮಾರಿಗಲ್ಲದೆ ತನ್ನ ಶರೀರವನ್ನು ಅನ್ಯರಿಗೆ ಅರ್ಪಿಸಲಾಗದೆಂದು ಪ್ರತಿಜ್ಞೆಗೈಯ್ಯುತ್ತಾಳೆ. ಈ ಭಾಗವನ್ನು ಅವಳು 'ಮಾಟವಾ ಜಂಗಮಕ್ಕೆ ಕೂಟವಾ ಲಿಂಗಕ್ಕೆ' ಎಂಬ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾಳೆ. ಇಲ್ಲಿ ಶಿವಭಕ್ತಿಯ ಪರೀಕ್ಷೆ ಜಂಗಮ ರೂಪದಲ್ಲಿ ಬಂದಿದೆ.

ಶಿವನೇ ಜಂಗಮ ಎಂಬ ಆ ಭೇದ ಭಾವವೂ ಅವಳಲ್ಲಿದೆ, ಹರಿಹರ ಕವಿ ಲಿಂಗ-ಜಂಗಮ ಬೇರೆ ಎಂದು ತಿಳಿದಿಲ್ಲ. ಕಾಯಕ ನಿಷ್ಠೆ, ಶಿವಾರಾಧನೆ, ಜಂಗಮ ಭಕ್ತಿ, ಗಣ ಪರ್ವ- ಇವು ನಿಂಬವ್ವೆಯು ಬೆಳೆಸಿಕೊಂಡ ಗುಣಗಳಾಗಿವೆ. ಯಾವ ಕಾರ್ಯವನ್ನೆ ಮಾಡಲಿ, ಅಲ್ಲಿ ಶಿವನಿರುತ್ತಾನೆಂದು ಭಾವನೆ ನಿಂಬವ್ವೆಯಲ್ಲಿದೆ. ಆ ಕಾರಣದಿಂದಲೇ "ದೇವಾ, ಜಗದ್ಭರಿತ ನೀನಿಲ್ಲದೆಡೆಯುಂಟೆ ?" ಎಂದು ಕೇಳುತ್ತಾಳೆ. ಶಿವ ವೇಷದಲ್ಲಿ ಕಂಡ ಭಕ್ತ, ಜಂಗಮರು ಶಿವಸ್ವರೂಪಿಗಳೇ ಎಂದು ತಿಳಿದ ಮುಗ್ಧ ಮನಸ್ಸು ಈಕೆಯದು. ಆದುದರಿಂದ ಅವರಿಗೆ ಸರ್ವಸ್ವವನ್ನೂ ಅರ್ಪಿಸಿದರೆ ಅದು ಶಿವನಿಗೆ ಅರ್ಪಿಸಿದಂತೆ ಎಂದು ಅವರಿಗೆ ಅರ್ಪಿಸಲು ಈಕೆ ಹಿಂದು ಮುಂದು ನೋಡಳು, ಈಕೆ ಶಿವ ವೇಷದಲ್ಲಿ ಅಮಂಗಳವನ್ನು ಕಾಣಲಿಲ್ಲ. ನಿಂಬವ್ವೆಯು ಭಕ್ತಿಪರೀಕ್ಷೆಗೆ ಶಿವನು ಎಂದಿನಂತೆ ಭಕ್ತ, ಜಂಗಮ ಶಿವನೇ ಆಗಿದ್ದಾನೆ. ಅನ್ಯನಲ್ಲ. ಸರ್ವತ್ರ ಶಿವನನ್ನು ಕಾಣುವ ಅವಳ ದೃಷ್ಟಿ ದಿವ್ಯ ದೃಷ್ಟಿಯಲ್ಲದೆ ಮತ್ತೇನು ? ಬಸವಣ್ಣ ಸತಿ ಮಾಯಿದೇವಿ ಇಹಪಗೆಯಾಂಡರ ಪತ್ನಿ 'ಪತಿಹಿತವೆ'ಯರನ್ನು ಪರೀಕ್ಷಿಸಿದ ಶಿವನೇ, ನಿಂಬವ್ವೆಯನ್ನು ಪರೀಕ್ಷಿಸಿ ಸ್ವೀಕರಿಸಿದ್ದಾನೆ.

## ಹೋರಾಟದ ಬದುಕು ನಿಂಬವ್ವೆಯದು

ಶಿವಭಕ್ತಳಾದ ನಿಂಬಿಯಕ್ಕನದು ದೈನ್ಯದ ಬದುಕಲ್ಲ, ಸಾಹಸ ಪೂರ್ಣ ಬದುಕು ತನ್ನ ಕಷ್ಟಗಳನ್ನೆಲ್ಲ ತೋಡಿಕೊಳ್ಳಲು ತನ್ನವರೆಂಬುವರು ಯಾರು ಇರಲಿಲ್ಲ, ಭಕ್ತರಲ್ಲಿ ಯಾರೂ ಅವಳನ್ನು ಸ್ವೀಕರಿಸಲಿಲ್ಲ; ಆದುದರಿಂದ ಅವಳು ಭವಿಗಳ ಸೇವೆ ಎಸೆಗಬೇಕಾಯ್ತು. ದಾರುಣ ಬಡತನದಲ್ಲಿ ತನ್ನ 'ಶೀಲ'ವನ್ನು ಉಳಿಸಿಕೊಂಡು ಬಾಳುವುದು ಅವಳಿಗೆ ದುಸ್ತರವಾಗಿರಬೇಕು. ಇಂತಹ ಪರಿಸ್ಥಿತಿಯಲ್ಲಿ ಶಿವಭಕ್ತಿಯನ್ನು ಕಾಯಕದೊಡನೆಯೇ ಬೆಳೆಸಿಕೊಂಡು ನಿತ್ಯವೂ ಶಿವಾರಾಧನೆ ಮರೆಯದೆ ಮಾಡಿದವಳ ಬದುಕು. ಕಠಿಣ ಪರಿಸ್ಥಿತಿಯನ್ನು ಎದುರಿಸಲಾರದೆ ಅತ್ತು ಗೋಳಾಡಿದ ಮಗಳು ಇವಳಲ್ಲ, ಕಾಯಕವನ್ನು ಮಾಡಿ ಧರ್ಮದಿಂದ ನಡೆದ ಸ್ವಾವಲಂಬಿಯ ಬದುಕು. ತಂದೆ ತನ್ನ ಮಗಳನ್ನು ರಕ್ಷಿಸುವುದು ಅವನ ಕರ್ತವ್ಯವಾದರೂ ಮುಪ್ಪಿನ ತಂದೆ ರೋಗಗ್ರಸ್ತನಾದಾಗ ರಕ್ಷಿಸುವ ಬಗೆ ಹೇಗೆ ? ಶಿವನಿರ್ಮಿತ ಪ್ರಪಂಚದಲ್ಲಿ ಜೀವನದ ಕಷ್ಟಗಳನ್ನು ಶಿವನಡಿಯಲ್ಲಿರಿಸಿ ಬಾಳಿದರೆ ಬದುಕು ಬೆಲೆಯುಳ್ಳದ್ದಾಗುತ್ತದೆ ಎಂಬ ತತ್ವವನ್ನು ಈ ಸ್ತ್ರೀಯ ಕಥೆಯಿಂದ ಕಾಣಬಹುದು.

ಬಾಳಿದರೆ ಬದುಕು ಬೆಲೆಯುಳ್ಳದ್ದಾಗುತ್ತದೆ ಎಂಬ ತತ್ವವನ್ನು ಈ ಸ್ತ್ರೀಯ ಕಥೆಯಿಂದ ಕಾಣಬಹುದು. ಬಂದ ಕಾಯಕದ ಪ್ರತಿಫಲದಿಂದ ಗಣರಾಧನೆ ಮಾಡುತ್ತಿದ್ದುದೂ ಇದಕ್ಕೆ ಸಾಕ್ಷಿ, ಅವಳು ತಾನು ಮಿತ್ರ ತನ್ನ ಕರ್ತವ್ಯದಲ್ಲಿ ಚ್ಯುತಿ ಮಾಡಿಕೊಳ್ಳದೆ ಬಾಳಿದ್ದಾಳೆ; ಆದುದರಿಂದ ಧೀರೆ. ತಾನು ಮದುವೆಯಾಗಿ ಬೇರೊಂದು ಮನೆಯಲ್ಲಿ ಸುಖವಾಗಿ ಬಾಳುವ ಯೋಚನೆಯನ್ನಿರಿಸಿಕೊಳ್ಳದೆ ತಂದೆಯನ್ನು ಸಲುಹಬೇಕೆಂಬ ಕೈಗೊಂಡ ನಿರ್ಧಾರ ಅತ್ಯಂತ ಸಂಯಮಿಯ ಧೀರ ನಿರ್ಧಾರವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು.

## ಅತಿ ಮುಗ್ಧೆ ತಿರುಮುಡಿಯೊಡೆಯಳು

ಈ ಕುಮಾರಿಯ ಕಥೆಯನ್ನು ಹರಿಹರ ಕವಿಯು 'ಮಾನಕಂಜರು' ಎಂಬ ಶಿವಶರಣನ ಚರಿತ್ರೆಯನ್ನು ಹೇಳುವಲ್ಲಿ ವಿವರಿಸಿದ್ದಾನೆ. ಮಾನಕಂಜರರನ್ನೆ ಪ್ರಮುಖವಾಗಿ ಕವಿಯು ವರ್ಣಿಸಿದ್ದರೂ ತಿರುಮುಡಿಯೊಡೆಯಳ ವಿವರಗಳನ್ನು ತಿಳಿಸಿದ್ದಾನೆ. ಕವಿಯು ಈ ವ್ಯಕ್ತಿಯ ವ್ಯಕ್ತಿತ್ವವನ್ನು ಸಾಕಷ್ಟು ಹಿಗ್ಗಿಸದಿದ್ದದು ಒಂದು ಕೊರತೆ: ಇದೊಂದು ಗೌಣಪಾತ್ರವೆನ್ನಬಹುದು. ಚೋಳ ದೇಶದಲ್ಲಿ 'ಕಂಜಾಜು' ಎಂಬ ಪುರದಲ್ಲಿ ಒಬ್ಬ ಶಿವಭಕ್ತ. ಆತನಿಗೆ ಸತ್ಯವೇ ತಾಯಿ; ಶಿವಜ್ಞಾನವೇ ತಂದೆ; ದಯೆ–ಧರ್ಮಗಳೇ– ಒಡಹುಟ್ಟಿದವರು. ಅವನ ಹೆಸರು ಮಾನಕಂಜರು. ಒಳ್ಳೆಯ ಸಿರಿವಂತನಾಗಿಯೇ ಜನಿಸಿದ್ದಾನೆ. ತನ್ನ ಸಂಪದವೆಲ್ಲ ಶಿವಭಕ್ತಿಗೆ ಎಂಬ ಮನೋಭಾವದ ವ್ಯಕ್ತಿ.

ರಾಜರಿಗಿಲ್ಲದ ಗೌರವವು ಶಿವಭಕ್ತರಿಗೆ ಅವನಿಂದ ದೊರೆಯುತ್ತಿತ್ತು. ತನುಮನ ಧನವನ್ನು ಮಾತ್ರವಲ್ಲದೆ ತನ್ನನ್ನೆ ಕೊಡುವಂತಹ ಭಕ್ತಿ. ಭಕ್ತರಿಲ್ಲದಿದ್ದರೆ ದುಃಖಪಡುವ ಸ್ವಭಾವ ಅವನದು. ನಿತ್ಯವೂ ಕಂಜಾರ ದೇವರಿಗೆ ಪೂಜೆ ಸಲ್ಲಿಸುತ್ತಿದ್ದದು.ಅಲ್ಲಿ ದೇವರನ್ನು, ಮುತ್ತು, ಮಾಣಿಕಗಳಿಂದ ಅಲಂಕರಿಸಿ ಪೂಜೆ ಸಲ್ಲಿಸುತ್ತಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಆದುದರಿಂದ ಅವನ ಅರಸಿ "ಮಗನೊಬ್ಬನನ್ನು ದೇವರಲ್ಲಿ ಬೇಡಬೇಕು" ಎಂದು ಸೂಚಿಸುತ್ತಾಳೆ. 'ಮಂಗಳ ಚರಿತ್ರನಾದ ಪುತ್ರನನ್ನು ಬೇಡಿರಿ' ಎನ್ನುತ್ತಾಳೆ. ಆಗ ಶಿವಶರಣನು ದೇವರು ಬೇಳ್ಬುದಂ ಕಲಿವರೇ ? ಬಲ್ಲವಂ ಬೇಡಲಾಗದು; ಮಾಡಿತೆಲ್ಲವು ನೋಡುತಿರ್ಪಂ ಶಂಭುಂ; ಶಿವನಿರಿಸಿದಂತಲ್ಲದೆ ಬೇರೆ ಇರುವುದಂತೆ ? ಎಂದೆನ್ನುತ್ತಾನೆ. ಆದರೂ ವನಿತೆ ಕೇಳಲಿಲ್ಲ ಆದುದರಿಂದ ಮಾನಕಂಜರು ತನ್ನ ಅರಸಿಯರ ಇಚ್ಚೆಯನ್ನು ಪೂರೈಸಲು ಶಿವಾಲಯಕ್ಕೆ ಬಂದು ಪೂಜೆ ಮಾಡಿ ಶಿವನನ್ನು ಬೇಡುವ ಉದ್ದೇಶದಿಂದ ಕೂಡಿ, ಒಲ್ಲದ ಮನದಿಂದಲೇ ಭಯದಿಂದ, ಕುಗ್ಗಿ, ಪುತ್ರನನ್ನು ಕೇಳುವುದನ್ನು ಮರೆತು ಪುತ್ರಿಯು ಕೊಡುದೇವಾ ಎಂದು ಕೈಮುಗಿದು'೨೯ ಪ್ರಾರ್ಥಿಸಿ, ತೀರ್ಥ ಜಲವನ್ನು ಸ್ವೀಕರಿಸಿ ಬರುತ್ತಿರುವ

ಸಮಯದಲ್ಲಿ ಶಿವನು ತನ್ನ ಜಡೆಯ ಗಂಗೆಯಲ್ಲಿಯ ಕಮಲವನ್ನು ಆತನ ಕೈಯಲ್ಲಿರಿಸುತ್ತಾನೆ. ಲಲನಾ ಜಲಬೀಜವನ್ನು ದಯಪಾಲಿಸುತ್ತಾನೆ. ಅದನ್ನು ಮನೆಗೆ ಬಂದು ತನ್ನ ವನಿತೆಗೆ ನಿವೇದಿಸುತ್ತಾನೆ; ಇಂದುಮುಖಿ ಸಂತಸ ತಾಳುತ್ತಾಳೆ. ಶಿವಪ್ರಸಾದಿಂದ ವನಿತೆಗೆ ಗರ್ಭವು ನಿಂತು, ಕುಮಾರಿಯನ್ನು ಹಡೆಯುತ್ತಾಳೆ. ಹೆಣ್ಣುಕೂಸು ಜನಿಸಿದರೂ ಮಾನಕಂಜರು ದಾನವೀಯುತ್ತಾರೆ. ಮಗಳಿಗೆ "ತಿರುಮುಡಿಯೊಡೆಯಳು" ಎಂದು ಹೆಸರಿಡುತ್ತಾರೆ. ಚಂದ್ರಕಳೆಯಂತೆ, ಕಲ್ಪಲತೆಯಂತೆ, ತರುಣಿಯು ಬಾಲ್ಯವನ್ನು ದಾಟಿ ಥಳಥಳಸಿ ಬೆಳೆಯುತ್ತಾಳೆ. ಹದಿನಾಲ್ಕು ವರುಷಗಳು ತುಂಬುತ್ತವೆ. ಯೌವ್ವನವು ಪ್ರಾಪ್ತವಾಗುತ್ತದೆ. ಸರ್ವಾಂಗ ಸೌಂದರ್ಯದಿಂದ ಕಂಗೊಳಿಸುತ್ತಾಳೆ.

ಇತ್ತ ಚೋಳರಾಜನು ತನ್ನಮಗನಿಗೆ ಕನ್ನೆಯನ್ನು ನೋಡುತ್ತಿರಲು, ವಾರ್ತಾಪರಂಪರೆಯಿಂದ ತಿರುಮುಡಿಯೊಡೆಯಳ ಸೌಂದರ್ಯವನ್ನು ಚಾರರಿಂದ ತಿಳಿದು, ಮಂತ್ರಿಗಳನ್ನು ಮಾನಕಂಜರರಲ್ಲಿಗೆ ಬೇಡಿ ಅಟ್ಟುತ್ತಾನೆ. ಮಾನಕಂಜರರು ಮಗಳನ್ನು ಕೊಡಲು ಒಪ್ಪಿದಾಗ ಮಂತ್ರಿಗಳು ಸಂತೋಷದಿಂದ ಹೋಗುತ್ತಾರೆ. ಮಾನ–ಕಂಜರರ ಮನೆಯಲ್ಲಿ ಮದುವೆಯ ಮಂಟಪವು ಸಿದ್ಧವಾಗುತ್ತದೆ. ಮುತ್ತಿನ ಮೇಲ್ಕಟ್ಟು, ಮಕರ ತೋರಣಗಳಿಂದ ಅಲಂಕೃತವಾದ ಹೊನ್ನಿನ ವಿವಾಹ ವೇದಿಕೆಯೂ ರಚನೆಯಾಗುತ್ತದೆ. ಗಳಿಗೆ ಬಟ್ಟಲ ಬರುತ್ತವೆ. ಸುಹಾಸಿನಿಯರೂ ಆಗಮಿಸುತ್ತಾರೆ. ಶಿವಾಚಾರ್ಯರು ಆಗಮಿಸುತ್ತಾರೆ. ತಿರುಮುಡಿಯೊಡೆಯಳು ಸಿಂಗಾರವಾಗಿ ಮದುವೆಗೆ ಸಿದ್ಧವಾಗುತ್ತಾಳೆ.

ಚೋರಾಜನು ಸಕಲ ಸಂಭ್ರಮದಿಂದ ಸಿದ್ಧವಾಗಿ ಮಗನ ಮದುವೆಗೆ ಆಗಮಿಸುತ್ತಾನೆ. ಮದುವೆ ಮಂಟಪವು ಸುಹಾಸಿನಿಯರು, ಮಕುಟವರ್ಧನರು, ರಾಜಕುಮಾರರು, ಮಂತ್ರಿಗಳು, ಮನ್ನೆಯರಿಂದ ಕಿಕ್ಕಿರಿದು ತುಂಬಿರುತ್ತದೆ.ಕವಿಗಳು,ಗಮಕವಾಗ್ಮಿಗಳು ಅಲ್ಲಿರುತ್ತಾರೆ. ಆಗ ನವರತ್ನಗಳಿಂದ ವಿರಚಿತವಾದ ದಂಡೆಯಿಂದ ಹಸೆಮಣೆ ಮೇಲೆ ಆಗಮಿಸುತ್ತಾಳೆ. ಆಗ ಪುರಹರನು ಭಕ್ತರ ಮನದ ಪರೀಕ್ಷಾರ್ಥವಾಗಿ, "ಮಾನಕಂಜರನ ಮಗಳ ಮುಡಿಯಂ ಬೇಡುವೆಂ"[೨೭] ಎಂದು ನಿರ್ಧರಿಸಿ, ಭೀಕ್ಷುವೇಷವ ಧರಿಸಿ" ಮಾನಕಂಜರನ ಮನೆಗೆ ಅವತರಿಸುತ್ತಾನೆ. ಕಪಟ ನಾಟಕ ಸೂತ್ರದಾರಿಯು ನೊಸಲ ಭಸಿತ, ಮೇಯ್ಯ, ರುದ್ರಾಕ್ಷಿ, ದಂತಹ ಚೆನ್ನಪಾವುಗೆಯಿಂದ ಮದುವೆ ಮಂಟಪದೊಳಗೇ ಆಗಮಿಸುತ್ತಾನೆ. ಮಾನ ಕಂಜರನು ಇವನನ್ನು ಕಂಡು ಗದ್ದುಗೆಯಿಂದ ಇಳಿದು, ಪೊಡಮಟ್ಟು, ಕೈಗೊಟ್ಟು ಬಂದು ಗದ್ದುಗೆ ಮೇಲೆ ಕುಳ್ಳಿರಿಸಿ ಪಾದಗಳನ್ನು ತೊಳೆದು ಸಂತೋಷಭರಿತ ಚಿತ್ತನಾಗಿ ಕಂಡೆಂದು ಮೌಳಿ ಬಂದುದ ಬೆಸಸು"[೨೮] ಎಂದು ಕೇಳಲು ನೀವು ವಿವಾಹದ ಮಂಗಳ ಕಾರ್ಯದಲ್ಲಿ ತೊಡಗಿದ್ದೀರಿ; ಈಗ ನಾನು ಬೇಡುವುದನ್ನು ಕೇಳಲಾಗದು; ಮದುವೆಯಾಗಲಿ ಆಮೇಲೆ ಬರುತ್ತೇವೆ" ಎನ್ನುತ್ತಾನೆ. ಆಗ ಮಾನಕಂಜರರು ನೀವು ಒಲಿದು

ಬಂದುದೇ ಸರ್ವಸ್ವ; ಬೇಡಿದುದೇ ಮಂಗಳಂ ಎಂದುದಲ್ಲದೆ;

ನೀವೊಲಿಯೆ ಮಿಕ್ಕಿನಮರ್ಮುಳಿದು ಮಾಡುವುದುಂಟೆ ?

ನೀವು ಮುಳಿಯಲ್ಮಿಕ್ಕರೊಸೆದು ಮಾಡುವುದುಂಟೆ ?

ಕರುಣಿಪುದು ಚಿತ್ತದೊಳಗಿಪ್ಪುದಂ ಬೇಡುವುದು;

ಶಿವಭಕ್ತರೆನ್ನುವಂ ಬೇಳ್ಪುದಂ ಪಡೆದನೇ ? –"೨೯

ಎನ್ನುತ್ತಾನೆ. ಅದಕ್ಕೆ ಶಿವನು ನಿನಗೆ ತೊಂದರೆಯಾಗಿದ್ದಲ್ಲಿ, "ಎಮ್ಮ ಹಾವುಗೆ ಬೆರಲನೊತ್ತದಂತಿರೆ, ನಿಮ್ಮಯ ಮಗಳ ಮುಡಿಯ ಕೂದಲು ಅತ್ಯಂತ ಮೃದು; ತಂದಿಕ್ಕಬೇಳ್ಪುದು" ಎಂದಾಗ ಮಾನಕಂಜರರು ಉತ್ಸಾಹದಿಂದ 'ಉಳ್ಳುದಂ ಕುಡುವುದಕೆ ಉಪಚಾರಬೇಕೆ ?" ಎಂದು ಕುಳಿತ ಭಕ್ತರಿಗೆ ಕೈಕೊಡುವ, ಜನಸ್ತೋಮ, ಚೋಳಭೂಪಾಲ, ನೋಡುತ್ತಿದ್ದಂತೆಯೇ, ಸುತೆಯನೀಕ್ಷಿಸಿ ನಿಂದು ದಂಡೆ ತೊಂಡಲಂಗಳ ನೂಕಿ, ಚಂಡಿಕೆವಿಡಿದು ಮಗಳನ್ನುದ್ಧರಿಸುವಂತೆ ಎಡ ಕೈಯಿಂದ, ಭಕ್ತಿಯಿಂದ ಮುಡಿಯನ್ನಿಡಿದು ಬಂದ ನೆರವಿ, ಚೋಳಭೂಪರು, ಕೌತುಕ ಪಡುತ್ತಿದ್ದಂತೆಯೇ ಕಠಾರಿಯಿಂದ ಮುಡಿಯನ್ನು ಕೀಳುತ್ತಾನೆ ! ಗಿಡದಿಂದ ಕುಸುಮವನು ಕೀಳುವಂತೆ, ಪೂವಿನಿಂದ ಪರಿಮಳ ತೆಗೆದಂತೆ ತಿರುಮುಡಿಯೊಡೆಯಳಿ ಮುಡಿಯಳ ಕೂದಲನ್ನು ಕಿತ್ತು ಶಿವನಡಿಯಲ್ಲಿಡುತ್ತಾನೆ. ಆಗ ಪರಮೇಶ್ವರನು ನಿಜರೂಪವನ್ನು ತೋರುತ್ತಾನೆ. ಆಗ ಶಿವನು ಪಾರ್ವತಿಯರಿಗೆ "ಹಸೆಯ ಮೇಲಣ ಮಗಳ ಮುಡಿಯನಿತ್ತುದನ್ನು ತಿಳಿಸಿ ಭಕ್ತಿರಿಗೆ ಶಿವನೇ ಒಡವೆ, ಶಿವನೇ ಸದ್ಭಕ್ತರೇ, ಒಡವೆಯೆಂದು ತಿಳಿಸುತ್ತಾನೆ. ಮಾನಕಂಜರನ ಸತಿಸುತೆ ಸಹಿತ ಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ಕರೆದೊಯ್ಯುತ್ತಾನೆ.

## ಚೋಳಿಯಕ್ಕ

ಚೋಳಿಯಕ್ಕ ತೆಲುಗು ನಾಡಿನ ಕುಮಾರಿ, ದ್ರಾಕ್ಷಾರಾಮ ಕ್ಷೇತ್ರದಲ್ಲಿ ನಡೆದ ಕಥೆ. ಕವಿಯು ಈ ಕುಮಾರಿಯ ಚರಿತ್ರೆಯನ್ನು "ದಿವ್ಯ ಚರಿತ್ರೆ" ಎಂದು ಕರೆದಿದ್ದಾನೆ. ಯಾಕೆಂದರೆ ಚಿಕ್ಕಂದಿನಲ್ಲಿಯೇ ಅವಳ ಮನಸ್ಸು ಭಗವಂತನ ಮೇಲಿದೆ; ಅವಳು ಇಪ್ಪತ್ತು ವರ್ಷದ ಕನ್ನೆ. ಮದುವೆಯಾಗಿ ಗಂಡನ ಮನೆಗೆ ಹೋಗುವ ಯೌವ್ವನದ ಕಾಲ. ಈ ಕಾಲದಲ್ಲಿ ಅವಳ ಸರ್ವ ಆಸೆಗಳೆಲ್ಲ ಭೀಮೇಶನ ಮೇಲಿಯೇ. ಅವಳ ಸರ್ವೇಂದ್ರಿಯಗಳಲ್ಲಿ ಭೀಮೇಶನೇ ವಾಸಿಸಿದ್ದನು. ನೋಡುವ ವಸ್ತು, ಹೀರುವ

ರುಚಿ– ಮೊದಲಾದವುಗಳೆಲ್ಲಾ ಶಿವಾರ್ಪಣ. ಈ ಭಾಗವೇ ಅವಳಲಿ ಬೆಳೆದ ಹಿರಿಯ ಗುಣ. ಈಶ್ವರಾತಿತವಾಗದ ಯಾವ ವಸ್ತುವನ್ನು ಸ್ವೀಕರಿಸುತ್ತಿದ್ದಿಲ್ಲ ಉತ್ತಮವಾದುದೆಲ್ಲವನ್ನು ದೇವರಿಗೆ ಅರ್ಪಿಸುವ ಅರ್ಪಣಾಭಾವ ಅವಳದು. ಚೋಳಿಯಕ್ಕ ಜನಿಸಿದುದು ಉತ್ತಮ ಮನೆತನದಲ್ಲಿ. ಆಕೆಯು ಸೂತಕದ ಕಾರಣದಿಂದಾಗಿ ಭೀಮೇಶನ ದರುಶನ ಪಡೆಯಲು ಸಾಧ್ಯವಾಗಲಿಲ್ಲವೆಂದು ರುಚಿರುಚಿಯಾದ ಪಕ್ವಾನ್ನಗಳನ್ನು ಭೀಮೇಶನಿಗೆ ಅರ್ಪಿಸಲು ತಟ್ಟೆಯಲ್ಲಿ ಕಳಿಸುತ್ತಾಳೆ. ಅವಳ ಸೂತಕದ ದಿನಗಳೇ ಅವಳಿಗೆ ದೈವಾನುಗ್ರಹ. ದೈವಸಾಕ್ಷತ್ಕಾರಕ್ಕೆ ಕಾರಣವಾದವು. ಅವಳು ಸೂತಕಹೊಂದುವುದಕ್ಕೂ ದೇವತ ಬಗೆಗೆ ಶುದ್ಧಮನಸ್ಸಿಗೂ ಯಾವ ಸಂಬಂಧವೂ ಇಲ್ಲವೆನ್ನುವ ರೀತಿಯಲ್ಲಿ ಕವಿಯು ಈ ಕಥೆ ಬರೆದಿದ್ದಾನೆ. ಶರೀರ ಮನೆಯಲ್ಲಿ; ಮನಸ್ಸು ಭೀಮೇಶ ದೇವಾಲಯದಲ್ಲಿ.

ಏನು ಭೀಮಾಯಿ, ನೀಲ ಹೋದ ಹದನಂ ಹೇಳು;

ತಾನುವಾರೋಗಿಸದೆ ತಡಮಾಡಿದನೊ ?"[೩೦]

ಎನ್ನುತ್ತಾಳೆ. ಚೋಳಿಯಕ್ಕನಿಂದಾಗಿ, ಸಹವಾಸದ ಫಲವೆನ್ನುವಂತೆ, ಆಕೆಯ ಆಳು ಭೀಮಿಗೂ ದೈವಾನುಗ್ರಹ, ದೇವರ ದರ್ಶನ ಸಾಧ್ಯವಾಯಿತು.

ದೇವರ ಅನುಗ್ರಹಕ್ಕೆ ಈ ಇಬ್ಬರೂ ಪಾತ್ರರಾಗಬೇಕಾದರೆ ಅವರ ಸುಸಂಸ್ಕೃತ ಶುದ್ಧಮನಸ್ಸು, ಸಂಸ್ಕಾರಗೊಂಡು ಪರಿಪಾಕಲಾದ ಆತ್ಮಗಳೇ ಕಾರಣ. ವಯಸ್ಸಿನಲ್ಲಿ ಕಿರಿಯರಾದರೂ ಸಾಧಿಸಿದ ಸಿದ್ಧಿ ಹಿರಿದು. ಆರಾಧಿಸುವ ಮನಸ್ಸು ಶುದ್ಧವಿರುವಾಗ ಬಾಹ್ಯಶರೀರದ ಸೂತಕವು ದೇವರ ಎದುರಿನಲ್ಲಿ ಯಾವ ದುಷ್ಪಾರಿಣಾಮವನ್ನು ಉಂಟುಮಾಡದು ಎಂಬ ತತ್ವವನ್ನು ಇಲ್ಲಿ ಕವಿ ಪ್ರತಿಪಾದಿಸಿದ್ದಾನೆ. ಈ ಕಾರಣದಿಂದಲೇ "ಭಕ್ತಿಪಂಥದ ಶಿವಶರಣರು" ಸೂತಕಗಳನ್ನು ಅತ್ತೆಸೆದಂತೆ ಕಾಣುತ್ತದೆ. ವಯಸ್ಸಿನಲ್ಲಿ ಕೋಳೂರು ಕೊಡಗೂಸಿಗಿಂತ ಹಿರಿಯಳಾದರೂ ಅಭಿಲಾಷೆಯಲ್ಲಿ, ಮನಶುದ್ಧಿಯಲ್ಲಿ ಆಕೆಯಂತೆಯೇ. ನಿತ್ಯ ಲಿಂಗಾರ್ಚನೆ, ಜಂಗಮಾರ್ಚನೆ, ಆಕೆಯ ವ್ರತಗಳು, ಕವಿಯು ಆಕೆಯನ್ನು ಪರಸಿ ಜಾನನೆ; 'ಹರಿಲೋಚನೆ' ಎಂದು ಕರೆದು ಅವಳ ಸೌಂದರ್ಯವನ್ನು ಸೂಚಿಸಿದ್ದಾನೆ. ಚೋಳಿ, ಶಿವನಿಗೆ ಆಹಾರದ್ರವ್ಯಗಳನ್ನು ಇಟ್ಟು ಕಳಿಸುವುದೇ ಸೊಗಸು. ತನಗಾಗಿ ಮನೆಯವರು ಮಾಡಿದ ಅಡುಗೆ ಇಟ್ಟಗೂ ಬಂದಿದೆ ? ಬಾಯಿಯವರೆಗೂ ಬಂದಿದೆ. ಆಗ ಶಿವನಿಗೆ ಸಲ್ಲಿಸದೆ ತಾನು ಸ್ವೀಕರಿಸಬಾರದೆಂದು ಕೈಯ ತುತ್ತನ್ನೂ ಹಿಂದೆಗೆಯುತ್ತಾಳೆ. ಶಿವನು ಪ್ರೇಮಪೂರಿತನು; ಅವನಿಗೆ ಅರ್ಪಿಸದೆ ತುತ್ತಿಡುವುದು ಹೇಗೆ ?

ಭೀಮಿ ಹೋದಾಗಲೂ ದೇವಾಲಯದಲ್ಲಿ ಸಾಕಷ್ಟು ಜನರಿದ್ದಾರೆ. ಭೀಮಿಯು ದೇವಾಲಯದ ಒಳಗೆ ಹೋಗದೆ ಜಲಧಾರೆಯ ಬಳಿಯಲ್ಲಿಯೇ ನಿಂದು, ಶಿವನನ್ನು ಕರೆದು ಅಡುಗೆಯನ್ನು ಅರ್ಪಿಸುತ್ತಾಳೆ. ಭೀಮಿಯು ಶಿವನಿಗೆ, ಶಿವನೇ, ಅಕ್ಕನು ಅಡುಗೆಯನ್ನು ಮಾತ್ರವಲ್ಲ ರುಚಿಯನ್ನೂ, ಶುದ್ಧ ಮನವನ್ನೂ ಕಳಿಸಿದ್ದಾಳೆಂದು ನಿವೇದಿಸುತ್ತಾಳೆ. ಶಿವನ ದರ್ಶನ ಪಡೆಯುತ್ತಾಳೆ. ತಿರುಗಿ ಹೋಗುವುದೊಂದೆ ತಡ, ಬಾಗಿಲಲ್ಲಿಯೇ ಚೋಳಿಯಕ್ಕನು ಭೀಮಿಯ ಬರವಿಗಾಗಿ ಕಾಯ್ದಿರುತ್ತಾಳೆ. ಅಂತಹ ಹಂಬಲದ ಮನಸ್ಸು ಅವಳದು. ಹರಿಹರಕವಿ ಈ ಕಥೆಯಲ್ಲಿಲ್ಲದೆ ಇತರವೂ" ಈ ಕುವರಿಯ ಹೆಸರನ್ನು ಪ್ರಶಂಸಿಸುತ್ತಾನೆ. ಚೋಳಿಯಕ್ಕನ ಗುಣಗಳನ್ನು ತನಗೂ ದಯಪಾಲಿಸಲು ಶಿವನಲ್ಲಿ ಪ್ರಾರ್ಥಿಸಿಕೊಳ್ಳುತ್ತಾನೆ. ನೈವೇದ್ಯದ ಮೂಲಕ ಶಿವಾನುಗ್ರಹ ಸಂಪಾದಿಸಿದಳು. ಶಿವಭಕ್ತಿಗೆ ಪೂರ್ವ ಜನ್ಮ ಸಂಸ್ಕಾರವೇ ಮುಖ್ಯ. ಸ್ತ್ರೀಯರಿಗೆ ಇರುವ ಶಾರೀರಿಕ ಸೂತಕಾದಿಗಳಿಗೂ ಶಿವಭಕ್ತಿಗೂ ಯಾವುದೇ ಸಂಬಂಧವಿಲ್ಲವೆನ್ನುವಂತೆ ಕವಿ ಈಕೆಯ ಕಥೆ ನಿರೂಪಿಸಿದ್ದಾನೆ.೩೧

## ೨. ಪ್ರಿಯತಮೆಯರು

ಹರಿಹರನು ತನ್ನ ಕಾವ್ಯಗಳಲ್ಲಿ ೬-೭ ಜನ ಶಿವಶರಣೆಯರನ್ನು ಪ್ರಿಯತಮೆಯರು ಎಂದು ಕರೆದಿದ್ದಾನೆ. ನನ್ನ ಅಧ್ಯಾಯನ ಅನುಕೂಲಕ್ಕಾಗಿ ಹಲವರನ್ನು ಮಾತ್ರ ಆಯ್ಕೆ ಮಾಡಿಕೊಂಡು ಚಿತ್ರಿಸಲು ಯತ್ನಿಸಿದ್ದಾನೆ.

## ಮಲುಹಣಿ

ಮಹಾದೇವಿಕ್ಕನ ರಗಳೆಯಲ್ಲಿ ಹರಿಹರ ಮಲುಹಣಿಯನ್ನು "ಪರಮಸುಖಿ" ಎಂದು ಕರೆದಿದ್ದಾನೆ.[೨೫] ಪರಮೇಶ್ವರನೊಡತಣ ಸುಖ. ಶಿವಾನುಭವದ ಸುಖ. ಶರಣರೊಡತಣ ಸುಖವೇ 'ಪರಮಸುಖಿ'ವೆಂದು ಮಹಾದೇವಿಯಕ್ಕ ಅಭಿಪ್ರಾಯಪಡುತ್ತಾಳೆ. ಮಲುಹಣಿ ಕಾಶ್ಮೀರದೇಶದ ಅಧೀದೈವವೆನಿಪ 'ವಿಜಯೇಶ್ವರ'ನ ಪಾತ್ರದ ವಿಳಾಸಿನಿ; ಪದ್ಮಾವತಿಯ ಚಿತ್ರತರ. ಮಧುರಮಯ' ನಾಟಕ ಕಲಾವತಿಯ ಎಸೆವ ಬಸುರೊಳು ಬಂದು, ಶಿವಾನುಭವವನ್ನು ತಾಳಿ, ಕುಸುಮಬಾಣನ ಕೀರ್ತಿ ಬೆಳೆಯುವಂತೆ ಸೌಂದರ್ಯವತಿಯಾಗಿ ಬೆಳೆಯುತ್ತಾಳೆ. ಮಲುಹಣಿಯ ಸರ್ವಾಂಗಗಳ ಸೌಂದರ್ಯ, ಸೌಭಾಗ್ಯಲತೆಯಂತಹ ಶರೀರ, ಇಕ್ಷುಚಾಪದಂತಹ ಭ್ರೂಲತೆ, ಸರಸಿಜಶ್ರೀಯಂತಿರುವ ಲೋಗ– ಈ ಮೊದಲಾದವು ಮಗಳಿಗೆ ಒದಗಿದರೆ. ವೇಶ್ಯೆಯಾದ ತಾಯಿಗೆ ಸಂತಸವಾಗದಿದ್ದೀತೇ ? ಮಲುಹಣಿಯ ನವ ಯೌವ್ವನದ ನೆಲೆಗೆ ಮನದೊಳಗೆ ನಿವಾಳಿದೆಗೆದು, ಕಣ್ಣಿನಿಂದ ದೃಷ್ಟಿ ತೆಗೆದು, ಆಕೆಯಲ್ಲಿ ನವಲಾಸ್ಯವನ್ನು ಮೆಯ್ಗೊಳಿಸಿ, ಸಂಗೀತವನ್ನು ಕಲಿಸಿ ಅತಿ ತೃಪ್ತಿಯಿಂದ

ಮಲುಹಣಿಯನ್ನು ಅವಳ ತಾಯಿ ರಕ್ಷಿಸಿಕೊಂಡು ಬರುವ ಸನ್ನಿವೇಶವನ್ನು ಹರಿಹರ ಚೆನ್ನಾಗಿ ವರ್ಣಿಸಿದ್ದಾನೆ. ಸರ್ವಸೌಂದರ್ಯ ಪುಷ್ಪಳಾಗಿ ಬೆಳೆದ ಮಗಳನ್ನು ತಾಯಿ ಪದ್ಮಾವತಿ, ವಿಜಯೇಶ್ವರ ದೇವರ ಸೇವೆಗೆಂದು ಸರ್ವಾಲಂಕಾರ ಮಾಡಿಸಿಕೊಂಡು ಕರೆತರುತ್ತಾಳೆ. ಆ ಊರ ಪ್ರಸಿದ್ಧ ಸಿರಿವಂತ ಬ್ರಾಹ್ಮಣನ ಮಗ ಸುಂದರವಾದ ಮಲುಹಣನು ಸರ್ವಾಲಂಕಾರಿತವಾಗಿ ವಿಜಯೇಶ್ವರ ದೇವಾಲಯಕ್ಕೆ ಆಗಮಿಸುತ್ತಾನೆ. ಈ ಸಂದರ್ಭದಲ್ಲಿ ಪ್ರೇಮಬೆಳೆದು ಹೆಮ್ಮರವಾಗುತ್ತದೆ.

ಮಲುಹಣಿ ವೆಶ್ಯೆಯಾದ ಪದ್ಮಾವತಿಯ ಮಗಳು. ಕುಲದಿಂದ ವೇಶ್ಯೆಯಾದರೂ ನಡತೆಯಿಂದ ಉತ್ತಮ ಗೃಹಿಣಿಯಂತೆ ಇದ್ದಾಳೆ. ಒಮ್ಮೆ ಮಲುಹಣನೆಂಬ ಸುಂದರಾಂಗನ ಮೋಹಕ್ಕೆ ಒಳಗಾಗುತ್ತಾಳೆ. ತನ್ನ ಪ್ರಿಯಕರನಿಗೆ ತನು, ಮನವನ್ನೆಲ್ಲ ಅರ್ಪಿಸುತ್ತಾಳೆ. ಬಹಳ ಕಾಲ ಅವರ ಪ್ರೀತಿಯ ಬದುಕು ಸಾಗುತ್ತದೆ. ಹೀಗಿರುವಲ್ಲಿ ಮಲುಹಣನ ಹಣವೆಲ್ಲ ತಿರುತ್ತಬರುತ್ತದೆ. ಹಣವಿಲ್ಲದ ಮಲುಹಣ ಮಲುಹಣಿಯ ತಾಯಿಗೆ ಇಷ್ಟವಾಗುವುದಿಲ್ಲ. ಹಾಗಾಗಿ ಮಲುಹಣನನ್ನು ಬಿಟ್ಟು ಬಿಡುವಂತೆ ಮಗಳಿಗೆ ಸೂಚಿಸುತ್ತಾಳೆ. ಆದರೆ, ಮಲುಹಣಿ ಮಲುಹಣನಿಂದ ದೂರವಾಗಲು ಇಷ್ಟಪಡುವುದಿಲ್ಲ. ಆದರೆ, ಪದ್ಮಾವತಿ ಇಷ್ಟಕ್ಕೆ ಬಿಡುವುದಿಲ್ಲ. ಬಲವಂತವಾಗಿ ಅವರಿಬ್ಬರನ್ನು ಬೇರ್ಪಡಿಸುತ್ತಾಳೆ. ಇಬ್ಬರು ವಿರಹದಲ್ಲಿ ಬಾಳುತ್ತಾರೆ. ಮಲುಹಣಿ ಹಲವು ಅನಿವಾರ್ಯಗಳ ನಡುವೆ ಸಿಕ್ಕಿ ಜೀವನ ಸಾಗಿಸುತ್ತಾಳೆ. ಎಷ್ಟೆ ಇಷ್ಟವಿದ್ದರೂ ಮಲುಹಣನನ್ನು ಸಮೀಪಿಸುವುದು ಸಾಧ್ಯವಾಗದಾಗುತ್ತದೆ. ತನ್ನ ಮನೆಯ ಸುತ್ತ ಸುತ್ತುವ ಮಲಹಣನನ್ನು ಕಂಡು ಮರುಗುತ್ತಾಳೆ. ಆದರೆ, ಮಲುಹಣನಿಗೆ ಏನನ್ನೂ ಹೇಳುವಂತಿಲ್ಲ. "ಒಮ್ಮೆ ಅನಿರೀಕ್ಷಿತಾವಾಗಿ ಮಲುಹಣನನ್ನು ಕಂಡಾಗ ತನ್ನ ಮೇಲಿಕ್ಕುವ ಈ ಚಿತ್ತದಾತುರತೆಯನ್ನು ಪನ್ನಗಾಭರಣನಲ್ಲಿ ಇರುವಂತೆ ಕೇಳಿಕೊಳ್ಳುತ್ತಾಳೆ. ಮಲುಹಣ ಹಾಗೆ ಮಾಡಿ ಮತ್ತೆ ಮಲುಹಣಿಯನ್ನು ಸಮೀಪಿಸುತ್ತಾನೆ. ಇಲ್ಲಿ ಮಲುಹಣಿಯ ಗುಣ ಮೆಚ್ಚುವಂಹದು. ಅವಳು ವೇಶ್ಯೆಯ ಮಗಳಾಗಿದ್ದೂ, ತನ್ನ ತನವನ್ನು ಕಾಪಾಡಿಕೊಂಡು ಮಲುಹಣನ ಬದುಕಿನ ದಿಕ್ಕನ್ನೇ ಬದಲಿಸಿದಳು"[೩೩].

**ಕಾಮಲತೆ:**

ಕಾಮಲತೆ ಧನದತ್ತ ನೆಂಬುವನ ಮಗಳು. ಆಕಸ್ಮಿಕವಾಗಿ ಅಲ್ಲಮನ ಅನುರಾಗಕ್ಕೆ ಒಳಗಾಗುತ್ತಾಳೆ. ಅಲ್ಲಮ ಒಬ್ಬ ಮದ್ದಳೆ ಬಾರಿಸುವವನು. ""ಇಲ್ಲಿ ಕುಲ, ಜಾತಿಯ ಅರಿವಿಲ್ಲದೆ ಇಬ್ಬರು ಪ್ರೇಮಿಸಿದ್ದಾರೆ. ಆದರೆ ಪ್ರಾಯದ ಸವಿ ತೀರುವ ಮುನ್ನವೇ ಕಾಮಲತೆ ಜ್ವರದಿಂದ ದೇವಲೋಕಕ್ಕೆ ನಡೆಯುತ್ತಾಳೆ. ಅಲ್ಲಮನನ್ನು ದುಃಖಸಾಗರದಲ್ಲಿ ಮುಳುಗಿಸುತ್ತಾಳೆ. ಇಲ್ಲಿ ಕಾಮಲತೆಯ

ಪಾತ್ರ ಅತಿ ಚಿಕ್ಕದಾಗಿದ್ದರೂ ಅಲ್ಲಮನ ಜೀವನಕ್ಕೆ ಮೆರಗು ನೀಡಿದ್ದಾಳೆ. ಹೀಗಾಗಿ ಹರಿಹರ ಸ್ತ್ರೀಪರವಾಗಿಯೇ ರಗಳೆಯನ್ನು ರಚಿಸಿದಂತಿದೆ."

## ಪದ್ಮಾವತಿ

ಆದಯ್ಯನ ಪ್ರಿಯತಮೆ ಹಾಗೂ ಪ್ರೀತಿಯ ಪತ್ನಿಯಾದ ಪದ್ಮಾವತಿ ಜೈನ ಧರ್ಮದವಳು. ತನ್ನ ಜಾತಿ, ಮತ, ಕುಲಗಳನ್ನು ನೋಡದೆ ಆದಯ್ಯನನ್ನು ಪ್ರೀತಿಸಿ ಮದುವೆಯಾಗುತ್ತಾಳೆ. ತಾನೇ ಪ್ರೀತಿಸಿ ಆರಿಸಿಕೊಂಡ ಆದಯ್ಯನನ್ನು 'ಯಾವಾಗಲೂ ನೆರಳಿನಂತೆ ಹಿಂಬಾಲಿಸುತ್ತಾಳೆ. ಗಂಡನ ಸುಖವೇ ತನ್ನ ಸುಖ, ದುಃಖವೇ ತನ್ನ ದುಃಖ ಎಂದು ತಿಳಿದವಳು ಗಂಡನ ಧರ್ಮವೇ ತನಗೆ ಮಾನ್ಯವೆಂದಳು. ಆದಯ್ಯನು ಸೋಮನಾಥನನ್ನು ತರುವವರೆಗೆ ಅನಶನ ವ್ರತ ಕೈಗೊಂಡು ಪತಿವ್ರತೆಯಾಗಿ ಕಾಲ ಕಳೆಯುತ್ತಾಳೆ. ಗಂಡ ಬರುವವರೆಗೆ ತನ್ನ ಸುಖವೆಲ್ಲವನ್ನೂ ಬದಿಗೊತ್ತಿದ್ದಳು. ಒಂದೇ ಮನದಿಂದ ಗಂಡನ ಆಗಮನದ ನಿರೀಕ್ಷೆಯಲ್ಲಿಯೇ ಕಾಲ ಕಳೆಯುತ್ತಾಳೆ. ಶಿವಭಕ್ತಿಯ ಪ್ರಸಾರಕ್ಕೆ ಆದಯ್ಯನಿಗೆ ಅವಳ ಬೆಂಬಲವೇ ಚೈತನ್ಯವಾಗಿದೆ ಎಂದರೆ ಅತಿಶಯೋಕ್ತಿಯಗಲಾರದು.

## ಪರವೆನಾಚಿ ಮತ್ತು ಸಂಕಿಲಿನಾಚಿ

ಪರವೆನಾಚಿ ನಂಬಿಯಣ್ಣನ ಪ್ರಿಯತಮೆ. ವೇಶ್ಯಾಕುಲದವಳು. ಆಕಸ್ಮಿಕವಾಗಿ ಇವಳಿಗೂ ನಂಬಿಯಣ್ಣನಿಗೂ ಪ್ರೇಮಾಂಕುರವಾಗುತ್ತದೆ. ಪರವೆನಾಚಿ ನಂಬಿಯಣ್ಣನನ್ನು ಮನಸಾರೆ ಮೆಚ್ಚಿದ್ದಾಳೆ. ನಂಬಿಯಣ್ಣ ತನ್ನೆದುರಲ್ಲೇ ಇರಬೇಕೆಂದು ಬಯಸುತ್ತಾಳೆ. ಅವಳು ತನ್ನ ಇನಿಯ ಸಂಕಿಲೆಯೊಡನೆ ಕೂಡಿದ್ದನು ಸಹಿಸದೆ ಹೋಗುತ್ತಾಳೆ. ಅಂತೆಯೇ ನಂಬಿಯಣ್ಣ ಸಂಕಿಲೆಯನ್ನು ಬಿಟ್ಟು ಬಂದಾಗ ಅವನನ್ನು ಮೂದಲಿಸುತ್ತಾಳೆ. ಅವನು ಕೊಟ್ಟ ಒಡವೆಗಳನ್ನು ಬಿಸಾಡುತ್ತಾಳೆ. ಪತಿಯ ಮೇಲೆ ಇರಬೇಕಾದ ಪ್ರೇಮ, ಕಳಕಳಿ ಎಲ್ಲವೂ ಪರವೆಯಲ್ಲಿ ವ್ಯಕ್ತವಾಗುತ್ತವೆ. ಸಂಕಿಲಿನಾಚಿ ನಂಬಿಯಣ್ಣನ ಇನ್ನೊಬ್ಬ ಪ್ರಿಯತಮೆ. ಕುಲದಿಂದ ಕೀಳು; ಅಲ್ಲದೆ ಅವಳು ಬಾಲ್ಯವಿಧವೆ. ಸತ್ತ ಗಂಡನ ನೆನಪಿನಲ್ಲಿಯೇ ಕಾಲ ಕಳೆದ ಪತಿವ್ರತೆ. ಅತ್ಯಂತ ಸುಂದರಿ. ನಂಬಿಯಣ್ಣಕೆಲಕಾಲ ಇವಳ ಬಳಿ ಇದ್ದು ಮತ್ತೆಪರವೆನಾಚಿಯ ಕಡೆ ಹೊರಡುತ್ತಾನೆ. ಅವಳು ನಂಬಿಯಣ್ಣನನ್ನು ತನ್ನ ಪ್ರೇಮಪಾಶದಲ್ಲಿ ಬಂಧಿಸಿಕೊಳ್ಳಲು ಸಾಕಷ್ಟು ಯತ್ನಿಸುತ್ತಾಳೆ. ಆದರೆ ವಿಫಲಳಾಗುತ್ತಾಳೆ. ನಿರಶಳಾಗಿ ಬದುಕು ಸಾಗಿಸುತ್ತಾಳೆ.

ಪರವೆನಾಚಿ– ಸಂಕಿಲಿನಾಚಿ ಇವೆರಡು ಪಾತ್ರಗಳು; ಒಂದು ಕುಮುದ ಇನ್ನೊಂದು ಕಮಲವಿದ್ದಂತೆ. ಇವರ ದೈಹಿಕ ಸೌಂದರ್ಯ ವರ್ಣನೆಯಲ್ಲಿ ನಾವು ವ್ಯತ್ಯಾಸವನ್ನೇ ಕಾಣುವುದಿಲ್ಲ.

ಹರಿಹರ ಚಿತ್ರಿಸಿದ ಈ ಇಬ್ಬರು ಮುಗ್ಧರು; ಮಾತು ಅತಿಮಿತ; ರೂಪು ಅತಿಹಿತ. ವಯೋಮಾನದಲ್ಲಿ, ರೂಪಲಾವಣ್ಯಗಳಲ್ಲಿ, ಸೌಂದರ್ಯದಲ್ಲಿ ಗುಣಸ್ವಭಾವದಲ್ಲಿ ಇಬ್ಬರು ಒಂದೇ ತೆರನಾಗಿ ಗೋಚರಿಸುತ್ತಾರೆ. ಕವಿಯು ಪರವೆಯರ ಪಾತ್ರವನ್ನು ಹಿಗ್ಗಿಸಿದಷ್ಟು ಸಂಕಿಲಿಯರ ಪಾತ್ರವನ್ನು ಹಿಗ್ಗಿಸಿಲ್ಲ. ಹಾವಭಾವ ಮಾತಿನ ರೀತಿಗಳೂ ಒಂದೇ ತೆರನಾಗಿವೆ. ಅವರಿಬ್ಬರೂ ನಂಬಿಯಣ್ಣನೊಡನೆ ಮಾತಾಡಿದ ಪ್ರಸಂಗಗಳೇ ಇಲ್ಲ. ಇಬ್ಬರೂ ನಂಬಿಯಣ್ಣನ ವಿರಹದಿಂದಲೇ ಪ್ರಾಣಕಳೆದುಕೊಂಡರು. ಸಂಕಿಲಿನಾಚಿ ಮೊದಲು ಒಬ್ಬನಿಗೆ ನಿಷ್ಠೆ ವ್ಯಕ್ತಪಡಿಸಿದ್ದಳು. ಅವಳ ನಿಷ್ಠೆ ನಂಬಿಯಣ್ಣನಿಗೆ ವರ್ಗವಾಯಿತು; ಅವನೂ ಸಂಕಿಲಿಯನ್ನು ಅಗಲಿದ. ಆದುದರಿಂದ ಅವಳಿಗೆ ಅದೆಷ್ಟು ನಿರಾಶೆಯಾಯಿತೋ ಹೇಳಲಸದಳ.

ಪರವೆನಾಚಿಯರು ಅಸ್ತಂಗತವಾದುದನ್ನು ಅವಲೋಕಿಸಿದರೆ ಮತ್ತೆ ಪುನಃ ಬರುವಾಗ ಇನ್ನೊಬ್ಬಳನ್ನು ಪ್ರೀತಿಸಿದುದನ್ನು ನೆನೆದು, ಆ ಭಯ, ಆ ವಿರಹದಿಂದಲೇ ಪ್ರಾಣಬಿಟ್ಟಿರಬೇಕು.; ಪ್ರಣಯ ವ್ಯಾಪಾರದಲ್ಲಿ ಈ ಇಬ್ಬರಿಗೂ ನಿರಾಶೆಯಾಗಿರುವುದರಿಂದ ಇವರು ನಿರಾಶೆಯ ಮೂರ್ತಿಗಳು ಎನ್ನಬೇಕು. ಶಿವಾಜ್ಞೆಯನ್ನು ಯಾರೂ ತಪ್ಪಿಸುವಂತಿಲ್ಲ, ಸಂಕಿಲಿಯು ನಂಬಿಯಣ್ಣನನ್ನು ತನ್ನ ಬಳಿಯಲ್ಲಿಯೇ ಇರಿಸಿಕೊಳ್ಳಲು ಎಷ್ಟೇ ಬುದ್ಧಿವಂತಿಕೆ ಉಪಯೋಗ ಮಾಡಿದರೂ ಲಾಭವಾಗಲಿಲ್ಲ. ಸ್ವತಂತ್ರನಾದ ನಂಬಿಯಣ್ಣ ಈ ಇಬ್ಬರನ್ನು ತೊರೆದ. ಈ ಇಬ್ಬರು ಪ್ರಾಯಶಃ ಕೀಳುಕುಲದವರಾಗಿದ್ದರೂ ಅವರ ಮನಸ್ಸು. ಅವರ ಶುದ್ಧ ಪ್ರೇಮ, ಶುಚಿತ್ವ, ನಿಷ್ಠೆ ಇವೆಲ್ಲ ಗರತಿಯರವೇ. ಆದುದರಿಂದ ಅವರನ್ನು ಉತ್ತಮರಲ್ಲಿ ಸೇರಿಸುವುದಕ್ಕೆ ಯಾವ ಅಭ್ಯಂತರವೂ ಇಲ್ಲ. ಸಂಕಿಲಿ, ಪರವೆ ಯರನ್ನಾಗಲೀ, ಪರವೆ ಸಂಕಿಲಿಯನ್ನಾಗಲೀ ದೂಷಿಸಿದ ವ್ಯಕ್ತಿಗಳು ಉದಾರರು. ಇವೆರಡು ಪಾತ್ರಗಳು ಹರಿಹರನ ಕೈಯಲ್ಲಿ ಬೆಳಗಿವೆ.

## ಗೃಹಿಣಿಯರು

ಗೃಹಿಣಿಯರ ಸಾಲಿನಲ್ಲಿ ಪಾಂಡ್ಯ ಮಹಾದೇವಿ ಪತಿ ಹಿತವೆ, ಗಂಗಾಂಬೆ, ಮಾಯಿದೇವಿ, ಮುತ್ತೈದೆ ಮುಂತಾದವರು ಬರುತ್ತಾರೆ. ಇವರೆಲ್ಲ ಗಂಡಂದಿರ ಬದುಕಿನ ಆಗು ಹೋಗುಗಳ ಜೊತೆ ತಮ್ಮ ಬದುಕನ್ನು ಅತ್ಯಂತ ಪ್ರೀತಿಯಿಂದ ಹಂಚಿಕೊಂಡು ಬದುಕುವುದನ್ನು ಕಾಣುತ್ತೇವೆ.

## ಪಾಂಡ್ಯಮಹಾದೇವಿ

ಇವಳು ಪಾಂಡ್ಯ ನೃಪನ ಹೆಂಡತಿ, ತನ್ನ ಅನುಪಮ ಶಿವ ಭಕ್ತಿಯಿಂದಾಗಿ ಇವಳು ಜೈನನಾದ ತನ್ನ ಗಂಡನನ್ನು ಶಿವಧರ್ಮಕ್ಕೆ ಜಾಣತನದಿಂದ ಪರಿವರ್ತಿಸುತ್ತಾಳೆ. ಇಲ್ಲಿ

ಪಾಂಡ್ಯ ಮಹಾದೇವಿಯ ಜಾಣ್ಮೆ, ದಾನಗುಣ, ಶಿವಭಕ್ತಿ ಹಾಗೂ ಪತಿಭಕ್ತಿಯನ್ನು ಕವಿ ಸುಂದರವಾಗಿ ಚಿತ್ರಿಸಿದ್ದಾನೆ.

ಭಾಷೆಗಳಿಂ ಭಾರತಿಯಂ ಮಗುವಳು;

ವೇಷದಿಂದೆ ರತಿಯರವಂ ಪೆಳಿವಳು;

ಪರಹಿತಗುಣದಿಂ ಧರೆಯಂ ಜಱಿವಳು;

ಚರಿತದೊಳ ಮರುಂಧತಿಗೆಣೆಯಪ್ಪಳು;

ವಿಭವದೊಳಾ ಶುಚಿಯಂ ಗಹಗಹಿಪಳು;

ಶುಭರುಚಿಯಂ ರೋಹಿಣಿಯಂ ಸುರಿವಳು;

ನಡೆಗಳೊಳಂ ಹಂಸೆಗಳಂ ಗೆಲುವಳು;

ಬಡನಡುವಿಂ ಸಿಂಗಂಗಳ ಗೆಲುವಳು"[೩೫]

ಶಿವನಲ್ಲದೆ ಬೇರೆದೈವವನ್ನು ನೆನೆಯುವುದಿಲ್ಲ; ಶಿವಪ್ರಸಾದವಲ್ಲದೆ ಬೇರೆಕೊಳ್ಳಲು; ಪತಿಗೆ ಅತಿಹಿತವೆ; ಸತಿಯರ ಬಳಗಕ್ಕೆ ತಿಲಕವಾಗಿದ್ದಾಳೆ. ಈಕೆಯು ಶಿವಭಕ್ತಿಯಾದುದರಿಂದ ತನ್ನ ಗಂಡನಾದ ಪಾಂಡ್ಯದೊರೆಗೆ ಭಕ್ತಿಯನ್ನು ಬೋಧಿಸಿ ಭಕ್ತನನ್ನಾಗಿ ಮಾಡುತ್ತಾಳೆ. ಆಗ ಅಷ್ಟಕ್ಕೂ ಸುಮ್ಮನಾಗದೆ ಗುರುಗಳಾದ 'ಜ್ಞಾನ ಮುನೀಂದ್ರ'ರನ್ನು ಅಲ್ಲಿಗೆ ಬರಮಾಡಿಕೊಂಡು ಅವರನ್ನು ಉಪಚರಿಸುತ್ತಾಳೆ. ತನ್ನ ಗಂಡನು ಜೈನನಿದ್ದುದನ್ನು ತಿಳಿಸುತ್ತಾಳೆ. ತನ್ನ ಗಂಡನು ಜೈನನಿದ್ದುದನ್ನು ತಿಳಿಸುತ್ತಾಳೆ. ಆತನೂ ಗುರುಗಳಿಗೆ ಜೈನ ಮತಮಹಿಮೆಯನ್ನು ಹೇಳುತ್ತಾನೆ. ಜ್ಞಾನಮುನೀಂದ್ರರು ಶಿವನನ್ನು ನೆನೆದು. ಜೈನಧರ್ಮವನ್ನು ಗೆದ್ದು, ಪಾಂಡ್ಯ ರಾಜನಿಗೆ ಶಿವದೀಕ್ಷೆಯನಿತ್ತು ಹೋಗುತ್ತಾರೆ.

ಪಾಂಡ್ಯ ಮಹಾದೇವಿಯು ತನ್ನ ಗಂಡನು ಶಿವಭಕ್ತನಾದ ಮೇಲೆ ಆ ತಲೆಯೇ ಶಿವನೆಂದು ಭಾವಿಸುತ್ತಾಳೆ. ಅವಳ ಆ ಭಾವನೆಗೆ ಮೆಚ್ಚಿದ ಶಿವನು ಪುಷ್ಪಕ ವಿಮಾನದಲ್ಲಿ ಆಕೆಯನ್ನು ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಪಾಂಡ್ಯಮಹಾದೇವಿಯ ಪರಿಯನ್ನು ಗಿರಿಜೆಗೆ ತಿಳಿಸುತ್ತಾನೆ. ಆಕೆಯ ಭಾವದ ಭೇದವನ್ನು, ನಿಜಭಕ್ತಿಯನ್ನು ತಿಳಿಸಿ ಹೇಳಿ ಆಕೆಗೆ ರುದ್ರಕನ್ನಿಕೆಯ ಪದವಿಯನ್ನೀಯುತ್ತಾನೆ.

**ಅರುಂಧತಿ, ಶಚಿದೇವಿಗೆ ಸಮಾನಳಾದ ಪಾಂಡ್ಯಮಹಾದೇವಿ:**

ಈಕೆ ತನ್ನ ಗಂಡನನ್ನು ಜೈನಮತದಿಂದ ಶೈವಧರ್ಮಕ್ಕೆ ಪರಿವರ್ತಿಸಿದುದು ಸಾಹಸದ ಮಾತೇ ಸರಿ. ಕವಿಯು ಈ ಮಹಿಳೆಯನ್ನು "ಭಾಷೆಯಲ್ಲಿ ಭಾರತಿ" ಎಂದು ಕರೆದುದು ಉಚಿತವಾಗಿದೆ. ತನ್ನ ಗಂಡನನ್ನು ಬಹು ಜಾಣ್ಮೆಯಿಂದ ತಾನು ಉಪದೇಶಿಸಿ ಗುರುಗಳೂ ಉಪದೇಶ ಮಾಡುವಂತೆ ಮಾಡಿ ಶೈವದೀಕ್ಷೆ ಕೊಡಿಸಿದುದೂ ಅವಳ ಮಹತ್ಸಾಧನೆಗಳಲ್ಲಿ ಒಂದಾಗಿದೆ. ಗಂಡನು ಶೈವಧರ್ಮಕ್ಕೆ ಪರಿವರ್ತನೆಯಾದ ಮೇಲೆ ಅವನನ್ನೇ ಶಿವನೆಂದು ಭಾವಿಸಿ ಮುಕ್ತಿಗೆ ಸಂದಳೆಂದು ಕವಿಯು ತಿಳಿಸಿದ್ದಾನೆ. ಮೊದಲು ತಾನು ಪತಿಗೆ ಗೌರವವನ್ನು ತೋರುತ್ತಿದ್ದವಳೇ. ಆದರೆ, ನಂತರ ಅವನನ್ನೇ ದೇವರೆಂದು ತಿಳಿದುದು ಭಾವಭೇದವೇ. ಈಕೆಯಲ್ಲಿ ಪತಿಭಕ್ತಿ ಮತ್ತು ಶಿವಭಕ್ತಿಗಳೆರಡರ ಸೂಕ್ಷ್ಮ ಭೇದವನ್ನು ಕವಿಯು ಎತ್ತಿ ತೋರಿಸಿದ್ದಾನೆ.

ಜೈನಧರ್ಮದ ಕೂಟಕ್ಕೆ ಆಸೆ ಮಾಡದೆ ಗಂಡನನ್ನು ಶೈವಧರ್ಮಕ್ಕೆ ಮತಾಂತರಿಸುತ್ತಾಳೆ. ಶಿವನು ಆಕೆಯ ಈ ಕಾರ್ಯವನ್ನು ಮೆಚ್ಚುತ್ತಾನೆ. ಶೈವಧರ್ಮ ಪ್ರಸಾರ ಕಾರ್ಯದಲ್ಲಿ ಈಕೆ ಮಾಡಿದ ಕಾವ್ಯ ಪ್ರಶಂಸನೀಯ. ಈಕೆ ಆದರ್ಶಗೃಹಿಣಿ. ಅವಳದು ಬಹುಕೋಮಲ ಸ್ವಭಾವ. ಜನತೆಗೆಲ್ಲ ಅವಳು ಮಾತೆಯಂತಿರುತ್ತಾಳೆ. ಅವಳ ಸದ್ಗುಣಕ್ಕೆ ಮಣಿದೇ ನೃಪನು ಅವಳ ವಿರುದ್ಧ ಹೋಗಲಿಲ್ಲ. ಅವಳ ಉಜ್ವಲ, ಪ್ರಭಾವಯುತ ವ್ಯಕ್ತಿತ್ವವೂ ಗಂಡನ ಮೇಲೆ ಪ್ರಭಾವ ಬೀರಿ ಅವನನ್ನು ಶೈವಕ್ಕೆ ಪರಿವರ್ತನೆ ಹೊಂದಲು ಪ್ರೇರಣೆ ನೀಡಿದೆ. ತನ್ನ ವ್ಯಕ್ತಿಗತ ಚಾರಿತ್ರ್ಯ ಶುದ್ಧಿ ಮತ್ತು ಜಾಣ್ಮೆಯಿಂದ ರಾಜನನ್ನು ತನ್ನ ಮತಕ್ಕೆ ತಿರುಗಿಸಿ ಶೈವಧರ್ಮಕ್ಕೆ ಉಪಕಾರ ಮಾಡಿದ ಪುಣ್ಯವತಿ ಈಕೆ ಎಂದರೆ ತಪ್ಪಾಗಲಾರದು.

**ಪತಿಹಿತವೆ**

ಇವಳು ಮಹಾಭಕ್ತ ಇಹಃಪ್ಪಗೆಯಾಂಡನ ಪತ್ನಿ. ಇಹಃಪ್ಪೆಯಾಂಡನಿಗೆ ಹಲವು ಅರಸಿಯರಿದ್ದರೂ. ಅದನ್ನು ಲೆಕ್ಕಿಸದೆ ಗಂಡನೊಡನೆ ಆತ್ಮೀಯವಾಗಿಯೇ ಇದ್ದವಳು. ಗಂಡನ ಆಗುಹೋಗುಗಳ ಜತೆ ತನ್ನ ಬದುಕನ್ನು ಹಂಚಿಕೊಂಡವಳು. ಒಮ್ಮೆ ವಿಟವೇಷದಲ್ಲಿ ಬಂದ ಶಿವನು ಪತಿಹಿತವೆಯನ್ನು ಬಯಸಲು. ಇಹಪ್ಪಗೆಯಾಂಡ ಪತಿಹಿತವೆಯನ್ನು ಅವನೊಂದಿಗೆ ಕಳುಹಿಸಿಕೊಡುತ್ತಾನೆ. ಆಗಲೂ ಸಹ ಪತಿಹಿತವೆ ಗಂಡನ ಆಜ್ಞೆಯನ್ನು ಮರುಮಾತನಾಡದೆ ಪಾಲಿಸುತ್ತಾಳೆ. ಮದುವೆಯಾದ ಮೇಲೆ ಗಂಡನಿಗಿಂತ ಬಂಧುಗಳನ್ನು ಹೆಚ್ಚಾಗಿ ಕಾಣಲಿಲ್ಲ. ಶಿವಭಕ್ತಿ ಮತ್ತು ಪತಿಭಕ್ತಿಯ ಮುಂದೆ ವಂಶದ ಕೇಡು, ಲೋಕಾಪವಾದ, ಕುಲಾಚಾರ.. .. .... .. .. .. .. .. . . . . .. .. .. . ಇವುಗಳನ್ನು ಪರಿಗಣಿಸದೆ ಬಾಳುತ್ತಾಳೆ.

ಪತಿಹಿತವೆಯು ಚೋಳದೇಶದ 'ಕಾವೇರಿಕರೆ' ಪಟ್ಟಣದ ಅಧಿಪತಿ–ಇಹಃಪ್ಪಗೆಯಾಂಡರ ಪತ್ನಿ, ಅವಳು ರಾಣಿಯೂ ಹೌದು. ಇಹಃಪಗೆಯಾಂಡರು ಅರಸರಾಗಿದ್ದರಿಂದ ಅವರಿಗೆ ಅಂಗಭೋಗದ ಪತಿಯರು ಇನ್ನೂರು ಮಂದಿ. ಸಿಂಗರಿಸುವ ಸತಿಯರು ನೂರುಮಂದಿ; ಅರಸಿಯರು ನೂರುಮಂದಿ; ಇವರೆಲ್ಲರ ಮೇಲೆ ಮನ್ನಣೆಯಸತಿ 'ಪತಿಹಿತವೆ' ಪಟ್ಟಮಹಾದೇವಿ. ಅವಳ ಬಗೆಗೆ ಕಾವ್ಯದಲ್ಲಿ ಕವಿಯು ಬರೆದ ಮಾತುಗಳಿವು;

ನನೆಯಂಬಿನಿಂತಿರ್ಪಳೋರ್ವ ಸತಿ ತನಗೆ ಮಿಗೆ

ತೆಸರೆಸವ ಪತಿಹಿತವೆಯೆಂದೆಂಬ ನಾಮದಿಂ,

ಪೊಸತೆನಿಪ ಲಾವಣ್ಯ ಮುಂ ತಳೆದೊಳಪ್ಪ ದಿಂ,

ಎನಿತು ವತಿತೆಯದಿರ್ದಡಂ ತಾರಗೆಗಳಂತೆ.

ಮಿನುಮಿನುಗುತಿರ್ಪರಾ ಚಂದ್ರವದನೆಯ ಮುಂತೆ;

ನೆನೆವ ಮನವೀದ ಕೈಯೆನಿಸಿರ್ಪಳಾತಂಗೆ;

ಇಂತೆನಿಪ ಸತಿಗೆ ಪತಿಯಾಗಿ ಸುಖದಿಂದಿರ್ದು

ಸಂತತಂ ಶಿವಭಕ್ತಿ ಸಿರಿಯೊಳು ಮುಳುಂಗಿರ್ದು"[೩೬]

ಕವಿಯು ಆಕೆಯ ರೂಪ 'ನನೆಯಂಬಿನಂತೆ' ತಾರಗೆಗಳ ಮಧ್ಯದ 'ಚಂದ್ರ'ನಂತೆ ಎಂದು ಹೇಳಿರುವುದಲ್ಲದೆ. ಅವಳು ತನ್ನ 'ತನಿನೇಹದಿಂದ' ಇಹಃಪ್ಪಗೆಯಾಂಡರಿಗೆ ಪ್ರಾಣವೇ ಆಗಿದ್ದುದರಿಂದ ಆ ಶರಣರ ಶಿವಭಕ್ತಿಯು ಅಧಿಕವಾಗಿ ಬೆಳೆಯಿತಂತೆ ಎಂದಿದ್ದಾನೆ. ಗುಣದಿಂದಲೂ ಪತಿಗೆ ಪ್ರಾಣವಾಗಿದ್ದು ಅನುರೂಪ ಹೆಸರನ್ನು ಪಡೆದ ಸ್ತ್ರೀ ಈಕೆ. ಈ ಕಾರಣದಿಂದ ಇಹಃಪ್ಪಗೆಯಾಂಡರಲ್ಲಿ ಅಂಗಭೋಗಕ್ಕೆ ಇನ್ನೂರು ಸತಿಯರು, ಶೃಂಗಾರ ಮಾಡಲಿಕ್ಕೆ ನೂರು ಸತಿಯರು, ಅರಸಿಯರು ನೂರುಮಂದಿಯಿದ್ದರೂ ಅವರಿಗೆ ಪತಿಹಿತವೆಯ ಮೇಲೆ ವಿಶೇಷ ಮಮತೆ. ವಿಶೇಷ ಗೌರವಿದ್ದುದರಿಂದ ಅತಿಪ್ರಿಯಳಾಗಿದ್ದುದು ಅಚ್ಚರಿಯ ಮಾತಲ್ಲ. ಇಹಃಪ್ಪಗೆಯಾಂಡರು ಭಕ್ತರಾದುದರಿಂದ ಭಕ್ತರಿಗೆ ದಾನ ಮಾಡುವುದರಲ್ಲಿ ನಿಸ್ಸೀಮರು. ಈವ ಬಿರುದನ್ನೇ ಕಟ್ಟಿದವರು; ಶಿವಭಕ್ತರಿಗೆ, ಶಿವಶರಣರಿಗೆ ಕೇಳಿದುದನ್ನು ಇಲ್ಲವೆನ್ನದೆ ಕೊಡುವ ಪ್ರತಿಜ್ಞೆಯನ್ನೆ ಮಾಡಿದವರು. ಇದು ಅವರ ಭಕ್ತಿಯ ವೈಶಿಷ್ಟ್ಯಗಳಾಗಿವೆ.

## ಗಂಗಾದೇವಿ ಮತ್ತು ಮಾಯಿದೇವಿಯರು:

ಇವರಿಬ್ಬರು ಮಹಾಭಕ್ತ ಬಸವಣ್ಣನವರ ನೆಚ್ಚಿನ ಪತ್ನಿಯರು. ಎರಡು ಕಣ್ಣುಗಳಂತೆ ಇದ್ದವರು. ಬಸವಣ್ಣನ ಎಲ್ಲ ಕಾರ್ಯಗಳ ಜತೆ ತಮ್ಮ ಬದುಕನ್ನು ಹಂಚಿಕೊಂಡವರು. ಒಮ್ಮೆ ಶಿವ ವಿಟವೇಷದಲ್ಲಿ ಬಂದು ಮಾಯಿದೇವಿಯನ್ನು ಬಯಸಿದಾಗ ಬಸವಣ್ಣ ಅವಳನ್ನು ಸಂತೋಷದಿಂದ ಅರ್ಪಿಸುತ್ತಾನೆ. ಆಗ ಮಾಯಿದೇವಿ ಅಷ್ಟೇ ಸಂತೋಷದಿಂದ ವಿಟವೇಷದ ಜಂಗಮನ ಹಿಂದೆ ನಡೆಯುತ್ತಾಳೆ. ಇದು ಅವಳ ಪತಿಭಕ್ತಿಯ ಕುರುಹು. ಗಂಗಾದೇವಿ, ಮಾಯಿದೇವಿಯರು ಸವತಿಯರಾಗಿದ್ದರೂ ಅವರು ಎಂದೂ ಸವತಿಯರಂತೆ ಬದುಕದೆ ಇದ್ದರೂ ಅವರ ಬದುಕಿನ ಹೆಮ್ಮೆಗೆ ಸಾಕ್ಷಿಯಾಗಿದೆ. ಬಸವಣ್ಣನವರು ಮಂಗಳವೇಢೇಯಲ್ಲಿ ಸಂಗಮೇಶ್ವರ ಅನುಗ್ರಹದಿಂದ ಬಿಜ್ಜಳರಾಯನಿಂದ 'ಕನಕಭಂಡಾ ರಾಜ್ಞೆಯಂ'. ದಂಡನಾಥ ಸಮಗ್ರ ಪ್ರಭುವೃತ್ತಿಯಂ'. ಸರಳ ಸಂಪದ್ಯೆ ಭವಾಭಾರ್ಯದೊಂದೆಸೆವಂ' ಪಡೆದು ಕೆಲ ದಿನಗಳನ್ನು ಕಳೆದು ಸತ್ಕುಲ, ಸುಶೀಲೆಯರಪ್ಪ, ಸದ್ಭಕ್ತೆಯರಂ, ಗಂಗಾದೇವಿ, ಮಾಯಿದೇವಿಯುರೊಡತಣ ವಿವಾಹ ಸಂಪದದಿಂ"[೩೭] ಸುಖವಾಗಿರ್ದರೆಂದು ಹರಿಹರ ಕವಿ ಬಸವೇಶ್ವರ ದೇವರಗಳೆಯ ೬ನೇಯ ಸ್ಥಲದಲ್ಲಿ ವಿವರಿಸಿದ್ದಾನೆ.

ಬಸವಣ್ಣನವರು 'ವಿವಾಹವಾಗಿ' ಈ ವನಿತೆಯರನ್ನು ಹೊಂದಿದ್ದರೆಂದು ಕವಿ ಹೇಳಿರುವುದರಿಂದ ಈ ಇಬ್ಬರು ಪತ್ನಿಯರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಪತ್ನಿಯರಿಬ್ಬರಿಗೂ ಹರಿಹರ ಕವಿಯು ಸಾಮಾನ್ಯ ವಿಶೇಷವನ್ನು ಬಳಸಿರುವುದನ್ನು ಕಾಣಬಹುದು.

## ಮುತ್ತೈದೆ

ಇವಳು ಶಿವಭಕ್ತಿ ತಿರುನೀಲಕಂಠನ ಹೆಂಡತಿ. ಹೆಸರಿಗೆ ತಕ್ಕಂತೆ ಅವಳ ವ್ಯಕ್ತಿತ್ವ ಕೂಡ. ಯಾವುದೋ ಕಾರಣಕ್ಕೆ ಗಂಡ ಹೆಂಡತಿಯರ ನಡುವೆ ವಿರಸ ಪ್ರಾರಂಭವಾಗುತ್ತದೆ. ತನ್ನ ಗಂಡ ವೇಶ್ಯೆಯ ಮನೆಗೆ ಹೋಗಿ ಬಂದಿದ್ದಾನೆಂದು ಒಳಗೊಳಗೇ ಅವಳು ವ್ಯಥೆ ಪಡುತ್ತಾಳೆ. ಅವಳ ಮಾತು ಮಿತ, ಆದರೆ ಹಿತ, ಇಡೀ ಕಾವ್ಯದುದ್ದಕ್ಕೂ 'ಮುಟ್ಟಿದರೆ ಶಿವನಾಣೆ' ಎಂಬೋಂದೇ ಮಾತು ಅವಳಾಡಿದ್ದು, ಮಾತಾಡದಿದ್ದರೂ ಅವಳ ವ್ಯಕ್ತಿತ್ವ ಕಾವ್ಯದಲ್ಲಿ ತುಂಬಿಕೊಂಡಿವೆ. ಅವಳು ಕೋಮಲೆ, ಸೂಕ್ಷ್ಮ ಪ್ರಕೃತಿಯವಳು. ಭಾವಪರವಶಳು. ಗಂಡನ ಗುಣ ಸ್ವಭಾವ ಅರಿತವಳು. ಎಲ್ಲಾ ರೀತಿಯಿಂದಲೂ ಗಂಡನ ತತ್ವಕ್ಕೆ ಅನುಕೂಲಳಾಗಿ ಬಾಳಿದವಳು ಎಂದರೆ ತಪ್ಪಾಗಲಾರದು.

ದಂಪತಿಗಳು ಪರಸ್ಪರರನ್ನು ಸ್ಪರ್ಶಿಸಬಾರದೆಂದು ಶಿವನಾಣೆ ಇಟ್ಟ ಮೇಲೆ, ಅವರ ಬದುಕಿನಲ್ಲಿ

ಸ್ಪರ್ಶಿಸುವ ಸನ್ನಿವೇಶಗಳೇ ಬಾರದಿದ್ದುದು ವಿಚಿತ್ರ. ಶಿವನೂ ಅಂತೆಯೇ, ಕಾಯಲು ಇರಿಸಿದ ಪಾತ್ರೆಯನ್ನು ಮರಳಿ ಕೇಳಿದಾಗ, ಅದು ಮಾಯವಾದುದನ್ನು ಕಂಡು ದಂಪತಿಗಳು, 'ಕರಗಿ; 'ಕೊರಗಿ' ಸಿಗ್ಗಾಗಿ; 'ಬಾಡಿ' ದೀನವದನರಾಗಿರುತ್ತಾರೆ. ಮರ್ಯಾದೆಯಿಂದ ಬಾಳಿದ ದಂಪತಿಗಳಿಗೆ ಇದೊಂದು ಭೀಕರವಾದ ಸಿಡಿಲು ಎರಗಿದಂತಾಗಿ ಮುಖವನ್ನೆ ಪರರಿಗೆ ತೋರಿಸದಂತಹ ಸ್ಥಿತಿಯೊದಗಿದೆ. 'ಸಾಕ್ಷಿ; ಪುರಾವೆಗಳಿಲ್ಲದೆ ಒಡವೆಯನ್ನಿರಿಸಿಕೊಂಡಿದ್ದರೂ, ಹುಸಿ ನುಡಿದು, ಪಾತ್ರೆಯನ್ನೇ ಇರಿಸಿಕೊಂಡಿಲ್ಲವೆಂದು ಅಡಿ ನಾಲಗೆಗೆ ಮೈಲಿಗೆಯನ್ನೂ, ಮನಕ್ಕೆ ಮಾಲಿನ್ಯವನ್ನು ತಂದುಕೊಳ್ಳುವ ದಂಪತಿಗಳು ಅವರಾಗಿಲ್ಲ. ಪಾತ್ರೆ ಕಣ್ಮರೆಯಾದುದನ್ನು ಶಿವನೆ ಬಲ್ಲನೆಂದು ಒಳಗೊಳಗೆ ಮರುಗಿದರು.! "ಪಾತ್ರೆಯನ್ನು ನುಂಗಿದ್ದಾರೆ, ಎತ್ತಿಹಾಕಿದ್ದಾರೆ. ಇವರಂತಹ ಶಿವಭಕ್ತರು, ಎಂತಹ ಪ್ರಾಮಾಣಿಕರು" ಎಂದು ಬಂದಬಂದವರ ಎದುರು ದೂರಿ, ಕಂಡ ಕಂಡವರೆದುರು ನಿಂದಿಸಿ, ಪೊನ್ನಾಂಬಲದ ಹಿರಿಯರ ಎದುರು ಪಂಚಾಯಿತಿಯ ನ್ಯಾಯ ನಿರ್ಣಯಕ್ಕೆ (ಶಿವನು) ವೃದ್ಧನು ದೂರುಯ್ಯೋತ್ತಾನೆ. ತಿರುನೀಲಕಂಠ ಕುಶವರು ತಮ್ಮ ಪತ್ನಿಯೊಡನೆ ಮೂರು ಸಾವಿರ ಪಂಚಾಯಿತಿಯ ಜನರ ಸಮ್ಮುಖದಲ್ಲಿ ನಿಲ್ಲಬೇಕಾಗುತ್ತದೆ. ಅಲ್ಲಿಯೂ ಅವರು ಸತ್ಯವನ್ನಾಡಲು ಮರೆಮಾಚಲಿಲ್ಲ ! ಅಂಜಲಿಲ್ಲ 'ಶಿವಭಕ್ತ ಮೌಳಿಗಳೂ, ಭಕ್ತಿಯ ಅಭಿಮಾನಿಗಳೂ, ಶಿವಸ್ನೇಹಿಗಳೂ ಆದ ಈ ದಂಪತಿಗಳು ಸಭೆಗೆ ಆಗಮಿಸಿದೊಡನೆಯೇ ಪಂಚಾಯತವರು:

**".. .. .. .. .. .. . .ಇದೇನದ್ಭುತಂ,**

**ತಿರುನೀಲಕಂಠರೇಕೆ ? ಇವರೇಕೆ"[೨೮]**

ಎಂದು ಕೌತುಕವನ್ನೇ ವ್ಯಕ್ತಪಡಿಸುತ್ತಾರೆ. ಬಡವರಾದರೂ ತಮ್ಮ ಸದ್ಗುಣಗಳಿಂದ ಊರ ಹಿರಿಯರ ಮೇಲೆ ಅಂತಹ ನಿಚ್ಚಳ ಪ್ರಭಾವವನ್ನು ಬೀರಿದ್ದಾರೆ. ಆ ದಂಪತಿಗಳು ಅವರ ವಿಷಯದಲ್ಲಿ ಆ ಊರ ಜನ ಎಂದೂ ಯಾವ ರೀತಿಯಿಂದಲೂ ಮಾತನಾಡಿದವರೇ ಅಲ್ಲ. ಬಡದಂಪತಿಗಳ ಅತ್ಯಂತ ಸುಂದರ ಜೋಡಿಯನ್ನು ಹರಿಹರ ಇಂತು ಚಿತ್ರಿಸಿದ್ದಾನೆ. ಆ ದಂಪತಿಗಳೂ, ಅತಿ ವಿನಮ್ರತರಾಗಿ, ಸಭೆಯ ಸಮ್ಮುಖದಲ್ಲಿ ನಿಂದು, ಆ ವೃದ್ಧನು ತಮ್ಮಲ್ಲಿ ಪಾತ್ರೆಯಿರಿದುದನ್ನು ಅವನು ಪಾತ್ರೆಯನ್ನು ಕೇಳಿದಾಗ ಪೆಟ್ಟಿಗೆಯೊಳು ಮುದ್ರಿಸಿದ ಪಾತ್ರೆ ಮಾಯವಾದುದನ್ನು ತಿಳಿಸುತ್ತಾರೆ. ವೃದ್ಧನು "ಇವರು ಪಾತ್ರೆಯನ್ನು ನುಂಗಿದ್ದಾರೆ. ಇದರೆಂತಹ ಹಿರಿಯರು" ಎಂದು ದಂಪತಿಗಳನ್ನು ಸಭೆಯಲ್ಲಿ ಮೂದಲಿಸುತ್ತಾನೆ. ಸಭೆಯ ಜನರು ಅಚ್ಚರಿಗೊಳಗಾಗುತ್ತಾರೆ.

"ಇರ್ದ ಪರಿಯಂ ಪೇಳಿರೆಲೆ ಮರುಳ್ಗಳಿರ ಲಘುವಾಗಲೇಕೆ"[೨೯]

ಎಂದು ನುಡಿಯುತ್ತಾರೆ. ಆಗ ದಂಪತಿಗಳು ಮೌನವಾಗಿರುತ್ತಾರೆ. ದಂಪತಿಗಳು'ನಡೆದ ಸಮಾಚಾರವನ್ನು ಬಿಡದೇ ತಿಳಿಸುತ್ತಾರೆ. ಆಗಲೂ ಗಂಡ-ಹೆಂಡಿರಲ್ಲಿ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ದಂಪತಿಗಳು ಸ್ಪರ್ಶಿಸದಿದ್ದುದು ಯಾವ ಸಭಿಕರ ಗಮನಕ್ಕೂ ಬರಲಿಲ್ಲ, ಆದುದರಿಂದ ವೃದ್ಧನು ತಾನೇ ಈ ವಿಷಯವನ್ನು ಮುಂದಾಗಿ ಸಭೆಯ ಗಮನಕ್ಕೆ ತರಬೇಕೆಂದು ಒಂದು ನಿಯಮದ ಮೇಲೆ ತನ್ನ ವ್ಯಾಜ್ಯವನ್ನು ಬಗೆಹರಿಸಲು ಇಚ್ಛಿಸಿಕೊಳ್ಳುತ್ತಾನೆ. ಆ ಕಟ್ಟಳೆ ಎಂದರೆ; ತಿರುನೀಲಕಂಠರು ತಮ್ಮಪತ್ನಿಯರ ಕೈಹಿಡಿದು ಪಾತ್ರೆಯನ್ನುತೆಗೆದುಕೊಂಡಿಲ್ಲವೆಂದು ನೀರಿನಲ್ಲಿ ಮುಳುಗಿ ಪ್ರಯಾಣ ಮಾಡಬೇಕೆಂದುದು. ಆಗ ಮುತ್ತೈದೆ ಮೌನಿಯಾಗಿರುತ್ತಾಳೆ.ತಿರುನೀಲಕಂಠರು ಮಾತ್ರ" ಜನರು ಏನೇ ಆಡಲಿ ತಾನು ಸತಿಯ ಕೈ ಹಿಡಿಯುವುದಿಲ್ಲ; ಧರೆಯ ಮೇಲೆ ಕಡೆದೊಡಂ ಸತ್ತೊಡಲ, ಸತಿಯಂ ಕೈಯಂ ಪಿಡಿಯೆಂ"[೬೦]ಎಂದು ಜನರು ಬೆಕ್ಕಸಂಬಡುವಂತೆ ತಿಳಿಸಿ ಬಿಡುತ್ತಾನೆ ! ವೃದ್ಧವೇಷದ ಶಿವನು, ಆಗ ತಿರುನೀಲಕಂಠರನ್ನು ಬೈಯ್ದು, ಒದೆದು, ಜರೆದು, ಅಪಮಾನಗೊಳಿಸಿ, ಘಾಸಿಗೊಳಿಸುತ್ತಾನೆ. ಗಂಡ-ಹೆಂಡರಿಬ್ಬರೂ ಸಿಟ್ಟಿಗೇಳದೆ ತಾಳಿಕೊಂಡಿರುತ್ತಾರೆ. ಆ ಕಾಲದಲ್ಲಿ ಮುತ್ತೈದೆ, ಬಾಯಿ ತಪ್ಪಿಯೂ ಒಂದು ಮಾತನಾಡಲಿಲ್ಲ. ಇಂತಹ ಸ್ಥಿತಿ ಮನಸ್ಸು ಅವಳದು. ಹೀಗಾಗಿ ಶಿವನು ಭಕ್ತರ ಮನಸ್ಸು ಅರಿತು, ವ್ಯಾಜ್ಯ ರಾಜೀ ಮಾಡಿಕೊಂಡು ನಿಜರೂಪ ತೋರಿಸುತ್ತಾನೆ. ಹೀಗೆ ಹರಿಹರ ಮುತ್ತೈದೆ ಭಕ್ತಿ ನಿಷ್ಠೆಯನ್ನು ವಿವರಿಸಿದ್ದಾನೆ.

## ಹಿರಿಯ ಲಕ್ಕಾದೇವಿ – ಚಿಕ್ಕಲಕ್ಕಾದೇವಿ

ಈ ಇಬ್ಬರ ಪಾತ್ರ ಅತ್ಯಂತ ಚಿಕ್ಕದು ಕಾವ್ಯದ ಯಾವುದೋ ಒಂದು ಮೂಲೆಯಲ್ಲಿ ಸೇರಿಕೊಂಡಿದೆ. ಆದರೆ, ಅಷ್ಟರಲ್ಲೇ ಕವಿ ಹಿರಿಯದಾದ ಗುಣವನ್ನು ಸೆರೆಹಿಡಿದಿದ್ದಾನೆ. ಇವೆರಡು ಪಾತ್ರಗಳು ಭಿನ್ನಸ್ವರೂಪವುಳ್ಳವು. ಒಮ್ಮೆ ರೇವಣಸಿದ್ಧ ಭಿಕ್ಷೆಗೆ ಬಂದಿರಲು, ಕಠೋರ ವ್ಯಕ್ತಿತ್ವದ ಚಿಕ್ಕಲಕ್ಕಾದೇವಿ ಕಠಾರಿಯನ್ನು ಪಾತ್ರೆಯಲ್ಲಿಡುತ್ತಾಳೆ. ಇದರಿಂದಾಗಿ ಕೋಪಗೊಂಡ ರೇವಣಸಿದ್ಧ. ಆ ಕಠಾರಿ ಘೋರಪ್ಪನ ಹೊಟ್ಟೆಯಲ್ಲಿ ಬರುವಂತೆ ಮಾಡುತ್ತಾನೆ. ಚಿಕ್ಕಲಕ್ಕಾದೇವಿಯ ತಪ್ಪನ್ನು ಅರಿತ ಹಿರಿಯ ಲಕ್ಕಾದೇವಿ ತಕ್ಷಣವೇ ಮಹಾಲಕ್ಷ್ಮಿಯನ್ನು ಪ್ರಾರ್ಥಿಸಿ ಗಂಡನನ್ನು ಉಳಿಸುತ್ತಾಳೆ. ಒಬ್ಬಳಲ್ಲಿ ವಿನಯ-ಜಾಣ್ಮೆಗಳು ಕಂಡುಬಂದರೆ, ಇನ್ನೊಬ್ಬಳಲ್ಲಿ ಉದ್ಧಟತನ- ಕ್ರೌರ್ಯಗಳು ಕಂಡುಬರುತ್ತವೆ.

## ಇಳೆಯಾಂಡ ಗುಡಿಮಾರನ ಪತ್ನಿ

ಇಳೆಯಾಂಡ ಗುಡಿಮಾರನ ಪತ್ನಿಯ ಹೆಸರು ಕಾವ್ಯದಲ್ಲಿ ಕಂಡು ಬರುವುದಿಲ್ಲ, ಆದರೂ ಅವಳ ವ್ಯಕ್ತಿತ್ವವನ್ನು ಕವಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. "ಆಗರ್ಭ ಶ್ರೀಮಂತನಾಗಿದ್ದ

ಇಳೆಯಾಂಡಗುಡಿಮಾರ, ಇರುವುದೆಲ್ಲದನ್ನೂ ದಾನ ಮಾಡಿ ತಾನೇ ಬೇಡುವ ಸ್ಥಿತಿಗೆ ಬಂದಿದ್ದರೂ ಅವಳು ಗಂಡನ ನಿಷ್ಠೆಗೆ ಅಡ್ಡಿ ಮಾಡಿದವಳಲ್ಲ. ಗಂಡ ತನ್ನ ತಾಳಿಯನ್ನೇ ಬಿಚ್ಚಿದಾನ ಮಾಡಲು ಹೊರಟಾಗಲೂ ಅವನನ್ನು ಪ್ರಶ್ನಿಸುವುದಿಲ್ಲ.[೪೧] ಬದಲಾಗಿ ಗಂಡ ಇಟ್ಟ ಹೆಜ್ಜೆಯನ್ನೇ ಅನುಸರಿಸಿ ಸಹಕರಿಸುತ್ತಾಳೆ. ಮಧ್ಯ ರಾತ್ರಿಯಲ್ಲಿ ಬಂದ ಶಿವನಿಗೆ ಊಟ ಬಡಿಸಲು ಊಟವಿಲ್ಲದಿದ್ದಾಗ, ಆಗ ತಾನೇ ಭಿತ್ತಿರುವ 'ಮೊಳೆ'ವಿತ್ತನ್ನು ತರುವಂತೆ ಗಂಡನಿಗೆ ತಿಳಿಸುತ್ತಾಳೆ. ಕಗ್ಗತ್ತಲು ರಾತ್ರಿಯಲ್ಲಿಯೇ ಊಟ ತಯಾರಿಸಿ ಶಿವನಿಗೆ ಉಣಬಡಿಸುತ್ತಾಳೆ. ಮಗ ಸತ್ತಿದ್ದರೂ ಕೂಡ ಲೆಕ್ಕಿಸದೆ ಶಿವನಿಗೆ ಊಟ ಬಡಿಸಲು ಮುಂದಾಗುತ್ತಾಳೆ. ಗಂಡನನ್ನು ಅರ್ಥ ಮಾಡಿಕೊಂಡು ಬದುಕುವ ಅವಳ ಗುಣ ಹಿರಿದುದಾಗಿದೆ. ಹೀಗೆ ಕವಿ ಇಳೆಯಾಂಢ ಗುಡಿಮಾರನ ರಗಳೆಯಲ್ಲಿ ಭಕ್ತಿ, ಉದಾತ್ತತೆಗೆ ಸಂಬಂಧಿಸಿದ ಸನ್ನಿವೇಶಗಳನ್ನು ಸೃಷ್ಟಿಸಿರುವುದನ್ನು ಕಾಣಬಹುದು.

**ಮಂಗಳಾನನೆ ದುಗ್ಗಳೆ:**

ದುಗ್ಗಳೆ ಜೇಡರ ದಾಸಿಮಯ್ಯನ ಪತ್ನಿ. ಉತ್ತಮ ಶಿವಾಚಾರೆ. ಒಮ್ಮೆ ಶಂಕರದಾಸಿಮಯ್ಯ ಜೇಡರ ದಾಸಿಮಯ್ಯನ ಗರ್ವಭಂಗ ಮಾಡಲು ಬರುತ್ತಾನೆ. ಆಗ ಜೇಡರ ದಾಸಿಮಯ್ಯ ಶಂಕರದಾಸಿಮಯ್ಯನ ಪ್ರಸಾದಕ್ಕೆ ಬೇಕಾದ 'ಹೇರು' ಧಾನ್ಯವನ್ನು ಕೊಡಲು ಹೋಗುತ್ತಾನೆ. ಕೂಡಲೇ ಶಂಕರ ದಾಸಿಮಯ್ಯನ ಶಕ್ತಿಯನ್ನು ಅರ್ಥ ಮಾಡಿಕೊಂಡ ದುಗ್ಗಳ ಶಂಕರದಾಸಿಮಯ್ಯನಲ್ಲಿಗೆ ಬಂದು ತನ್ನ ಪತಿಯ ತಪ್ಪನ್ನು ಮನ್ನಿಸುವಂತೆ ಕೇಳಿಕೊಳ್ಳುತ್ತಾಳೆ. ಆಗ ಹೋದ ತವನಿಧಿಯು ದೊರಕುತ್ತದೆ. ಹೀಗೆ ಪತಿಯ ತಪ್ಪನ್ನು ತಿದ್ದಿದ ದುಗ್ಗಳೆ ಜಾಣೆಯಾಗಿ ಕಾವ್ಯದಲ್ಲಿ ಕಾಣಿಸಿಕೊಂಡಿದ್ದಾಳೆ.

**ಶಿವದಾಸಿಯರು**

ಇವಳು ಶಂಕರದಾಸಿಮಯ್ಯನ ಪತ್ನಿ. ದಾಸಿಮಯ್ಯನ ವ್ಯಕ್ತಿತ್ವಕ್ಕೆ ತಕ್ಕಂತೆ ನಡೆದುಕೊಂಡಳು. ದಾಸಿಮಯ್ಯ ಶಿವಭಕ್ತಿ ಪ್ರಸಾರಕ್ಕೆ ಹೋದಡೆಯಲ್ಲೆಲ್ಲಾ ಹೋಗಿ. ಅವನ ಕಾರ್ಯಕ್ಕೆ ಪ್ರೋತ್ಸಾಹ ನೀಡುತ್ತಾಳೆ. ವಿರಾಗಿಯಾಗಿ ಹೋಗಲು ಸಹಕರಿಸುತ್ತಾಳೆ. ಶಿವದಾಸಿಯ ಮೊದಲ ಹೆಸರು ಉಮ್ಮವ್ವೆ"[೪೨] ಶಂಕರ ದಾಸಿಮಯ್ಯನ ಚರಿತ್ರೆ ಬರೆದಿರುವ ಕವಿ ಹರಿಹರ ದೇವನು ಅವಳ ಪಾತ್ರವನ್ನು ಹಿಗ್ಗಿಸಿಯೇ, ಇಲ್ಲ. ಶಂಕರ ದಾಸಿಮಯ್ಯನು ಮೊದಲು ವಿಪ್ರಕುಲದವನು; ಅವನ ಮೊದಲ ಹೆಸರು "ಗೋವಿಂದದೇವ" ಊರು ಕಂದಶಿಲೆ. ವಾರಣಾಸಿಗೆ ಹೋಗುವುದಾಗಿ ಮನೆಯಿಂದ ಹೊರಟು. ತಮ್ಮೂರಿಗೆ ಗಾವುದ ದೂರದಲ್ಲಿರುವ ನವಿಲೆಯೆಂಬ ಊರಲ್ಲಿದ್ದ ಜಡೆಯ ಶಂಕರದೇವಳಕ್ಕೆ ಬಂದಃ ಜಡೆಯ ಶಂಕರನ ಅನುಗ್ರಹದಿಂದ ಕಾಶಿಗೆ ಹೋಗುವುದನ್ನು ಬಿಟ್ಟು ಅಲ್ಲಿಯೇ ನೆಲೆಸುತ್ತಾನೆ.

ಶಿವಭಕ್ತಿಯನ್ನು ಸಾಧನೆಗೈಯ್ಯುತ್ತಾನೆ. ಅಲ್ಲಿಯೇ ಶಿವದೀಕ್ಷೆ ಪಡೆಯುತ್ತಾನೆ. ಶಿವದೀಕ್ಷೆ ಪಡೆದ ನಂತರ ತನ್ನ ಮೊದಲಿನ ಗೋವಿಂದ ದೇವ ಎಂದಿದ್ದ ಹೆಸರನ್ನು ಶಂಕರ ದಾಸಿಮಯ್ಯ ಎಂದೂ ತನ್ನ ಹೆಂಡತಿಯ ಹೆಸರನ್ನು ಶಿವದಾಸಿ ಎಂದು ಬದಲಿಸಿಕೊಳ್ಳುತ್ತಾನೆ. ಗಂಡ-ಹೆಂಡಿರಿಬ್ಬರೂ ಪ್ರಾಯಶಃ ವೈಷ್ಣವದಿಂದ ಶಿವದೀಕ್ಷೆ ಪಡೆದು ಮತಾಂತರ ಹೊಂದಿದಂತೆ ಕಂಡುಬರುತ್ತದೆ.

ಮತಾಂತರ ಹೊಂದಿದವರು ಕೆಲವರು ಹೆಸರನ್ನು ಬದಲಿಸಿಕೊಳ್ಳುತ್ತಿದ್ದರೆಂಬುದಕ್ಕೆ ಇದೊಂದು ಉದಾಹರಣೆ. ಶಿವಶರಣೆಯರು ಗಂಡನನ್ನು ನೆರಳಿನಂತೆ ಹಿಂಬಾಲಿಸಿದವರು. ಅವರು ಶಿವಭಕ್ತಿಯ ಪ್ರಸಾರಕ್ಕೆ ಶಂಕರದಾಸಿಮಯ್ಯಗಳು ಹೋದಡೆಯಲ್ಲೆಲ್ಲ ಹೋಗಿ ಅವರ ಊಟ ಉಪಚಾರಗಳ ವ್ಯವಸ್ಥೆ ಮಾಡುತ್ತಿದ್ದರಂತೆ ಎಂದು ವರ್ಣಿಸಿದ್ದಾನೆ.[೪೩] ಶಂಕರದಾಸಿಮಯ್ಯನು ಜೇಡರದಾಸಿಮಯ್ಯನ ಅಹಂಕಾರವನ್ನು ಹಿಮ್ಮೆಟ್ಟಿಸಿದ ವ್ಯಕ್ತಿಯಾದರೂ ಶಿವದಾಸಿಯರ ಪಾತ್ರವು ದುಗ್ಗಳೆಯಂತೆ, ಇಲ್ಲಿ ಎದ್ದು ಕಾಣುವುದಿಲ್ಲ. ಶಿವದಾಸಿಗೆ ತನ್ನ ಬುದ್ಧಿ ಸಾಮರ್ಥ್ಯವನ್ನು ಪ್ರಕಟಪಡಿಸುವ ಅವಕಾಶವೇ ಸಿಗದಿದ್ದುದರಿಂದ ಆಕೆಯ ವ್ಯಕ್ತಿತ್ವವು ಅಷ್ಟೊಂದು ಹಿರಿದಾಗಿ ಕಾಣಿಸುವುದಿಲ್ಲ. ಈಕೆಯನ್ನು ಲಗ್ನವಾದುದರಿಂದ ಶಂಕರದಾಸಿಮಯ್ಯನ ಭಕ್ತಿಗಾಗಲಿ, ಭಕ್ತಿಯ ಪ್ರಸಾರಕ್ಕಾಗಲಿ ಕೊರತೆಯಾಗಿಲ್ಲ. ಶಿವದಾಸಿ ಪತಿಭಕ್ತೆ. 'ಸದ್ಯೋಜಾತ'ನೆಂಬ ಶಿವಜ್ಞಾನದ ಕಂದನನ್ನು ಹೆತ್ತಮಾತೆ. ಮನೆಗೆ ಬಂದ ಮಾಹೇಶ್ವರರಿಗೆ ಉಪಚಾರ ಮಾಡಿದ ಶಿವಭಕ್ತೆ. ಗಂಡನ ಕಾರ್ಯಗಳಲ್ಲಿ ಅನುಕೂಲಗಳಾದ ಸಾಧ್ವಿ, ಗಂಡನು ಒಮ್ಮೆ ವೈರಾಗ್ಯ ಪರನಾಗಿ ವಾರಣಾಸಿಗೆ ಹೋಗಲು ನಿರ್ಧರಿಸಿ ಹೊರಟಾಗ ಯಾವ ರೀತಿಯ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸದ ಧೀರನಾರಿ ಈಕೆ. ಅಲ್ಲದೆ ಅವನು ಹೊರಟಾಗ ಇತರ ನಾರಿಯರಂತೆ ಅತ್ತು ಗೋಗರೆದುದನ್ನು ಕವಿಯು ಚಿತ್ರಿಸಿಲ್ಲ; ಭಕ್ತಿಯ ಕಾರ್ಯದಲ್ಲಿ ಗಂಡನ ಬೆನ್ನ ಹಿಂದೆಯೋ ಹೋಗಿದ್ದಾಳೆಂಬುದು ಗಮನಾರ್ಹ ವಿಷಯ. ಅತಿಸ್ವಲ್ಪ ಮಾತುಗಳಲ್ಲಿ ಹರಿಹರ ಕವಿಯು ಅವಳ ವ್ಯಕ್ತಿತ್ವವನ್ನು ರೂಪಿಸಿದ್ದಾನೆ. ಇವಳು ಪತಿಯ ನೆರಳಿನಂತೆ ಅನುಸರಿಸಿದ ಉತ್ತಮ ಗೃಹಿಣಿಯಾಗಿದ್ದಾಳೆ.

## ಪರವಳಿಗೆಯ ವೈಜಕವ್ವೆ

ಕವಿ ಆರಂಭದಲ್ಲಿಯೇ ಇವಳನ್ನು ವಿವೇಕ ನಿಧಿ ಎಂದು ಕರೆದಿದ್ದಾನೆ. ಮನಸ್ಸಿಲ್ಲದಿದ್ದರೂ ಅವಳ ಮದುವೆ ಜೈನರೊಡನೆ ನಡೆದು ಹೋಗಿದೆ. ಜೈನನಿಗೋ ಇವಳ ಶಿವಭಕ್ತಿ ಹಾಗೂ ದಾನ ಗುಣವನ್ನು ಸಹಿಸುವ ಸ್ಥಿತಿಯಲಿಲ್ಲ. ಮನಸೋ ಇಚ್ಛೆಯ ಬಡಿಯಲಾರಂಭಿಸುತ್ತಾನೆ. ಆದರೂ ವೈಜಕವ್ವೆ ಪತಿಯ ವಿರುದ್ಧ ಮಾತನಾಡ ಬಯಸುವುದಿಲ್ಲ. ಒಮ್ಮೆ ಅವಳ ಪತಿಗೆ

ವೈಜಕವ್ವೆಯ ಮಹಿಮೆ ತಿಳಿಯುತ್ತದೆ. ಆಗ ಪತಿ ಸತಿಗೆ ನಮಿಸುತ್ತಾನೆ. ವೈಜಕವ್ವೆ ಅವನಿಗೆ ಶಿವದೀಕ್ಷೆ ನೀಡಿ ಉದ್ಧರಿಸುತ್ತಾಳೆ. ಶಿವಪುರವೆಂಬ ಊರಲ್ಲಿ ಶಿವಭಕ್ತಿ-ಶಿವಭಕ್ತೆಯರ ಉದರದಲ್ಲಿ ಜನಿಸಿದ ವೈಜಕವ್ವೆ ಬಾಲ್ಯದಲ್ಲಿಯೇ ಶಿವಭಕ್ತಿ ಭಾವವುಳ್ಳವಳಾಗಿ ಬೆಳೆಯುತ್ತಾಳೆ. ಅವಳ ಯೌವ್ವನ ಬೆಳೆದಂತೆ ಶಿವಭಕ್ತಿಯೂ ಬೆಳೆಯುತ್ತದೆ. ಒಮ್ಮೆ ವೈಜಕವ್ವೆಯ ಸೋದರತ್ತೆಯು ತನ್ನ ಅಣ್ಣನ ಮನೆಗೆ ಬಂದಾಗ ವೈಜಕವ್ವೆಯನ್ನು ನೋಡಿ, ವೈಜಕವ್ವೆ ತನ್ನ ಮಗ ನೇಮಿಶೆಟ್ಟಿಗೆ ಸರಿಯಾದ ಕನ್ಯೆಯೆಂದು ಭಾವಿಸಿ ಅಣ್ಣನನ್ನು ಕೇಳುತ್ತಾಳೆ. ಆಗ ಅವಳ ಅಣ್ಣನು ಅದಕ್ಕೆ ಒಪ್ಪಲಿಲ್ಲ. ಸೋದರಳಿಯನನ್ನು 'ಸವಣಕುನ್ನಿ' ಎಂದು ಭಾವಿಸಿದನು."[೪೪]

ಹೀಗೆ ನಿರ್ದಾಕ್ಷಿಣ್ಯವಾಗಿ ಹೇಳಿದುದಕ್ಕೆ ತಂಗಿಯು ಪ್ರತಿಭಟಿಸಿ ಅಣ್ಣನ ಮನೆಯಲ್ಲಿಯೇ ಅನಶನ ವ್ರತ ಕೈಕೊಳ್ಳುತ್ತಾಳೆ. ಕೊನೆಗೆ ಆ ಊರ ಹಿರಿಯರೆಲ್ಲ ಸೇರಿ: ಜೈನರಾದೊಡೇನು, ಮಗಳ ಕೊಡುವುದೇ ಉಚಿತ' ಎಂಬ ನಿರ್ಣಯಕ್ಕೆ ಬರುತ್ತಾರೆ. ಅಣ್ಣನು ನಿರುಪಾಯನಾಗಿ ತನ್ನ ಸೋದರಳಿಯನಿಗೆ ಮಗಳನ್ನು ಕೊಡಲು ಒಪ್ಪಿ "ಸುಧರ್ಮದಿಂದ ಮಗಳನ್ನು ರಕ್ಷಿಸು" ಎಂದು ಉಪದೇಶಿಸಿ, ತಂಗಿಗೆ ತಿಳಿಸಿ, ಜೋಯಿಸನನ್ನು ಕರೆಯಿಸಿ, ಆ ದಿನವೇ ಮದುವೆಯ ಮೂಹರ್ತವನ್ನೂ ನಿಶ್ಚಯಿಸುತ್ತಾನೆ"[೪೫]. ವೈಜಕವ್ವೆಯನ್ನು ಮದುವೆಗೆ ಅಭಿಪ್ರಾಯವನ್ನೇ ಕೇಳಲಿಲ್ಲ. ಇದನ್ನು ತಿಳಿದ ವೈಜಕವ್ವೆಯು ಶಿವಾಲಯಕ್ಕೆ ಬಂದು: ಭವಿಯ ಸೋಂಕು; ಆವತೆರದೊಳು ಆರ್ಪೆನಯ್ಯ ? ತಿಳಿವಿನೊಳಗೆ ಪುಟ್ಟ ಮರೆವೆಯೊಳದೆಂತು ಪುಗುವೆನಯ್ಯಾ ? ಬೆಳಗಿನೊಳಗೆ ಬೆಳೆದು ತಮದೊಳೆಂತು ಬೀಳ್ವನಯ್ಯಾ ? ಭಕ್ತರೊಳಗೆ ಬರಿಸಿ ಭವಿಗಳೊಳಗೆ ಏಕೆ ನೂಂಕಿದೆಪ್ಪ ? ಕರುಣಿಸಯ್ಯಾ.[೪೬] ಎಂದು ಶಿವನಲ್ಲಿ ಮೊರೆ ಇಡುತ್ತಾಳೆ. ಅವಳ ಭಕ್ತಿಯ ಮೊರೆಗೆ ಶಿವನು ಕರುಣಿಸಿ ಅವಳ ಕನಸಿನಲ್ಲಿ ಬಂದು; ಮದುವೆಯಾಗಿ ಹೋಗು ಮಗಳೆ, ನಿನ್ನ ಮರೆವುದಿಲ್ಲ" [೪೭] ಎಂದು ಅವಳಿಗೆ ಅಭಯವಿತ್ತನು. ಶಿವನಿಗೆ ಭಕ್ತರನ್ನು ಯಾವ ರೀತಿ ಅನುಗ್ರಹಿಸಬೇಕೆಂಬುದು ಗೊತ್ತು. ಶಿವಭಕ್ತರು ಎಲ್ಲಿರ್ದೊಡೇನು ? ಅವರನ್ನು ಕಾದು ಸಂರಕ್ಷಿಸುವ ಹೊಣೆ ಶಿವನದಲ್ಲವೇ ? ಆದುದರಿಂದ ಶಿವಾಜ್ಞೆಯಾದುದನ್ನು ಅನುಸರಿಸಿ, ಮದುವೆಗೆ ಮರುಮಾತನಾಡದೆ ಒಪ್ಪಿಕೊಂಡಳು. ಶಿವಾಜ್ಞೆಯಿಂದ ನಡೆಯಬೇಕಾದ ಮದುವೆ ಸುಮೂಹೂರ್ತದಲ್ಲಿ ನಡೆದ ಪ್ರಸಂಗದಬಗ್ಗೆ ಕವಿ ವರ್ಣಿಸಿರುವುದನ್ನು ಕಾಣಬಹುದು.

**ಮಾತೆಯರು**

ಅ). ಮಾದಾಂಬೆ ಬಸವರಾಜ ದೇವರ ರಗಳೆಯಲ್ಲಿ ಹರಿಹರ ಕವಿಯು ಬಸವಣ್ಣನವರ ವಿನಾ ಯಾವ ವ್ಯಕ್ತಿಗಳ ಪಾತ್ರ ಚಿತ್ರಣವನ್ನೂ ವೈಭವಯುತವಾಗಿ ಹಿಗ್ಗಿಸಿಲ್ಲ. ಬಸವೇಶ್ವರನನ್ನು

ಮೆರೆಸುವ ಭರದಲ್ಲಿ ಕವಿಯು ಅವನ ತಾಯಿ, ಇಬ್ಬರು ಪತ್ನಿಯರು, ಸಾಕಿದ ಮತ್ತಬ್ಬೆ- ಇವರ ಬಗೆಗೆ ಗೌರವಾದರಗಳನ್ನು ವ್ಯಕ್ತಪಡಿಸಿದ್ದರೂ ಸಾಕಷ್ಟು ವಿವರಗಳನ್ನು ಕೊಟ್ಟಿರುವುದಿಲ್ಲ. ಇದಕ್ಕೆ ಕಾರಣ: ಬಸವಣ್ಣನವರಂತಹ ಮಹಾಪುರುಷರೊಡನೆ ಸಂಬಂಧವಿರಿಸಿಕೊಂಡ ಹೆತ್ತ ತಾಯಿ, ಜೊತೆಗಾರ್ತಿಯರಾಗಿ ಬಾಳಿದ ಪತ್ನಿಯರು, ಸಾಕಿದ ಮುತ್ತಬ್ಬೆ ಇವರೆಲ್ಲ ಯಾವುದೇ ಕಾರಣದಿಂದ ಲೌಕಿಕ ಸಂಬಂಧವನ್ನು, ಲೋಕದ ರೀತಿಯಲ್ಲಿ ಪಡೆದವರು; ನಿಮಿತ್ತ ಬಾಂಧವರು ": ಪರಮೇಶ್ವರ ಪಾರ್ವತಿಯರೇ "ಅನಿಮಿತ್ತ ಬಾಂಧವರು"-ಎಂಬ ವಿಚಾರವನ್ನು ಕವಿಯು ತಾಳಿದುದೇ ಆಗಿದೆ. ಮಾದಾಂಬೆಯು ಲೋಕವಿಖ್ಯಾತ ವ್ಯಕ್ತಿ ಬಸವಣ್ಣನನ್ನು ಹೆತ್ತ ಪೂಜ್ಯ ಮಾತೆ. ಹರಿಹರ ಕವಿಯು ಬಸವರಾಜ ದೇವರ ರಗಳೆಯ ಮೊದಲನೆಯ ಆಶ್ವಾಸದಲ್ಲಿ ಮಾದಾಂಬೆಯು ಬಸವಣ್ಣನ ಮಾತೆ ಎಂಬುದು ಮೂರು ನಾಲ್ಕು ಚರಣಗಳಲ್ಲಿ ಮಾತ್ರ ಬರೆದಿದ್ದಾನೆ.

ವಿಪ್ರನಿರ್ವಂ ಮಾದಿರಾಜನಾತನ ಸತಿಯು:

ಅಪ್ರತಿಮ ಮಾದಾಂಬೆಯೆಂದೆಂಬ ಗುಣವತಿಯು;

ಅಲೆಮಾನಿಯ ತಿಜ್ಞಾನಿಯೆಂದೆನಿಪ್ಪ ಸತಿಯ,

ಪತಿ ಭಕ್ತೆಯದರದೊಳು ಪುಗಲಲ್ಲಿ ಗುಣವತಿಯ,

ಮೃಡನ ಭಕ್ತನಪುಣ್ಯ ಸತಿಯುದರವೊಪು ತಿರೆ.[೪೮]

ಎಂದು ಮಾದಾಂಬೆಯನ್ನು ಅಪ್ರತಿಮ 'ಮಾದಾಂಬೆ' 'ಗುಣವತಿ' 'ಅತಿಮಾನಿ' ಅತಿಜ್ಞಾನಿ, ಪತಿಭಕ್ತೆ, ಮೃಡಭಕ್ತನ ಪುಣ್ಯಸತಿ ಎಂದಿರುವುದಲ್ಲದೆ, ಶಿಶುವು ಗರ್ಭದಲ್ಲಿರುವಾಗ ಹರಿಹರನು ಆಕೆಯನ್ನು, ಹೀಗೆ ವರ್ಣಿಸಿದ್ದಾನೆ.

ಮುಕರದೂಳು ಮಾರ್ಪೊಳೆವ ಚಂದ್ರಮಂಡಲದಂತೆ

ಸುಕರಾಂಬುವೊಳ್ ಪೊಳೆವ ಹಂಸಶಾಬಕದಂತೆ.

---------------------------

---------------------------

ಪುಟ್ಟುವಂತಿಕೆ ಪುಟ್ಟಿದಂ ಶಿವನ ಶಿಶುವಲ್ಲಿ"[೪೮]

ಬಸವಣ್ಣನನ್ನು ಚಂದ್ರಮಂಡಲ; ಹಂಸಶಾಬಕೆ' ಮುತ್ತು; ಅಪ್ಪು' ಮಲಯಜ' ಪರಿಮಳ ಪೌಮುದ್ಯೋಜ್ವಳ' ಎಂದು ಕರೆದರೆ, ಮಾದಾಂಬೆಯ ಗರ್ಭವನ್ನು, ಮುರುಕ "ಸುರಾಂಬು' ಚಿಪ್ಪು:"ಕಾಸಾರ' ತಂಪು ಮಲಯಾದ್ರಿ ಕೇತಕೀ ಕುಸುಮ "ಶೀತಕರ'ಎಂದು ಕರೆದಿರುವಲ್ಲಿಕವಿಯ ಔಚಿತ್ಯ ಜ್ಞಾನ ಮತ್ತುಕಲಾಜ್ಞಾನ ನಮಗೆ ಅರ್ಥವಾಗುತ್ತದೆ. "ಹತ್ತು ಕಟ್ಟುವಲ್ಲಿ ಮುತ್ತುಕಟ್ಟು' ಎನ್ನುವಂತೆ ಕವಿಯು ಸಮುಚಿತ, ಸಂಯಮ ಹಾಗೂ ಅತಿಸೂಕ್ತ ಮಾತುಗಳಲ್ಲಿ ಮಾದಾಂಬೆಯ ಗುಣಗಳನ್ನು ಚಿತಿಸಿದ್ದಾನೆ. ಅವಳು ಗೃಹಿಣಿಯಾದುದರಿಂದ ಕವಿಯು ಆ ತಾಯಿಯಲ್ಲಿ ಕಂಡ ಗುಣಗಳೆಂದರೆ ಗುಣ, ಜ್ಞಾನ, ಮಾನ ಮತ್ತು ಪಾತಿವ್ರತ್ಯ. ಬಸವಣ್ಣನಂತಹ ಕಾಂತಿಯುತ, ಸುಗಂಧಯುತ, ಕೌಶಲ್ಯವುಳ್ಳ ಮಗನನ್ನು ಅವಳು ಪಡೆಯಬೇಕಾದರೆ ಅವಳು ಅಪ್ರತಿಮಳೇ ಸರಿ. ಭಾರತೀಯ ಗೃಹಿಣಿ ಪತಿವ್ರತೆಯಾಗಿರಬೇಕಾದುದು ಅವಳ ಧರ್ಮವೆಂದು ಸಾಹಿತ್ಯ, ಶಾಸನ, ಶಾಸ್ತ್ರಗಳು ಹೇಳುತ್ತವೆಯಾದುದರಿಂದ ಅವಳೂ ಪತಿವ್ರತೆಯಾದ ಮಾತೆಯಾಗಿದ್ದಾಳೆ.

ಭಾರತೀಯ ಗೃಹಿಣಿಯು ಅಂದಿನ ಕಾಲದಲ್ಲಿ ಅತ್ತೆ, ಮಾವ, ಭಾವ, ಮೈದುನ, ನಗೆವೆಣ್ಣಂಗಳೊಡನೆ ಅಲ್ಲದೆ ಇತರ ಪರಿವಾರದೊಡನೆ ಬಾಳಬೇಕಾದ ಕಾಲವಾದುದರಿಂದ ಅವಳು ಗುಣವಂತೆಯೂ ಆಗಿರಬೇಕಾಗುತ್ತಿತ್ತು. ಈ ಗುಣವಂತೆ ಮಾತ್ರ ಗರತಿ: ಗುರು ಹಿರಿಯರಲ್ಲಿ ಭಕ್ತಿ, ಗಂಡನ ಮೇಲೆ ಪ್ರೀತಿ, ಸಖೀಜನರಲ್ಲಿ ಸಖ್ಯವೃತ್ತಿ, ಮಕ್ಕಳಲ್ಲಿ ವಾತ್ಸಲ್ಯ, ಪರಿಜನರಲ್ಲಿ ದಾಕ್ಷಿಣ್ಯ-ಈ ಮೊದಲಾದವೇ ಭಾರತೀಯ ಗರತಿಯರ ಲಕ್ಷಣಗಳಾಗಿವೆ". ಬುದ್ಧಿವಂತ ಮಕ್ಕಳನ್ನು ಹಡೆಯಲು ತಾಯಿ ಜ್ಞಾನವತಿ ಯಾಗಿರಬೇಕಲ್ಲವೇ ? ಭೂಮಿ ಇದ್ದಂತೆ ಬೆಳೆ ಬರಲು ಸಾಧ್ಯ ಬಸವಣ್ಣನಂತಹ ಅನುಪಮ ಶಿವಜ್ಞಾನಿಯನ್ನು ಹಡೆಯಬೇಕಾದ ಮಾದಾಂಬೆಯನ್ನು ಹರಿಹರ ಕವಿಯು ಅತಿಜ್ಞಾನಿ ಎಂದು ಕರೆದ್ದಿದು ಸಮಂಜಸವಾಗಿದೆ.

ಮಾದಾಂಬೆಯ ಇನ್ನೊಂದು ಗುಣ ಅತಿಮಾತಿ 'ಯೆಂದುದು ಮಾನ, ಲಜ್ಜೆ, ನಾಚಿಕೆ. ಪ್ರತಿಯೊಬ್ಬ ಸ್ತ್ರೀಗೂ ಇರಬೇಕಾದ ಗುಣ. ಆದುದರಿಂದಲೇ ನಾಣಿಲಿವೆಣ್ ನಗೆಗಡೆಯಕ್ಕುಂ"[೫೦] ಎಂಬ ನಾಣ್ಣುಡಿ ಪ್ರಚಲಿತವಿತ್ತು. ಮಾನವೇ ಧನವೆಂದು ತಿಳಿಯುತ್ತಿದ್ದ ಕಾಲವೂ ಇತ್ತು. ಆದುದರಿಂದ ಮಾದಾಂಬೆಯನ್ನು ಕವಿಯು ಅತಿಮಾನಿ ಎಂದು ಕರೆದುದು ಬಹುಸೂಕ್ತ. ಬಸವಣ್ಣನನ್ನು ಧರಿಸಿದ ಮಾದಾಂಬೆಯ ಗರ್ಭವನ್ನು ಧರಿಸಿದ ಮಾದಾಂಬೆಯ ಗರ್ಭವನ್ನು ಪುಣ್ಯಗರ್ಭವೆಂದು ಕರೆದಿದ್ದಾನೆ.

## ಯಸ್ಯಜ್ಞಾನದೇವಿ

ಈಕೆ ಮಹಾಶಿವಭಕ್ತೆ ನಂಬಿಯಣ್ಣನನ್ನು ಹಡೆದ ತಾಯಿ. ನಂಬಿಯಣ್ಣನ ರಗಳೆಯಲ್ಲಿ ಹರಿಹರ ನಮಗೆ ಈ ತಾಯಿಯ ಪರಿಚಯ ಮಾಡಿಸುತ್ತಾನೆ; ಸೌಂದರ ಪೆರುಮಾಳ್' ಎಂದು ಪ್ರಸಿದ್ಧಿ ಪಡೆದ ನಂಬಿಯಣ್ಣ ತಮಿಳುನಾಡಿನ ಶೈವಧರ್ಮದ ಚಮರಾಜಾ ಚಾರ್ಯದಲ್ಲಿ ಒಬ್ಬನು. ಹರಿಹರ ಬರೆದ ರಗಳೆಗಳಲ್ಲಿ ನಂಬಿಯಣ್ಣನ ರಗಳೆಯೇ ದೊಡ್ಡದು. ಹತ್ತೊಂಬತ್ತು ಸ್ಥಲಗಳಲ್ಲಿ ನಂಬಿಯಣ್ಣನ ಚಿತ್ರವನ್ನು ಚಿತ್ರಿಸಿದ್ದಾನೆ.

ನಂಬಿಯಣ್ಣ ಭೋಗದಲ್ಲಿದ್ದೂ ಅದನ್ನು ದಾಟಿ ಶಿವಾನುಗ್ರಹಕ್ಕೆ ಪಾತ್ರನಾದವನು. ಆತನು ಶಿವನ ಶಿಶು, ಕಾರಣಿಕ. ಈ ಮಹಾನುಭಾವನ ತಾಯಿಯೇ ಯಸ್ಯಜ್ಞಾನಿ ದೇವಿಯರು. ಕೈಲಾಸದಲ್ಲಿ ಪುಷ್ಪದತ್ತನು ಇರ್ವರು ವಿಳಾಸಿನಿಯರನ್ನು ಕಂಡು ಮನಸೋಲಲು, ಆ ಇಬ್ಬರು ವಿಳಾಸನಿಯರು ಪುಷ್ಪದತ್ತನೂ ಭೂಲೋಕದಲ್ಲಿ ಭೋಗಗಳನ್ನು ಸವಿಯಲು ಜನಿಸುತ್ತಾರೆ. ಅವರ ಜನನಕ್ಕೆ ಶಿವನ ಆಜ್ಞೆಯೇ ಕಾರಣ. ಶಿವನ ಅಪ್ಪಣೆಯಂತೆ ನಂಬಿಯಣ್ಣನು ಚೋಳ ದೇಶದಲ್ಲಿ"ನರಸಿಂಗ ಮೊನೆಯರ್' ಆಳುತ್ತಿದ್ದತಿರುನಾವಲೂರ್' ಎಂಬ ಪಟ್ಟಣದಲ್ಲಿ ಶಿವನರ್ಚಿಪ ಜೆಡೆಯ ನಾಯನಾರ್ ಇವರ ಪತ್ನಿ ಯಸ್ಯಜ್ಞಾನಿದೇವಿಯರ ಬಸುರೊಳಗೆ ಪ್ರವೇಶಿಸುತ್ತಾನೆ"[೫೧]

ಆಗ ಹರಿಹರ ಆ ಮಾತೆಯ ಗರ್ಭವನ್ನು ಹೀಗೆ ವರ್ಣಿಸಿದ್ದಾನೆ.

ಸುರಚಿರ ನಿಧಾನವೊಳಗಿರ್ಪ ಏಸುಮತಿಯಂತೆ,

ವರ ಫಳ ವನೊಳಕೊಂಡ ಸುರಕಲ್ಪ ಲತೆಯಂತೆ,

ಅಮೃತಕಳೆ ತೀವಿರ್ಪ ಕಾಮದೇನುವಿನಂತೆ,

ಅಮಮ ಮೆಱೆವೃತ್ತಿರ್ದಳಿಂತು ಮೆಱೆಯಲ್ ಮುಂತೆ" [೫೨]

ಅವನು ಉದಯವಾಗುವುದನ್ನು ಕಂಡು ಹೀಗೆ ವಿವರಿಸಿದ್ದಾನೆ.

ಶಶಿಕಳೆಯ ಬಸಱಿಂದೆ ಬೆಳ್ದಿಂಗಳೊಗೆವಂತೆ

ಎಸೆವ ಪಾಲ್ಗಡಲಿಂದೆ ಶಶಿಬಿಂಬವೊಗೆವಂತೆ

ಶಿವನ ಭಕ್ತಿಯ ಸೊಬಗು ಮೂರ್ತಿ ಗೊಂಡೊಗೆವಂತೆ

ಉದಯವಾದಂ ಪುಣ್ಯ ಕೀರ್ತಿ ಭೂಷಣನಂದು"[೫೬]

ಈ ಮಾತೆಯ ಗರ್ಭವು 'ಏಸುಮತಿ' 'ಕಲ್ಪಲತೆ' ಕಾಮಧೇನು' 'ಮೊದಲಾದವುಗಳಿಗೆ ಹೋಲಿಸಲ್ಪಟ್ಟಿದೆ. ಅಲ್ಲದೆ ಶಶಿಕಳೆ. ಪಾಲ್ಗಡಲು' ಇವುಗಳನ್ನು ಹೋಲಿಕೆಗಳಾಗಿ ಕವಿ ಬಳಸಿಕೊಂಡಿದ್ದಾನೆ. ಇವೆಲ್ಲ ಅತ್ಯಂತ ಮನೋಹರ ಉಪಮೆಗಳು ಎಂದರೆ ತಪ್ಪುಗಲಾರದು. ಈ ಮಾತೆಯ ಬಗ್ಗೆ ಹರಿಹರ ವಿಲಿತ ಪೂಜ್ಯ ಭಾವನೆ ಇಟ್ಟುಕೊಂಡಿದ್ದಾನೆಂ ಬುದಕ್ಕೆ ಈ ಉಪಮೆಗಳೇ ಸಾಕ್ಷಿಯಾಗಿವೆ. ನಂಬಿಯಣ್ಣನೆಂಬ ಸಂಪತ್ತು. ಉತ್ತಮ ಫಲ. ಅಮೃತವನ್ನೇ ಈ ತಾಯಿ ತನ್ನ ಗರ್ಭದಲ್ಲಿರಿಸಿಕೊಂಡಿದ್ದಾಳೆಂದು ಕವಿಯು ಆ ರೀತಿ ವರ್ಣಿಸಿರುವುದು ಕಾಣಬಹುದು. ನಂಬಿಯಣ್ಣ ಬಡಕುಟುಂಬದಲ್ಲಿ ಜನಿಸಿದ್ದಾನೆ. ಈ ಮಾತನ್ನು ನರಸಿಂಗ ಮೊನೆಯರು.

"ಈ ಕಾರಣಿಕಂ ನೀವಿಕ್ಕುವ ಕೀರೆಗಂ ಬರಗಿನೋಗ ರಕ್ಕುಂ ಪುಟ್ಟದವನಲ್ಲ"[೫೭] ಎಂದು ಆಡುವಾಗ ಹೇಳಿದ್ದಾನೆ. ಆದುದರಿಂದ ಅವರು ಬಡವರಾಗಿದ್ದರೆಂದು ಸ್ಪಷ್ಟವಾಗುತ್ತದೆ. ಯಸ್ಯಜ್ಞಾನದೇವಿ ಬಡವರಾಗಿದ್ದರೂ ಲೋಕವಿಖ್ಯಾತರಾಗುವಂತಹ ಶಿಶುವನ್ನು ಪಡೆದ ಕೀರ್ತಿಗೆ ಭಾಜನರಾಗಿದ್ದಾರೆ. ಈ ದೇವಿ ಬಡವರಾಗಿದ್ದರೂ ಅವರ ಭಕ್ತಿ, ಭಾವನೆಗಳು ಬಡವಾಗಿರಲಿಲ್ಲ. ಮಹಾವ್ಯಕ್ತಿಗಳು ಬಡವರಲ್ಲೇಕೆ ಹುಟ್ಟುಬಾರದು ? ದೈವಾನುಗ್ರಹವು ವ್ಯಕ್ತಿಗಳಿಗೆ ಏನನ್ನೂ ಮಾಡದು ಶಿಶುವೇಷದ ನಂಬಿಯಣ್ಣನು ಈ ತಾಯಿಯ ಮಡಿಲಲ್ಲಿ ಐದು ವರುಷಗಳವರೆಗೆ ಬೆಳೆಯುತ್ತಾನೆ. ಒಂದು ದಿನ ತಿರುವಾಲೂರ ಬೀದಿಯಲ್ಲಿ ನಾಲ್ಕೈದು ಓರಿಗೆಯ ಮಕ್ಕಳೊಡನೆ ಬಂಡಿಯಾಟ ಆಡುವಾಗ ನರಸಿಂಗ ಮೊನೆಯರ ಪಟ್ಟದಾನೆಯು ಮದವೇರಿ, ರಕ್ಷಕರನ್ನು ಕಡೆಗಣಿಸಿ, ಬೀದಿಯಲ್ಲಿ ಹಾಹಾಕಾರವನ್ನುಂಟು ಮಾಡಿ ಶಿಶು ನಂಬಿಯಣ್ಣನು ಆಡುತ್ತಿದ್ದ ಸ್ಥಳಕ್ಕೆ ಧಾವಿಸುತ್ತದೆ;

ಉಳಿದ ಮಕ್ಕಳೆಲ್ಲ ಬಂಡಿಯನ್ನು ಬಿಟ್ಟು ಓಡಿದರೆ ನಂಬಿಯಣ್ಣನು ಅಲ್ಲಿಯೇ ನಿಂತಿರುತ್ತಾನೆ. ಬಂದ ಆನೆಯು ಆತನಿದ್ದ ಬಂಡಿಗೆ ಪ್ರದಕ್ಷಿಣೆ ಹಾಕಿ, ಆತನಿಗೆ ನಮಸ್ಕರಿಸಿ, ಸರ್ರನೆ ತಿರುಗುತ್ತದೆ. ಅಲ್ಲಿ ನೆರೆದಿದ್ದ ಜನಸಂದಣಿ, ಮಾತ್ರ, ಈ ಸನ್ನಿವೇಶ ಕಂಡು ಅಚ್ಚರಿ ಪಡುತ್ತದೆ. ಈ ಸುದ್ದಿಯ ನರಸಿಂಗ ಮೊನೆಯರ ಕಿವಿಗೆ ತಲುಪಿದಾಗ ಕಾಲ್ನಡಿಗೆಯಿಂದಲೇ ಆ ಸ್ಥಳಕ್ಕೆ ಅವರು ಧಾವಿಸುತ್ತಾರೆ. ಜನರ ಕುತೂಹಲ ಹಾಗೂ ನೆರೆದ ನೆರವಿಯನ್ನು ಕಂಡು ಈ ರೀತಿ ಅಚ್ಚರಿ ವ್ಯಕ್ತಪಡಿಸುತ್ತಾರೆ.

"ಇದು ಆರಮಗಂ ? ಆರ ಪುಣ್ಯದ ಪುಂಜಂ ?

ಇದು ಆ ಸಾಮರ್ಥ್ಯಂ ? ಆರ ಚಲ್ವಿನ ಅಂಕುರಂ-"[೫೫] ?

ಎಂದು ಕೌತುಕ ವ್ಯಕ್ತಪಡಿಸುತ್ತಾರೆ. ಈ ವರ್ತಮಾನ ಕೇಳಿದ ನಂಬಿಯಣ್ಣನ ತಂದೆ-ತಾಯಿಗಳು ಗಾಬರಿಗೊಂಡು, ದುಃಖಿತರಾಗಿ ಸ್ಥಳಕ್ಕೆ ಧಾವಿಸುತ್ತಾರೆ. ಮಹಾ ಅಪಘಾತಕ್ಕೀಡಾದ ಮಗನು ಅಪಘಾತದಲ್ಲಿ ಬದುಕಿ ಉಳಿದರೆ ಯಾವ ತಾಯ್ತಂದೆಗಳಿಗೆ ಸಂತಸವಾಗಲಾರದು ? ಈ ತಾಯಿ, ಮಲ್ಲೆಯ ಮುಗುಳ್ಗೆ ಆಶ್ರಯದಾತ ಅತ್ತು. ಅಲ್ಪರಿದ ರೀತಿಯು ಹೆತ್ತ ಮೊರೆಗೆ ಸಹಜವಾಗಿದೆ. ಇಂತಹ ಅದ್ಭುತ ಮಗುವನ್ನು ತಮಗೆ ಕೊಡು ಎಂದು ನರಸಿಂಗ ಮೊನೆಯರು ಯಸ್ಯಜ್ಞಾನದೇವಿಯನ್ನು ಕೇಳಿದಾಗ ಅವರ ಆಸೆ ಪೂರೈಸಲು ಹಣವನ್ನು ಅಪೇಕ್ಷಿಸದೆ, ಮಗನ ಸುಖ-ನೆಮ್ಮದಿಯನ್ನು ಬಯಸಿ ಯಾವ ಕಟ್ಟಳೆಯು ಇಲ್ಲದೆ ನರಸಿಂಗ ಮೊನೆಯರಿಗೆ ತ್ಯಾಗ ಮಾಡುತ್ತಾಳೆ. ಹೀಗೆ ಹರಿಹರ ಆಕೆಯ ಪರ ಕಾವ್ಯರಚಿಸಿರುವುದನ್ನು ಕಾಣಬಹುದು.

### ಇ). ಪದ್ಮಾವತಿ

ಇವಳು ಮಲುಹಣಿಯ ತಾಯಿ, ಪಾತ್ರದ ವಿಳಾಸಿನಿ, ವೃತ್ತಿಯಿಂದ ದೇವದಾಸಿಯರ ವರ್ಗಕ್ಕೆ ಸೇರಿದವಳೆಂದು ಗೋಚರಿಸುತ್ತದೆ. ಅವಳಿಗೆ ಮಗಳ ಸುಖಕ್ಕಿಂತ ಸ್ವಾರ್ಥವೇ ಮೇಲೆನ್ನುವಂತೆ ಕಂಡುಬಂದರೂ ಅದು ಬಹುಕಾಲದಿಂದ ನಡೆದು ಬಂದ ವೇಶ್ಯೆಯ ಸಂಪ್ರದಾಯದ ವರ್ತನೆಯಾಗಿದೆ. ಅವಳಿಗೆ ಯಾವಾಗಲೂ ಹಣದ ಮೇಲೆಯೇ ಲವಲವಿಕೆ ಹೆಚ್ಚು. ಹಣಕೊಡುವವರೆಲ್ಲರೂ ಮಲುಹಣಿಗೆ 'ಮಾವಂದಿರು' ಎಂದು ಹೇಳುವ ಮನೋಭಾವ ಅವಳದು. ತನ್ನ ಮಗಳು ಮಲುಹಣಿ ಕುಲದ ಕಸುಬನ್ನು ಮುಂದುವರಿಸಿಕೊಂಡೇ ಹೋಗಬೇಕೆಂಬುದು ಅವಳ ಆಸೆ.

ಆ ಕಸುಬಿಗೆ ಅನುಕೂಲವಾಗುವ ರೂಪ, ಲಾವಣ್ಯ, ಹರಯ, ನಾಟ್ಯ ಎಲ್ಲವೂ ದೈವವಶಾತ್ ದೊರಕಿರುವಾಗ ಏಕೆ ಉಪಯೋಗಿಸಿಕೊಳ್ಳಬಾರದೆಂದು ಅವಳ ಮಾನವ ಸಹಜ ಸ್ವಭಾವಕ್ಕೆ ಎನಿಸಿದೆ. ತನ್ನ ಮಗಳನ್ನು ಅತ್ಯಂತ ರಮ್ಯವಾಗಿ ಅಲಂಕರಿಸಿಕೊಂಡು ವಿಜಯೇಶ್ವರ ದೇವಾಲಯಕ್ಕೆ ಹೋಗುವಲ್ಲಿ ಅವಳಿಗೆ ಭೇಟಿ ಹಿಡಿಯುವುದೇ ಮುಖ್ಯ ಉದ್ದೇಶ; ಆ ಬಲೆಯಲ್ಲಿ ತಕ್ಷಣವೇ ಬಿದ್ಧ ಮಲುಹಣ ಯೌವ್ವನಿಗ, ರಸಿಕ, ಸಮರ್ಥನೆಂಬುದನ್ನು ತಕ್ಷಣ ಅರಿಯಲು ಅವಳಿಗೆ ತಡವಾಗಲಿಲ್ಲ. ಅಂತಹ ಜಾಣ್ಮೆ ಅವಳದ್ದು. ಆದುದರಿಂದ ಮಲುಹಣ- ಮಲುಹಣಿಯರನ್ನು ಶಯ್ಯಾಗೃಹದಲ್ಲಿ 'ಜವಳಿಗೊಳಿಸಿ ಜಾರಿದ ಜಾಣೆ. ಮಲುಹಣನೊಡನೆ ಮೊದ ಮೊದಲು ಸರಸದಿಂದ ವರ್ತಿಸಿ

ಹಣತೀರಿದ ಮೇಲೆ ವಿರಸದಿಂದ ವರ್ತಿಸಿದ್ದು, ಸರಿಯಲ್ಲವೆನ್ನಬಹುದು; ಯಾಕೆಂದರೆ ಅದು ಅವಳ ವೃತ್ತಿಯ ರೀತಿ. ಮಲುಹಣನ ಹಣವನ್ನೆಲ್ಲ ತಿಂದು ತೀರಿದ ಮೇಲೆ ಅವನ ಹಣವೆಲ್ಲವೂ ಕಾಲಿಯಾದ ಮೇಲೆ ಕ್ರೂರಳಾಗಿ ವರ್ತಿಸುತ್ತಾಳೆ. ಅವನು ನಿಂದಲ್ಲಿ ನೀರು ಚೆಲ್ಲುವುದು, ಸರಿಕರೊಳು ಅವನನ್ನು ನಿಂದಿಸುವುದು, ಹುಸಿದಗಹಕ್ಕೆ ಸಾಲವಿದೆಯೆನ್ನುವುದು, –ಇವೆಲ್ಲ ಅವಳು ಗೈದ ನಿಷ್ಕರುಣೆಯ ಕ್ರಿಯೆಗಳು, ಅನುಚಿತ ವರ್ತನೆಗಳು, ಹಣವೆಂದರೆ ಹೆಣವು ಬಾಯಿ ತೆರೆದಂತೆ ಅವಳ ಬಾಯಿ, ಅವಳು ಸಾಮಾನ್ಯ ಕುಂಟಣಿಯಲ್ಲ. ರಕ್ಕಸಂಗುಂಟಣಿ ! ಅವಳ ವರ್ತನೆ, ಅವಳನುಡಿ, ಎಲ್ಲವೂ ಕೊಡುಕೊಳ್ಳಿಯವು. ಬಹಳ ದಕ್ಷಿಣೆ ಕೊಟ್ಟವರಿಗೆ ಪೂಜಾರಿ ತೀರ್ಥ–ಪ್ರಸಾದಗಳನ್ನಿತ್ತಂತ್ತೆ ! ಭಗವಂತನ ದರ್ಶನ ಮಾಡಿಸುವುದಲ್ಲ. ತನ್ನ ವೃತ್ತಿಯಿಂದ ಬಂದುದನ್ನು, ಯಾವುದನ್ನು ವೃತ್ತಿ ಧರ್ಮವೆಂದು ತಿಳಿದಿದ್ದಳೋ ಅದನ್ನೇ ತನ್ನಮಗಳಿಗೂ ಕಲಿಸಲು ಪ್ರಯತ್ನಿಸಿದ್ದಾಳೆ.

ಹೆಂಗೂಸಿಗೆ ಮದುವೆಯಾಗಲು ಮನಸ್ಸಿಲ್ಲದಿದ್ದರೂ ಬಹಿರಂಗವಾಗಿ ಪ್ರತಿಭಟಿಸುವ ಸಾಮರ್ಥ್ಯವಿಲ್ಲದಿರುವುದರಿಂದ ದುಃಖವನ್ನು ನುಂಗಿಕೊಂಡೆ ಇದ್ದಳು. ಇಂತಹ ಸಾಮಾಜಿಕ ಪರಿಸರ ಅವಳದು, ಮದುವೆಯು ಒಂದು ದೃಷ್ಟಿಯಿಂದ ಸ್ತ್ರೀಗೆ ಕಡ್ಡಾಯವಾಗಿದ್ದಂತೆ ತೋರುತ್ತದೆ. ಇದರಿಂದ ಪಾರಾಗುವ ಯೋಚನೆಯೇ ಅವಳಿಗೆ ಹೊಳೆಯಲಿಲ್ಲ. ಪಾರಾಗುವುದಾದರೂ ಹೇಗೆ ? ಓಡಿ ಹೋಗಬೇಕು; ಅದು ಮನೆತನದ, ಮರ್ಯಾದೆಗೆ ಸಲ್ಲುವಂತಹದಲ್ಲ. ಆದುದರಿಂದ ಮದುವೆಯಂತಹ ಮಂಗಲ ಕಾರ್ಯದಲ್ಲಿ ಅವಳ ಮನಸ್ಸು ಭಾರವಾಗಿದೆ; ಶರೀರವು ಭಾರವಾಗಿದೆ. ಉಲ್ಲಾಸವೇ ಕಣ್ಮರೆಯಾಗಿದೆ. ಮನವೊಲ್ಲದೆ ಮದುವೆಯಾಗುತ್ತಾಳೆ. ಹೆಂಗೂಸಿಗೆ ಒಲ್ಲದ ಮದುವೆಯೆಂದಾದರೂ ಫಲಿಸುವುದುಂಟೇ ? ಅವಳಿ ಇಂಗಿತವನ್ನರಿತವಂಗೆ ಮನಸ್ಸು ಅಯ್ಯೋ ಎಂದೆನಿಸುತ್ತದೆ. ಹೀಗಾಗಿ ಈ ಮದುವೆಯಿಂದ ತಪ್ಪಿಸಿಕೊಳ್ಳಲು ಅವಳಿಗಾಗಲಿಲ್ಲ; ಆದರೂ ಭವಿಯೊಡನೆ ಕೂಡುವ ಮುನ್ನವೇ ತಾನು ಗಂಡಾಗಿದ್ದರಿಂದ ಪಾರಾದಳು. ಇದಕ್ಕಾಗಿ ಅವಳು ಸಾಧಿಸಿದ ಶಿವಭಕ್ತಿ ಒಂದು ಜನ್ಮದ್ದೆಂದೆನಿಸುವುದಿಲ್ಲ. "ಹರಿದರ್ಶನವಿಲ್ಲದೆ ಊಟ ಮಾಡುವುದಿಲ್ಲ" ಎಂದು ಪ್ರತಿಜ್ಞೆ ಮಾಡಿರುವುದು ಅವಳ ನಿಲುವಿಗೆ ಕಳೆ ತರುವಂತಹದಾಗಿದೆ.

**ಆ). ಕಾರಿಕಾಲೆಮ್ಮೆ**

ಕಾರಿಕಾಲೆಮ್ಮ ಜೈನನ ಹೆಂಡತಿ. ಮಹಾಶಿವಭಕ್ತೆ. ಅವಳ ಭಕ್ತಿಯಾರಿಗೂ ಅರಿಯದಂತಿತ್ತು. ಒಮ್ಮೆ ಶಿವನ ಪರೀಕ್ಷೆಯಿಂದಾಗಿ ಅವಳ ಗುಪ್ತ ಭಕ್ತಿ ಗಂಡನಿಗೆ ತಿಳಿಯುತ್ತದೆ. ಆಗ ತನ್ನ ಪತ್ನಿಯ ಮಹಿಮೆಯನ್ನು ಅರಿತ ಜೈನ ಅವಳಿಂದ ದೀಕ್ಷೆಯನ್ನು ಪಡೆಯುತ್ತಾನೆ. ಪತಿಗೆ ಶಿವ ದೀಕ್ಷೆ ನೀಡಿ

ಹೊರಡುವಾಗ, ಅವಳ ಸೌಂದರ್ಯಕ್ಕೆ ಮರುಳಾಗಿ ಹಲವರು ಹಿಂದೆ ಬರುತ್ತಾರೆ. ಆಗ ಬಾಹ್ಯ ಶರೀರವನ್ನು ಕಳಚಿ ಸೂಕ್ಷ್ಮ ಶರೀರಿಯಾಗುತ್ತಾಳೆ. ಕೈಲಾಸಕ್ಕೆ ನಡೆಯುವಾಗ ಶಿವಶರಣರು ತುಳಿದ ದಾರಿಯನ್ನು ತುಳಿಯಬಾರದು ಎಂದು ತಿಳಿದು ತಲೆಯಲ್ಲಿ ನಡೆಯುತ್ತಾಳೆ. ಹೀಗೆ ಅವಳು ಕಾಮನನ್ನು ದಹಿಸಿದ ವಿರಾಗಿಣಿಯಾಗಿದ್ದಾಳೆ. ಮದುವೆ ಯಾದರೂ ಅವಳು ವಿರಕ್ತಯೇ ಆಗಿದ್ದಾಳೆ.

### ಇ). ಮಹಾದೇವಿಯಕ್ಕ

ಈಕೆಯ ಪಾತ್ರ ಹಲವು ಬಗೆಯ ವೈಶಿಷ್ಟ್ಯಗಳಿಂದ ಕೂಡಿದೆ. ಮಹಾದೇವಿಯಕ್ಕ ಕೈಲಾಸದಿಂದ ಭೂಮಿಗೆ ಬಂದ ಅಪ್ರತಿಮ ಸುಂದರಿ. ಭವಿಯ ಸಹವಾಸವನ್ನು ಬಲ್ಲವಳು. ಆದರೆ, ಭೂಮಿಯ ಮೋಹಕ್ಕೆ ಒಳಗಾಗಿ ಬಿಡುತ್ತಾಳೆ. ಮಹಾದೇವಿಯನ್ನು ಮೋಹಿಸಿದ ಅರಸ ಕೌಶಿಕ ಅವಳ ಮನಸ್ಸನ್ನು ಒಲಿಸಿಕೊಳ್ಳುವುದಕ್ಕಾಗಿ ಬಗೆಬಗೆಯ ಪ್ರಯತ್ನ ಮಾಡುತ್ತಾನೆ. ಕೊನೆಗೂ ಆಕೆ ಒಪ್ಪುವುದಿಲ್ಲ. ಆಗ ಬಲತ್ಕಾರದಿಂದ ಪಡೆಯಲು ಸಿದ್ಧನಾಗುತ್ತಾನೆ. ಕೊನೆಗೆ ಮೂರು ಶರತ್ತನ್ನು ವಿಧಿಸಿ ಅಕ್ಕ ಕೌಶಿಕನನ್ನು ಮದುವೆಯಾಗುತ್ತಾಳೆ. ಆದರೆ, ಆ ಮೂರು ಷರತ್ತನ್ನು ಕಾಮ ಮದನಾದ ಕೌಶಿಕ ಪರಿಪಾಲಿಸಲಾಗದೇ ಹೋಗುತ್ತಾನೆ. ಆಗ ಅಕ್ಕ ಕೇಶಾಂಬರೆಯಾಗಿ ಕೌಶಿಕನ ಅರಮನೆಯನ್ನು ತೊರೆಯುತ್ತಾಳೆ. ಶ್ರೀಗಿರಿಯ ಕಡೆಗೆ ನಡೆದು ತಾನು ಬಲಿದ ಚೆನ್ನಮಲ್ಲಿಕಾರ್ಜುನನಿಗಾಗಿ ಅರಸುತ್ತಾಳೆ. ಅಕ್ಕ ಕೌಶಿಕನೊಂದಿಗೆ ಮದುವೆಯಾದರೂ ಇದ್ದೂ ಇಲ್ಲದ ಹಾಗೆ ಅವನೊಂದಿಗೆ ಇದ್ದು, ತನ್ನ ನಿಷ್ಠೆಯನ್ನು ಮೆರೆಯುತ್ತಾಳೆ.

### ಸ್ತ್ರೀಪಾತ್ರಗಳ ಸೃಷ್ಟಿಯಲ್ಲಿ ಹರಿಹರನ ಜೀವನ ದೃಷ್ಟಿ

ಹರಿಹರ ಭಕ್ತ ಕವಿ ಶಿವನನ್ನು ಅರ್ಚಿಸುವುದು, ಅರ್ಚನೆಯ ಆನಂದದಲ್ಲಿ ವ್ಯಕ್ತಿತ್ವವನ್ನು ಕರಗಿಸುವುದು, ಶಿಲಕೃಪೆಯನ್ನು ಸಂಪಾದಿಸುವುದು ಬದುಕಿನ ಮುಖ್ಯ ಗುರಿ ಎಂದು ನಂಬಿದ್ದವನು. ಈ ಒಂದು ನಂಬಿಕೆಯ ಅವನ ವ್ಯಕ್ತಿತ್ವದ ತಳಹದಿಯಾದ್ದರಿಂದ ತನ್ನನ್ನು ಬಹಿರಂಗವಾಗಿ ನಿಯಂತ್ರಿಸುವ ಎಲ್ಲ ರೀತಿಯ ಪ್ರಭುಶಕ್ತಿಯನ್ನು ನಿರಾಕರಿಸಿ ಸ್ವತಂತ್ರವಾಗಿ ನಿಂತವನು' !; ಅಷ್ಟೇ ಅಲ್ಲ, ಅಂಥ ಪ್ರಭುಶಕ್ತಿಯ ಆಶ್ರಯದಿಂದ ದೊರೆಯಬಹುದಾದ ಸುಖ, ಸಂಪತ್ತು, ಕೀರ್ತಿ, ಗೌರವ ಇತ್ಯಾದಿ ಆಮಿಷಗಳನ್ನು ಅತ್ಯಂತ ನಿಕೃಷ್ಟವಾಗಿ ಕಂಡು, ತನ್ನ ವ್ಯಕ್ತಿತ್ವವನ್ನು ಆ ಪರಾತ್ಪರನಾದ ಶಿವನ ಸೇವೆಗೆ ಸಮರ್ಪಿಸಿಕೊಂಡವನು"[೫೬] ಪರಮ ವೈರಾಗ್ಯವನ್ನೇ ತಾತ್ವಿಕವಾಗಿ ಎತ್ತಿ ಹಿಡಿದು, ಈ ಲೋಕದ ಭೋಗ, ಐಶ್ವರ್ಯ ಇತ್ಯಾದಿಗಳು ಅಲ್ಪವೆಂಬ ಅರಿವನ್ನು ಬೆಳೆಯಿಸಿಕೊಂಡರೂ, ಆ ಕಾರಣಕ್ಕಾಗಿ ಇಹದ ಬದುಕು ತುಚ್ಛವೆಂದಾಗಲೀ, ಸಂಪೂರ್ಣ ನಿರಾಕರಣೆಗಷ್ಟೇ ಅರ್ಹವಾದದ್ದೆಂಗಾಲೀ ರಭಸದಿಂದ ಹೇಳುವ ಸ್ವಭಾವದವನಲ್ಲ. ಈ ಬದುಕು ಒಂದು ಸಾಧನಾರಂಗ,

ಶಿವಾರ್ಚನೆಗೆ ಒಂದು ವೇದಿಕೆ, ಶಿವಕೃಪೆಯ ಸಂಪಾದನೆಗೆ ಒಂದು ಮಾರ್ಗ"[೫೭] ಎಂಬ ದೃಷ್ಟಿ ಅವನದಾಗಿತ್ತು. ಈ ಜೀವನ ದೃಷ್ಟಿಯೇ ಹರಿಹರನ ಕಾವ್ಯದಲ್ಲಿ ಸ್ತ್ರೀಪಾತ್ರಗಳ ಮೂಲಕ ಪ್ರತಿಬಿಂಬಿತವಾಗಿದೆ. ರಗಳೆಗಳಲ್ಲಿ ಕಂಡು ಬರುವ ಎಲ್ಲ ಪಾತ್ರಗಳೂ ಶಿವನ ಸಾನ್ನಿಧ್ಯವನ್ನು ಬಯಸುವ ಪಾತ್ರಗಳೇ ಆಗಿವೆ. ಅದಕ್ಕಾಗಿ ಈ ಎಲ್ಲಾ ಪಾತ್ರಗಳು ಬಗೆಬಗೆಯಾಗಿ ಶಿವನನ್ನು ಅರ್ಚಿಸುತ್ತವೆ. ಅವರ ಅರ್ಚನೆ ಸಾಮಾನ್ಯ ಅರ್ಚನೆಯಲ್ಲ ! ಅಂತರಂಗ ತುಂಬಿದ ಅರ್ಚನೆ. ಹಾಗೆ ಅರ್ಚಿಸುವ ಮೂಲಕವೇ ಸ್ತ್ರೀಪಾತ್ರಗಳು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತವೆ.

ಮಹಾದೇವಿಯಕ್ಕ ತಾನು ಒಪ್ಪಿದ ಮಲ್ಲಿನಾಥನನ್ನು –

ದೇವಾ ಎನ್ನ ಹೃದಯ ಕಮಲದೊಳಗೆ ಪ್ರಜ್ವಲಿಪ್ಪ ಬೆಳಗೆ

ದೇವ ಎನ್ನಮನದ ಮನೆಯೊಳೊಪ್ಪು ತಿರ್ಪ ಬೆಳಗಿನೊಳಗೇ

ಗುರುವೆ ಬಾರಾ ಮನವೆ ಬಾರಾ ದೇವ ದೇವಾ....

...................... .................... ..................

ಪೂಜೆಯೊಳಗೆ ಮಚ್ಚಿ ಬೆಚ್ಚ ಮನಮನೆಂತು ತೆಗೆವನಯ್ಯ"[೫೮]

ಎಂದು ಪೂಜೆಯಲ್ಲಿ ನಿರತಳಾಗುತ್ತಾಳೆ. ಹರಿಹರನ ನೂತನ ರಗಳೆಗಳಲ್ಲಿ ಬರುವ ಎಲ್ಲ ಕಥೆಗಳಲ್ಲೂ ಪೂಜೆಯ ವರ್ಣನೆ ಇದೇ ರೀತಿಯಲ್ಲಿ ಮುಂದುವರಿಯುತ್ತದೆ. ಇಲ್ಲಿ ಕವಿ ಇಷ್ಟಲಿಂಗ ಪೂಜೆಯನ್ನು ಬಣ್ಣಿಸಿದ್ದಾನೆ. ಆದರೆ, ಇದೇ ಪೂಜೆ ಪುರಾತನರ ರಗಳೆಗಳಲ್ಲಿ ಭಿನ್ನ ರೀತಿಯಲ್ಲಿ ಬರುತ್ತದೆ. ಅಲ್ಲಿನ ಭಕ್ತರೆಲ್ಲಾ ಸ್ಥಾವರ ಪೂಜೆಯಲ್ಲಿ ತೊಡಗಿರುವರು. ಅಲ್ಲಿಯ ಪಾತ್ರಗಳು.

"ಕರಗುತೆ ವಿಭೂತಿಯು ಮನದ್ದೊಳಿನಂ ಮಾಡಿ

ಹರುಷದಿಂ ಪಾಡುತಂ ರುದ್ರಾಕ್ಷಿಯಂ ಸೂಡಿ

ಬಲವರು ಮನವಾಗಿ ನಲವಿಂದೆ ನಿಂದಿರುತೆ

ನಡುವಗತ್ತೊಡಗಿ ಮಧ್ಯ ರಾತ್ರಿ ಪರಿಯಂತ

ಎಡೆವಱಿಯದೀತೆ ಐದೊಳರ್ಚಿಸುತ್ತಂ ಸಂತ"[೫೯]

ಹೀಗೆ ಸ್ಥಾವರ ಪೂಜೆಯಲ್ಲಿ ನಿರತವಾಗುತ್ತವೆ. ಆದರೆ, ಎರಡೂ ಪೂಜೆಯ ಭಾವ ತೀವ್ರತೆಗಳು ಒಂದೇ ಆಗಿರುತ್ತವೆ. ಶಿವನ ಸಾನ್ನಿಧ್ಯಕ್ಕಾಗಿ ಹಾತೊರೆಯುತ್ತವೆ. ಅದರ ಪೂಜೆ ಕೇವಲ ಅಡಂಬರವಲ್ಲ, ಎಷ್ಟೋ ಪಾತ್ರಗಳು ಶಿವನಿಗಾಗಿ ತನು, ಮನ, ಧನವನ್ನೇ ಧಾರೆ ಎರೆದ ಸನ್ನಿವೇಶಗಳು ಬರುತ್ತವೆ. ಇಳೆಯಾಂಡ ಗುಡಿಮಾರ ಅಪ್ರತಿಮ ಶಿವಭಕ್ತ. ಈತ ಶಿವಭಕ್ತಿಗಾಗಿ ತನ್ನೆಲ್ಲಾ ಆಸ್ತಿಯನ್ನು ಕಳೆದುಕೊಳ್ಳುತ್ತಾನೆ. ಇಷ್ಟೆಲ್ಲ ಆದರೂ ಈತನ ಪತ್ನಿ ಮರುಮಾತನಾಡದೇ ಶಿವಶರಣರ ಸೇವೆ ಮಾಡುತ್ತಾಳೆ. ಇವರಿಬ್ಬರ ನಿಷ್ಠೆ ತನು, ಮನ, ಧನದಿಂದ ಕೂಡಿರುತ್ತದೆ. ಶಿವನಿಗಾಗಿ ಎಷ್ಟೋ ಸ್ತ್ರೀ ಪಾತ್ರಗಳು ಆತ್ಮಹತ್ಯೆಗೆ ಮುಂದಾಗುತ್ತವೆ. ಇಂತಹ ಹೃದಯ ತುಂಬಿ ಅರ್ಚನೆಯಿಂದ ಪಾತ್ರಗಳು ಶಿವನ ಮೆಚ್ಚುಗೆಯನ್ನು ಪಡೆದು ಕೈಲಾಸದಲ್ಲಿ ಗಣಪದವಿ ಪಡೆದುಕೊಂಡಿವೆ. ಮಹಾದೇವಿಯಕ್ಕ ಬಯಸಿದ್ದರೆ ಕೌಶಿಕ ಮಹಾರಾಜ ನೊಂದಿಗೆ ಮಹಾರಾಣಿಯಾಗಿ ಬದುಕಬಹುದಿತ್ತು. ಆದರೆ, ಆಕೆ ಮಲ್ಲಿಕಾರ್ಜುನಿಗಾಗಿ ಒಲಿದವಳು. ಆ ಒಲುಮೆಯ ಮುಂದೆ ಕೌಶಿಕನ ಅರಸತ್ವ ನಶ್ವರವಾಗಿ ಕಂಡಿದೆ. ತಾನು ವಿಧಿಸಿದ ಮೂರು ತಪ್ಪುಗಳು ಘಟಿಸುತ್ತಿದ್ದಂತೆಯೋ ಆಕೆ ಕೌಶಿಕನ ಅರಮನೆ ತೊರೆಯುತ್ತಾಳೆ.

ಹುಡುಕಿ ಬಂದ ಕೌಶಿಕನನ್ನು ತಿರಸ್ಕರಿಸುತ್ತಾಳೆ. ಇಂತಹ ಅನೇಕ ಪ್ರಸಂಗಗಳನ್ನು ರಗಳೆಗಳಲ್ಲಿ ಕಾಣಬಹುದು. ಹರಿಹರ ಸ್ತ್ರೀಯರ ಪಾತ್ರಗಳ ಮೈಮನಗಳ ಅಂದದೊಂದಿಗೆ ತನ್ನ ಪ್ರತಿಭೆಯಿಂದ, ಕಾವ್ಯದ ಅಂದವನ್ನು ಹೆಚ್ಚಿಸಿದ್ದಾನೆ. ಈ ಎಲ್ಲ ರಗಳೆಗಳ ವಸ್ತು ಚಾರಿತ್ರಿಕವಾದುದು. ಆದರೂ ಪಾತ್ರಗಳ ಸೃಷ್ಟಿಯಲ್ಲಿ, ನಿರೂಪಣೆಯಲ್ಲಿ ಹರಿಹರನ ಕನ್ನಡನಾಡಿನ ನೂತನ ಭಕ್ತೆಯರ ಚರಿತ್ರೆಯೆ ಆಗಿರಲಿ ಹರಿಹರ ದೇವನ ಕೈಯಲ್ಲಿ ಅವರೆಲ್ಲಾ ನಡೆ, ನುಡಿ, ಅಡುಗೆ, ಮನೆಬಾಳ್ವೆಗಳಲ್ಲೆಲ್ಲಾ ಶುದ್ಧ ಸತಿಯರೇ ಆಗಿದ್ದಾರೆ. ಕಾರಿಕಾಲೆಮ್ಮೆ, ಪದ್ಮಾವತಿ, ಪರವೆ, ಸಂಕಿಲಿಯರೆಲ್ಲಾ ಸಾಮಾನ್ಯ ಹೆಂಗಸರಂತೆ ಬಹಿರಂಗದಲ್ಲಿ ಗೃಹಿಣಿ ಜೀವನವನ್ನು ನಡೆಸಿದವರೇ, ಅಂತರಂಗದ ಆಶಯ ಮಾತ್ರ ಪಾರತೌಕಿಕವಾದುದು.

ಈ ಭೂಮಿಯಲ್ಲಿ ನಮ್ಮೆಲ್ಲ ಗುಣದೋಷಗಳೊಡನೆ ಭಕ್ತಿಸಾಧನೆಯನ್ನು ಮಾಡಬೇಕೆಂಬ ಆಸೆಯುಳ್ಳವರಿಗೆ, ಈ ಎಲ್ಲ ಸತಿಯರು, ಅವರು ಅಕ್ಕಮಹಾದೇವಿಯಂತೆ ಅರಸಿಯಾಗಿರಲಿ, ಮುತ್ತೈದೆಯಂತೆ ಮುಗ್ಧ ಪತ್ನಿಯರಾಗಿರಲಿ, ಪರವೆ, ಸಂಕಿಲೆ, ಮಲುಹಣೆಯರಂತೆ ವಿಳಾಸಿನಿಯರೇ ಆಗಿರಲಿ ತಮ್ಮ ವೈವಿಧ್ಯಮಯ ಜೀವನಾನುಭವದಿಂದ ಸನ್ಮಾರ್ಗ ದರ್ಶನ ಮಾಡುತ್ತಾರೆ. ಇವರಲ್ಲಿ ಹೇರೂರು ಹೆಂಗೂಸಿನಂತೆ ಬೇಡದ ಪತಿಯೊಡನೆ ಬಾಳಲಾರದೇ ಆತ್ಮ ಬಲ ಹಾಗೂ ಶಿವಕೃಪೆಯಿಂದ ಲಿಂಗವನ್ನೇ ಬದಲಿಸಿಕೊಂಡ ಹಟವಾದಿನಿಯರೂ ಇದ್ದಾರೆ. ಅಮ್ಮವ್ವೆಯರ ವಾತ್ಸಲ್ಯ ಭಕ್ತಿ, ಕೋಳೂರ

ಕೊಡಗೂಸಿನ ಬಾಲಸಹಜ ಮುಗ್ಧ ಸುಂದರ ಭಕ್ತಿ ಈ ತೆರನಾಗಿ ಈ ಎಲ್ಲ ಸ್ತ್ರೀಯರೂ ಭಕ್ತಿ ರತ್ನದ ವಿವಿಧ ಕೋನಗಳ ದರ್ಶನವನ್ನು ಹರಿಹರ ಮಾಡಿಸಿದ್ದಾನೆ.

ಅಂತಿಮವಾಗಿ ಹರಿಹರನ ಕಲ್ಪನೆಯಲ್ಲಿ ಶಿವನ ಸತಿ ಪಾರ್ವತಿಯೂ ಒಬ್ಬ ಮಾನವೀಯತೆಗೆ ಹೆದರುತ್ತಾಳೆ. ಹಿಂಜರಿಯುತ್ತಾಳೆ. ಕಾರಿಕಾಲೆಮ್ಮಯನ್ನು ಕಂಡಾಗ ಅಮ್ಮೆವ್ವೆಗೆ ಅತ್ತೆಯೆಂದು ಅಂಜಿ ನಮಸ್ಕಾರ ಮಾಡುತ್ತಾಳೆ. ನಡುನಡುವೆ ಏನೂ ತಿಳಿಯದೆ ಹೆಂಡತಿಯಂತೆ ನಂಬಿ ನಮ್ಮ ಮಗನೆ ಅಲ್ಲವೇ. ಆತನಿಗೆ ಕಣ್ಣುಗಳನ್ನೆಕೆ ಕೊಡಬಾರದು ಎಂದು ಹೆಣ್ಣು ಮಕ್ಕಳೆಲ್ಲರ ಪ್ರತಿನಿಧಿಯಾಗಿ ಶಿವನನ್ನು ಪ್ರಶ್ನಿಸುತ್ತಾಳೆ. ಹೆಣ್ಣು ಗಂಡುಗಳ ಜೊತೆಯಾಗುವುದು. ಕೇವಲ ದೈಹಿಕ ಅವಶ್ಯಕತೆಗಾಗಿಯಲ್ಲ ಅಥವಾ ತೌಕಕ ಸಾಧನೆಗಾಗಿ ಮಾತ್ರವಲ್ಲ. ಅದಕ್ಕೂ ಉನ್ನತವಾದ ಇನ್ನೊಂದು ಉದ್ದೇಶವೂ ಇದೆ. ಅದೇ ಆಧ್ಯಾತ್ಮ ಸಾಧನೆ. ಶಿವನ ಸಾನ್ನಿಧ್ಯ ಎಂಬುದೇ ಸ್ತ್ರೀ ಪಾತ್ರಗಳ ಮೂಲಕ ಹರಿಹರನು ಪ್ರಪಂಚಕ್ಕೆ ಕೊಡುವ ಸಂದೇಶವಾಗಿದೆ. ಇಲ್ಲಿ ಹರಿಹರ ಸ್ತ್ರೀಯರ ಮೇಲೆ ಕಾಳಜಿ, ಗೌರವ ಕೊಡುವ ಸಲುವಾಗಿ ಅವರ ಪರ ರಗಳೆಗಳನ್ನು ಬರೆದಿದ್ದಾನೆಂದರೆ ಅತಿಶಯೋಕ್ತಿಯಾಗಲಾರದು.

## ಸ್ತ್ರೀಪರ ಹೋರಾಟದ ಭೂಮಿಕೆಗಳು

ನಮ್ಮ ಬದುಕಿನ ಎಲ್ಲ ವಲಯಗಳಲ್ಲೂ ಸ್ತ್ರೀವಾದಿ ದೃಷ್ಟಿಕೋನದಿಂದ ಪುನರವಲೋಕಿಸುವ ಅಗತ್ಯವಿದೆಯಾದರೂ ನಮ್ಮ ವ್ಯವಸ್ಥೆ ಅದಕ್ಕೆ ಎಷ್ಟರ ಮಟ್ಟಿಗೆ ಸಿದ್ಧವಾಗಿದೆ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ಏಕೆಂದರೆ ಈವರೆಗೂ ನಮ್ಮ ಯಾವುದೇ ಜ್ಞಾನ ವಲಯವೂ 'ಲೋಕಗ್ರಹ ಎಂದರೆ ಅಥವಾ 'ಬದುಕಿನ ಚಿಂತನೆ' ಎಂದರೆ ಪುರುಷ ಲೋಕದ ಗ್ರಹಿಕೆ ಮತ್ತು 'ಪುರುಷ ಬದುಕಿನ ಚಿಂತನೆ' ಎಂಬ ಕೇಂದ್ರವನ್ನು ಬಿಟ್ಟುಕೊಟ್ಟಿರುವ ನಿದರ್ಶನಗಳು ಕಾಣುತ್ತಿಲ್ಲ. ನಿಜದಲ್ಲಿ ಇಂತಹ ತಾತ್ವಿಕ ಚಿಂತನೆಗಳು ದೇಶ, ಕಾಲ, ವರ್ಗ, ವರ್ಣ, ಜಾತಿ, ಕೋಮು, ಲಿಂಗ ತಾರತಮ್ಯಗಳನ್ನೆಲ್ಲ ಮೀರಿ ಇವೆಲ್ಲಕ್ಕೂ ಅತೀತವಾಗಿ ನಿಂತು ಒಟ್ಟು ಬದುಕಿನ ಸಾಮರಸ್ಯವನ್ನು ಸಾಧಿಸುವ ಆಧಾರಗಳೆನಿಸಬೇಕು. ಆದರೆ, ವಾಸ್ತವದಲ್ಲಿ ಇವು ಒಪ್ಪಬಹುದಾದ ಮೌಲ್ಯಗಳನ್ನೇ ಎತ್ತಿ ಹಿಡಿಯುತ್ತವೆ.

ಅಲ್ಲದೆ ಈ ಮೌಲ್ಯಗಳನ್ನು ಸಾರ್ವಜನಿಕಗೊಳಿಸುವ ಮೂಲಕ ದುರ್ಬಲ ಸಮುದಾಯಗಳು ಇವನ್ನೇ ಮರು ಮಾತಿಲ್ಲದೆ ಒಪ್ಪಿಕೊಳ್ಳುವಂತೆ ಕೂಡ ಒತ್ತಾಯಿಸುತ್ತವೆ. ದೊಡ್ಡ ಪ್ರಜಾಪ್ರಭುತ್ವವಾದಿ ದೋರಣೆಯೇ ಎಂಬಂತೆ ಇದನ್ನೇ 'ಲೋಕದೃಷ್ಟಿ' ಎಂದೂ ಕರೆಯಲಾಗುತ್ತದೆ. ತನ್ನ ಅಸ್ತಿತ್ವದ ಹುಡುಕಾಟದಲ್ಲಿರುವ ಯಾವುದೇ ಸಮುದಾಯ ಈ ಲೋಕದೃಷ್ಟಿಯನ್ನು ಮೊದಲಿಗೆ ಪ್ರಶ್ನಿಸಬೇಕಾಗುತ್ತದೆ. ಸಮಾಜದಲ್ಲಿ ಹಲವು ನೆಲೆಯ ತಾರತಮ್ಯಗಳಿವೆಯಾದರೂ ಲಿಂಗ ತಾರತಮ್ಯವೂ

ಈ ಎಲ್ಲ ನೆಲೆಗಳಲ್ಲೂ ಕಾಣಬರುವ ಒಂದು ರೂಢಿ. ಏಕೆಂದರೆ ಒಟ್ಟು ವ್ಯವಸ್ಥೆಯೇ ಪುರುಷ ನಿಯಂತ್ರಣದಲ್ಲಿದ್ದು, ಬದುಕಿನ ಎಲ್ಲ ನೆಲೆಗಳಲ್ಲೂ ಆಯಾ ಪುರುಷರ ಯಜಮಾನಿಕೆಯಲ್ಲಿ ಅಲ್ಲಿನ ಮಹಿಳೆಯರ ಬದುಕು ಸಿಲುಕಿರುತ್ತದೆ. ಹಾಗಾಗಿ ನಮ್ಮ ತಾತ್ವಿಕ ಚಿಂತನೆಗಳು ನಮ್ಮ ಎಲ್ಲ ಜ್ಞಾನ ವಲಯಗಳು ಲೋಕದೃಷ್ಟಿಯ ಪ್ರಸ್ತಾಪ ಮಾಡುವಾಗ ಅದಕ್ಕೆ 'ಪುರುಷ ದೃಷ್ಟಿ' ಎಂಬ ಅಘೋಷಿತ ಚೌಕಟ್ಟು ಮಾತ್ರವೇ ಇರುತ್ತದೆ. ಮೇಲುನೋಟಕ್ಕೆ ಪ್ರಜಾಪ್ರಭುತ್ವವಾದಿ ಎಂಬಂತೆಯೂ, ಸಕಲ ಸರ್ವರಿಗೂ ಅನ್ವಯವಾಗುವ ಸಾರ್ವಜನಿಕ ಗುಣದ್ದಾಗಿಯೂ ಕಾಣುವ 'ಮಾನವತಾವಾದ'ದ ತಾತ್ವಿಕತೆಯನ್ನೇ ಒಂದಿಷ್ಟು ಸೂಕ್ಷ್ಮಗಳಲ್ಲಿ ನೋಡಿದರೆ ನಮ್ಮ ಭೌದ್ಧಿಕ ಚಿಂತನೆ, ಚರ್ಚೆಗಳು ಅದೆಷ್ಟು ಸಲೀಸಾಗಿ ಭ್ರಮೆಗಳನ್ನು ಸೃಷ್ಟಿಸಬಲ್ಲವು ಎಂಬ ಅರಿವಾಗುತ್ತದೆ. ಮಾನವತಾವಾದವು ಸೃಷ್ಟಿಸುವ ಹುಸಿನೆಲೆಗಳನ್ನು ಶೋಧಿಸಲು ತೊಡಗಿದರೆ ಅವು ಪ್ರತಿಪಾದಿಸುತ್ತಿರುವುದೂ ಅಸಮಾನತೆಯ ನೆಲೆಗಳನ್ನೇ ಎಂಬುದು ಅರ್ಥವಾಗುತ್ತದೆ. ಬಿಳಿಯರು 'ಹ್ಯೂಮನಿಸಂ' ಎಂದರೆ ಅದು ಕಪ್ಪು ಜನಾಂಗವನ್ನು ಒಳಗೊಳ್ಳುವುದಿಲ್ಲ. ಮೇಲು ಜಾತಿ, ವರ್ಗದವರ ಮಾನವತಾ ವಾದದಲ್ಲಿ ಪುರುಷರು ಮಾತ್ರವೇ ಇರುವುದು. ಅಲ್ಲಿ ಮಹಿಳೆಯರ ಬದುಕು ಪರಿಗಣಿತವಾಗುವುದೇ ಇಲ್ಲ.

ಹೀಗಾಗಿ ಈ ಕಾಲಘಟ್ಟಕ್ಕೆ ಅನುಗುಣವಾಗಿ ಹರಿಹರನ ಸ್ತ್ರೀಯರು ಎಷ್ಟರ ಮಟ್ಟಿಗೆ ಪ್ರಸ್ತುತವಾಗಬಲ್ಲರು ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಹರಿಹರ ಮುಖ್ಯವಾಗಿ ಒಬ್ಬ ಭಕ್ತಕವಿ, ತನ್ನ ಭಕ್ತಿಯ ಅಭಿವ್ಯಕ್ತಿಗೆ ಭಕ್ತ-ಭಕ್ತೆಯರ ಜೀವನ ಚರಿತ್ರೆಗಳು ಕೇವಲ ಮಾಧ್ಯಮಗಳಷ್ಟೇ. ಭಕ್ತ-ಭಕ್ತೆ ಎಂಬ ಲಿಂಗ, ತಾರತಮ್ಯ ಅವನಿಗೆ ಅಗತ್ಯವಿಲ್ಲ. ಆದರೂ ಆತನ ಕಾವ್ಯಗಳಲ್ಲಿ ಸ್ತ್ರೀಯರು ಹೋರಾಡಿದ ಪ್ರಸಂಗಗಳು ಹೆಚ್ಚಾಗಿ ಕಂಡುಬರುತ್ತದೆ. ಭಕ್ತವರ್ಗದ ಮೇಲೆ ಪುರೋಹಿತರ ವರ್ಗ, ಪ್ರಜಾವರ್ಗದ ಮೇಲೆ ಪ್ರಭುವರ್ಗ, ಸ್ತ್ರೀವರ್ಗದ ಮೇಲೆ ಪುರುಷ ವರ್ಗ ತಮ್ಮ ಶೋಷಣೆಯ ನೀತಿಯನ್ನು ನಿರಂಕುಶವಾಗಿ ತೋರಿದ ಕಾಲದಲ್ಲಿ, ಸ್ತ್ರೀಯು ಈ ಮೂರು ವ್ಯವಸ್ಥೆ ವಿರುದ್ಧ ಸಿಡಿದು ನಿಂತ ಘಟನೆಗಳನ್ನು ರಗಳೆಯಲ್ಲಿ ಕಾಣುತ್ತೇವೆ. ಶಂಕರ ದಾಸಿಮಯ್ಯನ ಹೆಂಡತಿ ಶಿವದಾಸಿ, ಜೇಡರದಾಸಿಮಯ್ಯನ ಹೆಂಡತಿ ದುಗ್ಗಳೆ, ಕೇಶಿರಾಜನ ಹೆಂಡತಿ ಗಂಗಾದೇವಿ, ಪೆರ್ಮಾಡಿರಾಯನ ಹೆಂಡತಿ ಲಕುಮಾದೇವಿ, ಜಯಸಿಂಹನ ಹೆಂಡತಿ ಸುಗ್ಗಳೆ ಇವರೆಲ್ಲ ಗಂಡನ ಅಧೀನರಾಗಿದ್ದರೂ ಪುರುಷ ಸಮನರಾಗಿ ಧಾರ್ಮಿಕ ಜೀವನ ಮಾಡಿದವರು.

ಮಹಾದೇವಿಯಕ್ಕ ಅರಸು ಕೌಶಿಕನ ಕೈಹಿಡಿವ ಮುನ್ನ, ಶರತ್ತಿನ ಭಾಷಾಪತ್ರ ಬರೆಯಿಸಿಕೊಂಡು ಮದುವೆಯಾಗುವಲ್ಲಿ ವ್ಯಕ್ತವಾಗುವ ಪ್ರಶ್ನಾತೀತ ಮನೋಧರ್ಮ, ಲಿಂಗಾಭಿಮಾನಗಳನ್ನು ಮನಗಾಣಬೇಕು. ಕೌಶಿಕನ ಕಾಮಲಾಲಸೆಗೆ ಹೇಸಿ, ಅವನ ಆಡುನುಡಿಗೆ ಬೇಸರಿಸಿ, ವಿರಕ್ತೆಯಾಗಿ

ಹೊರಬೀಳುವ ಅವಳ ಪುರುಷ ಪ್ರತಿಭಟನೆಯನ್ನು ಊಹಿಸಿಕೊಳ್ಳಬೇಕು, ಅನ್ಯಮತ ಬೆಂಬಲಿಸದೆ, ಗಂಡನಿಂದ ಹೊಡೆತ ತಿಂದೂ ಪ್ರತಿಭಟಿಸುತ್ತ ಪರಿವಳಿಗೆಯಲ್ಲಿ ಶಿವಲಿಂಗ ಸ್ಥಾಪನೆ ಮಾಡಿ ವೈಜನಾಥ ದೇವಾಲಯವನ್ನಾಗಿಸಿದ ವೈಜಕವ್ವೆ ದಿಟ್ಟ ಶಿವಭಕ್ತೆಯಾಗಿ ಕಂಡುಬರುತ್ತಾಳೆ. ದಾಂಪತ್ಯ ಜೀವನಕ್ಕೆ ಹೇಸಿ, ಹೇರೂರು ಹೆಣ್ಣು ಗಂಡಸಾಗಿ ಪರಿವರ್ತನೆಯಾಗುತ್ತಾಳೆ. ಪೆರ್ಮಾಡಿರಾಯನನ್ನು ಲೆಕ್ಕಿಸದೆ ಅವನ ಸತಿ ಲಕುಮಾದೇವಿ ಜೋಮ್ಮಯ್ಯನಿಗೆ ಅನೇಕ ಕಾಣಿಕೆಗಳನ್ನು ನೀಡಿ ಶಿವಮತ ಪ್ರಸಾರಕ್ಕೆ ಅನುಕೂಲ ಮಾಡಿಕೊಳುತ್ತಾಳೆ. ಮಗನ ಸಾವನ್ನು ಗಂಡನಿಗೆ ತಿಳಿಸದೆ ಇರುವ ಕೋವೂರ ಬೊಮ್ಮಿ ತಂದೆಯ ಹನ್ನೆರಡು ಜನ ರಾಣಿಯರು ಕಠೋರ ಶಿವಭಕ್ತಿಯರಾಗಿದ್ದರು.

ಪೆರ್ಮಾಡಿರಾಯನ ಆಸ್ಥಾನದಿಂದ ಕೇಶಿರಾಜ ಹೊರ ಬಿದ್ದಾಗ, ಸುಖ-ಸಂಪತ್ತಿಗೆ ಆಶಿಸದೆ ಸತಿ ಗಂಗಾದೇವಿ ತನ್ನ ಆಭರಣಗಳನ್ನು ಸೇವಕನಿಗೆ ನೀಡಿ, ಲಿಂಗ ಹಿಡಿದು ಮನೆ ತೊರೆದು ಗಂಡ ಹೊರಟಲ್ಲಿಗೆ ಹೊರಡುತ್ತಾಳೆ. ಹೀಗೆ ಇವರೆಲ್ಲ ಪುರುಷ ಪ್ರಭುತ್ವ, ಪುರೋಹಿತ ಪ್ರಭುತ್ವ, ರಾಜ ಪ್ರಭುತ್ವದ ವಿರುದ್ಧ ಸಿಡಿದು ನಿಂತು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿದ ಮಹಿಳೆಯರು ಎಂದು ಹೇಳಬಹುದು. ವಸ್ತುವಿನಲ್ಲಿ ಹೊಸತನ ತೋರಿದ ಹರಿಹರನಿಗೆ ಮಾರ್ಗ ಕವಿಗಳ ಪ್ರಭಾವ ಆಗಿಲ್ಲವೆಂದು ಹೇಳಲಿಕ್ಕಾಗುವುದಿಲ್ಲ. ಪಂಪನು ಒಂದೆಡೆ ತಾಯೆ ನೀನು ಬಂದುದು ನನಗೆ ಪುಣ್ಯವೇ ಬಂದಂತಾಗಿದೆ. ಎಂದರೆ, ಹರಿಹರನು 'ಪುರದ ಪುಣ್ಯವು ಹೆಣ್ಣುರೂಪವಾಗಿ ಹೊರಹೋದಂತೆ" ಎಂದು ಮಾಹಾದೇವಿಯಕ್ಕನನ್ನು ಕುರಿತು ವರ್ಣಿಸುತ್ತಾನೆ. ರಾಘವಾಂಕನೂ "ಪುರದ ಪುಣ್ಯವು ಪುರುಷಾಕಾರದಿಂದ ಹೊರಟಿದೆ". ಎಂದು ಹರಿಶ್ಚಂದ್ರ ಊರು ಬಿಟ್ಟು ದೃಶ್ಯ ಚಿತ್ರಿಸುತ್ತಾನೆ. ಪುಣ್ಯ ಪುರವು ಪಡೆದ ಅರ್ಥ, ಅದು ವೈವಿಧ್ಯಮಯ ರೂಪಗಳಲ್ಲಿ ಹರಿಹರನ ಕಾವ್ಯದ ತುಂಬ ಪ್ರವಹಿಸಿರುವುದನ್ನು ಗಮನಿಸಬಹುದು.

ಹರಿಹರನದು ಅಪ್ಪಟ ಪ್ರಜಾಪ್ರಭುತ್ವ ಮನಸ್ಸು, ಕಠೋರ ಶಿವಭಕ್ತಿ, ಶಿವಧರ್ಮ ನಿಷ್ಠೆಯಿಂದಾಗಿ ಕಾವ್ಯಗಳುದ್ದಕ್ಕೂ ಭಕ್ತಿ ಮೌಲ್ಯವನ್ನು ಹೊರೆಯುತ್ತಾನೆ. ಇಷ್ಟೂದಿನ ಇಂದ್ರ ಚಂದ್ರನೆಂದು ವರ್ಣಿಸಿಕೊಂಡಿದ್ದ ರಾಜಮಹಾರಾಜರುಗಳು ಕಾಲ ಕೆರಹಿಗಿಂತ ಕಡೆಯಾಗಬಲ್ಲ ವರ್ಣನೆಗೀಡಾಗುತ್ತಾರೆ. ಹರಿಹರನಿಂದ ವಜ್ರ ವೈಢೂರ್ಯದ ಭಾರವಾದ ಕಿರೀಟಕ್ಕಿಂತ, ಕಿರೀಟದಾರಿ ತಲೆಗಿಂತ ಮಾದರ ಚನ್ನನು ಹೊತ್ತ ಹುಲ್ಲ ಹೊರೆ ಮತ್ತು ಅವನ ತಲೆಹರಿಹರನಿಗೆ ಪ್ರಿಯವಾಗುತ್ತದೆ. ಅರಸರ ಪಾದ-ಪಾದುಕೆಗಳು ಶ್ರೇಷ್ಠತೆ ಪಡೆದ ಕಾಲಾವಧಿಯಲ್ಲಿಯೇ ಮಾದರವನ ಪಾದ ಪಾದದ ಕೆರವುಗಳು ಶ್ರೇಷ್ಠವೆನಿಸಿ, ಚಕ್ರವರ್ತಿಯ ಕಿರೀಟಕ್ಕಿಂತಲೂ ಬೆಲೆಯುಳ್ಳವಾಗುತ್ತವೆ. ಕುಲಜಾತಿಗಳು ಈ ಹಿಂದೆ ಕಾವ್ಯಗಳಲ್ಲಿ ಚರ್ಚೆಗಿಡಾಗಿದ್ದರೂ ರಗಳೆಗಳಲ್ಲಿ ಕನಿಷ್ಠ ಕುಲಜಾತಿಯವರೇ ನಾಯಕರಾಗುತ್ತಾರೆ.

ಕಾವ್ಯ ನಾಯಕನೂ ಆಶ್ರಯ ನೀಡಿದ ದೊರೆಯೂ ಅಭಿನ್ನರಾಗಿದ್ದರಿಂದ ಪಂಪರನ್ನಾದಿಗಳು ಭೌತಿಕ ಸಂಪತ್ತನ್ನು ಅನುಭವಿಸಿದರೆ, ಬಹುಶಃ ದೊರೆಗಳನ್ನು ಟೀಕಿಸಿದ್ದಕ್ಕಾಗಿಯೇ ಹರಿಹರ ದೋರಸಮುದ್ರ ಬಿಟ್ಟು ಏಕಾಂಗಿಯಾಗಿ ಹಂಪೆಗೆ ಬಂದನೆಂಬ ಅನುಮಾನ ಉಂಟಾಗುತ್ತದೆ.

ಇತಿಹಾಸ ಪುನರಾವರ್ತಿಸುತ್ತದೆ ಎನ್ನುವುದಾದರೆ ಪ್ರತಿಭಟನೆಯ ಕಣವನ್ನು ನಿರ್ಮಿಸಿದವನು ಕೇಶಿರಾಜ; ಅದರಲ್ಲಿ ಹೋರಾಡಿ ಯಶಸ್ವಿಯಾದವನು ಬಸವಣ್ಣ; ಆ ಹೋರಾಟಗಳನ್ನು ಇತಿಹಾಸದಲ್ಲಿ ದಾಖಲಿಸಿದವನು ಹರಿಹರ. ಹರಿಹರನದು ಸಂಘರ್ಷಮಯ ಬದುಕು. ಅಂತಹ ಹೋರಾಟದ ಭೂಮಿಕೆಗಳು ರಗಳೆಗಳ ತುಂಬ ವ್ಯಾಪಿಸಿವೆ. ಮತ, ಭಕ್ತಿ, ಅರ್ಥ, ಧರ್ಮ ಸಂಬಂಧದ ಘರ್ಷಣೆಗಳನ್ನು ಇಲ್ಲಿ ಸಾಕಷ್ಟು ಕಾಣುತ್ತೇವೆ. ಜೈನ, ವೈಷ್ಣವ ಮತೀಯ ಸಂಘರ್ಷಗಳು, ಕ್ಷುದ್ರದೇವೋಪಾಸನೆಯ ವಿರೋಧಿ ನಿಲುವುಗಳು ಇದನ್ನು ಸಮರ್ಥಿಸಲು ಚಿಕ್ಕಪುಟ್ಟ ಪವಾಡ ಘಟಕಗಳು ರಗಳೆಗಳಲ್ಲಿ ದೊರೆಯುತ್ತವೆ. ಪವಾಡ ಆವರಣದಿಂದ ದೂರ ನಿಂತು ಅವಲೋಕಿಸಿದರೆ ಶಿವಭಕ್ತರು ಉಗ್ರ ರೀತಿಯಿಂದ ಬದುಕಿ, ಏಕದೇವೋಪಾಸನೆಯನ್ನು ಚಳವಳಿಯಂತೆ ಮಾಡಿ,

ಶಿವಭಕ್ತೇತರರನ್ನು ಪರಿವರ್ತಿಸಲು ಯತ್ನಿಸಿದ್ದಾರೆನಿಸುತ್ತದೆ. ಜೈನ, ವೈಷ್ಣವ ದೇವಾಲಯ, ದೇವತ ಭಂಜನ ಮಾಡುವುದು, ಶಿವಾಲಯ, ಲಿಂಗ ಪ್ರತಿಷ್ಠಾಪನೆ ಗೈಯ್ಯುವುದು, ಅನ್ಯಮತೀಯರನ್ನು ಸದೆಬಡಿದು ಊರಿಗೆ ಊರನ್ನೆ ಶಿವಪುರ ಮಾಡುವುದು. ಇವು ರಗಳೆಗಳಲ್ಲಿ ಢಾಳಾಗಿ ಕಂಡುಬರುತ್ತವೆ. ಮಹಾಮನೆ, ಗಣಪರ್ವ, ಶಿವಗೋಷ್ಠಿ, ಪ್ರಸಾದ ವಿತರಣೆ, ರಂಗಭೋಗ ನಿರಾಕರಣೆ, ಭಕ್ತಿ ಸಂಘಟನೆ, ಭವಿಮೌಲ್ಯ ನಿರಾಕರಣೆ–ಇವು ರಗಳೆಗಳಲ್ಲಿ ಕಂಡು ಬರುವ ಸಾಮಾನ್ಯ ದೃಶ್ಯಗಳಾಗಿವೆ. ಹೀಗೆ ಹೋರಾಟದ ಸನ್ನಿವೇಶಗಳನ್ನು ಕಾಣಬಹುದು.

## ದೇಶೀ ಮಾರ್ಗ ಮತ್ತು ಹರಿಹರ

ರಗಳೆ ಕಾವ್ಯದ ಭಾಷೆಗೆ ನೀಡಿದ ಕೊಡುಗೆ ಹರಿಹರನು ಅಪಾರವಾದುದು. ಕೇಶಿರಾಜಾದಿಗಳು ರಳ-ಕುಳ-ಕ್ಷಳ ಪ್ರಯೋಗ ಮುನ್ನಿನಂತೆಯೇ ನಿರ್ದಿಷ್ಟವಾಗಿ ಮುನ್ನಡೆಯಬೇಕೆಂದು ವಾದಿಸುವಾಗ, ಅವನ ಸಮಕಾಲೀನ ಹರಿಹರ ಒಬ್ಬ ವಾಸ್ತವ ವೈಯ್ಯಾಕರಣಿ ರೀತಿಯಲ್ಲಿ ನಿಂತು, ಆ ಧೋರಣೆಯನ್ನು ನಿರಾಕರಿಸಿದುದು ತುಂಬ ಸಕಾಲಿಕ, ಆರೋಗ್ಯಪೂರ್ಣ ವಿಚಾರವೆನಿಸಿದೆ. ಹೀಗೆ ಒಂದು ಕಡೆ ಕಾವ್ಯದಲ್ಲಿ ಮಾರ್ಗ ಭಾಷೆಯನ್ನು ನಿರಾಕರಿಸುತ್ತ, ಇನ್ನೊಂದು ಕಡೆ ಭಾಷಿಕ "ವಾಸ್ತವಸತ್ಯ"ವನ್ನು ಸ್ಥಾಪಿಸಿದ ಹರಿಹರನ ರೀತಿ ತುಂಬ ಶ್ಲಾಘನೀಯವೆನಿಸಿದೆ. ಈ ಸಂದರ್ಭದಲ್ಲಿ ಅವನು ಮಾಡಿದ ಇನ್ನೊಂದು ಉಪಕಾರವೆಂದರೆ ಎಲೆಮಿಡುಕು, ಲೆಂಕ, ವೇಳೆ ವಾಳಿ, ತಲೆಗೊಳ್ಳಿ, ಸಂಬಳಿಗೋಲು, ಕಟ್ಟುಂಗೂಳು, ಪೊಲ್ಲಾದ, ಬೂವ. ಇವೆ ಮೊದಲಾದ ಬಳಕೆ ತಪ್ಪುತ್ತಲಿದ್ದ ಸಾವಿರ ಸಾವಿರ ಕನ್ನಡ ಪದಗಳನ್ನು ಮತ್ತೆ ಸಾಹಿತ್ಯದಲ್ಲಿ ಆಹ್ವಾನಿಸಿಕೊಂಡು, ಇದರಿಂದ "ಕನ್ನಡ ಪ್ರಧಾನ, ಸಂಸ್ಕೃತ ಪೂರಕ" ಎಂಬ ಹೊಸ ಭಾಷಿಕ ಹದ ಕನ್ನಡದಲ್ಲಿ ಸಿದ್ಧವಾಯಿತು.

ಈ ಭಾಷಾಪ್ರಯೋಗ ಕನ್ನಡದಲ್ಲಿ ಹೊಸ ಶೈಲಿಗೆ ಹಾದಿ ಮಾಡಿಕೊಟ್ಟಿತು. ಆಡು ಭಾಷೆಯಾಗಿದ್ದ ಕನ್ನಡ, ಬಹಳ ದಿನಗಳ ಹಿಂದೆಯೇ ತನ್ನ ಜಾಯಾಮಾನಕ್ಕೆ ಒಗ್ಗುವ ಲಿಖಿತ ಭಾಷೆಯನ್ನು ರೂಪಿಸಿಕೊಂಡು, ಸಣ್ಣ ಪ್ರಮಾಣದಲ್ಲಿಯಾದರೂ "ದೇಶೀ" ಕಾವ್ಯ ಶೈಲಿಯನ್ನು ಹುಟ್ಟು ಹಾಕಿ, ಅದನ್ನು ಮುಂದುವರಿಸಿದ್ದಿತು. ಆಗ ಪ್ರೌಢ ಸಂಸ್ಕೃತ ಭಾಷೆಯ ಸಂಪರ್ಕ ಒದಗಿ "ಮಾರ್ಗ" ಕಾವ್ಯ ಶೈಲಿಯೊಂದು ಜೊತೆಜೊತೆಗೆ ಬೆಳೆದು ಬಂತು. ಕಾಲ ಗತಿಸಿದಂತೆ ಸಂಸ್ಕೃತದ ಪ್ರವೇಶ ಅತಿರೇಖವನ್ನು ಮುಟ್ಟಿ, ಕನ್ನಡದ ಸೋಪಜ್ಞತೆ ಅಪಾಯದ ಸ್ಥಿತಿ ತಲುಪಿದಾಗ ಕನ್ನಡಿಗರು "ಮಾರ್ಗ"ದ ವಿರುದ್ಧ "ದೇಶೀ" ಚಳವಳಿ ಕೈಗೆತ್ತಿಕೊಂಡರು. ಇದು ಎರಡು ಶೈಲಿಗಳ ಸಂಘರ್ಷ, ಈಗ ರಾಜಾಸ್ಥಾನದ ಕವಿರಾಜ ಮಾರ್ಗಕಾರ ಸಹಜವಾಗಿಯೇ ಕನ್ನಡ ಪ್ರಧಾನ ಹಳೆಯ ಶೈಲಿಗಿಂತ, ಸಂಸ್ಕೃತ ಮಿಶ್ರ ಹೊಸ ಶೈಲಿಯ ಪರವಾಗಿ ಮಾತನಾಡಿದ, ಮಹಾಕವಿ ಪಂಪ "ದೇಶಿ-ಮಾರ್ಗ"ಗಳ ಸಮನ್ವಯವನ್ನು ಬೆಂಬಲಿಸಿದನಾದರೂ ಮುಂದೆ ಬಂದ ಕವಿಗಳ ಕೈಯಲ್ಲಿ ಕನ್ನಡ ವಿರಳ, ಸಂಸ್ಕೃತ ವಿಫುಲರೂಪದ ಕಾವ್ಯ ಶೈಲಿಯದೇ ಮೇಲುಗೈಯಾಯಿತು. ಹೀಗೆ ಹೊರಗಿನ ಸಂಸ್ಕೃತವು ಒಳಗಿನ ಕನ್ನಡದ ಮೇಲೆ ಸವಾರಿ ಮಾಡುತ್ತಿರುವಾಗ, ನಯಸೇನ, ಅಂಡಯ್ಯನಂಥವರು ಇದನ್ನು ತಡೆಗಟ್ಟಲು ಮಾಡಿದ ಪ್ರಯತ್ನ ವ್ಯಕ್ತಿಮಟ್ಟದಲ್ಲಿ ಉಳಿಯತೆ ಹೊರತು, ಒಂದು ವ್ಯಾಪಕ ಪರಂಪರೆಯಾಗಿ ಮುಂದುವರಿಯಲಿಲ್ಲ, ಭಾಷಾ ಸತ್ಯವೆಂಬುದು ಅಭಿಮಾನದ ನೆಲೆಗಿಂತ ವಾಸ್ತವದ ನೆಲೆಯಲ್ಲಿ ಕೃತಾರ್ಥವಾಗುವುದೆಂಬುದನ್ನು ಅರ್ಥ ಮಾಡಿಕೊಂಡು ಹರಿಹರನು, ನಯಸೇನ-ಅಂಡಯ್ಯ ಸೋತು ನೆಲೆಯಲ್ಲಿಯೇ ಗೆದ್ದ.

ಆಂಧ್ರ ಪ್ರದೇಶದಲ್ಲಿ ನನ್ನಯಾದಿ ಬ್ರಾಹ್ಮಣರಿಂದ ಕಟ್ಟಲ್ಪಟ್ಟು ಸಂಸ್ಕೃತ ಪ್ರಧಾನ ಕಾವ್ಯ ಶೈಲಿಯ ಕೋಟೆ ಪಾಲ್ಕುರಿಕೆ ಸೋಮೇಶ್ವರಾದಿ ಶೈವರಿಂದ ಕೆಡವಲ್ಪಟ್ಟು, ದೇಶೀ ಪ್ರಧಾನ ಕಾವ್ಯ ಶೈಲಿಯ ಪರಂಪರೆ ಅಲ್ಲಿ ಕಣ್ಣು ತೆರೆಯಿತು. ಅದೇ ರೀತಿ ಕರ್ನಾಟದಲ್ಲಿ ಪಂಪಾದಿ ಜೈನ ಕವಿಗಳಿಂದ ಕಟ್ಟಲ್ಪಟ್ಟು ಸಂಸ್ಕೃತ ಪ್ರಧಾನ ಕಾವ್ಯ ಶೈಲಿಯ ಕೋಟೆ ಹರಿಹರಾದಿ ಶೈವರಿಂದ ಕೆಡವಲ್ಪಟ್ಟು ದೇಶೀ ಪ್ರಧಾನ ಕಾವ್ಯ ಶೈಲಿ ಪರಂಪರೆಯು ಇಲ್ಲಿ ಕಣ್ಣ ತೆರೆದಿದು ಅಚ್ಚರಿಯ ಹೋಲಿಕೆಯಾಗಿದೆ. ಅಂದರೆ ಎರಡು ಪ್ರಾಂತಗಳಲ್ಲಿ ದ್ರಾವಿಡ ಭಾಷೆಗಳು ಅಕ್ರಮಣಕ್ಕೆ ತುತ್ತಾದಾಗ ಶೈವೇತರರು ಸಿಡಿದೆದ್ದುದು, ಮೂಲೆಗುಂಪಾಗುತ್ತಲಿದ್ದ ಸ್ವದೇಶೀ ಪರಂಪರೆಯನ್ನು ತುಂಬು ಉತ್ಸಾಹದಿಂದ ಅವರೇ ಮತ್ತೆ ವೇದಿಕೆಯ ಮೇಲೆ ನಿಲ್ಲಿಸಿದುದು, ಅಗತ್ಯ ಗಮನಿಸಬೇಕಾದ ಅಂಶವಾಗಿದೆ.

ಹರಿಹರ ಹಂಪೆಯ ಕವಿ. ಸಂಗೀತ –ಸಾಹಿತ್ಯ ಕ್ಷೇತ್ರಗಳಲ್ಲಿ ದೇಶೀಗೆ ವಿಪತ್ತು ಸಂಭವಿಸಿದ ಸಂದರ್ಭಗಳಲ್ಲಿ ಇಲ್ಲಿಯ ಪ್ರಭುದ್ಧರು ಉದ್ದಕ್ಕೂ ಸಿಡಿದೆದ್ದು, ಮತ್ತೆ ಅದನ್ನು ಮೆರೆದುದು ಚಾರಿತ್ರಿಕ ಸತ್ಯವೆನಿಸಿದೆ. ಸಂಗೀತ ಕ್ಷೇತ್ರದಲ್ಲಿ ಮಾರ್ಗ ಒತ್ತಿ ಬಂದಾಗ, ವ್ಯಾಪಕ ಅಭ್ಯಾಸ ಮಾಡಿ, ದೇಶೀ ಸಂಗೀತ ಕುರಿತ "ಬೃಹದ್ದೇಶಿ" ಕೃತಿ ರಚಿಸಿದ ಮತಂಗ ಬಹುಶಃ ಹಂಪೆಯ ಮತಂಗ ಪರ್ವತ ನಿವಾಸಿ, ಮುಂದೆ ಸಾಹಿತ್ಯ ಕ್ಷೇತ್ರದಲ್ಲಿ ಮಾರ್ಗ ಒತ್ತಿ ಬಂದಾಗ ಸಮರ ಸಾರುತ್ತ ದೇಶೀಯನ್ನು ಎತ್ತಿನಿಲ್ಲಿಸಿ, ಅದನ್ನು ಪರಂಪರೆಯಾಗಿಸಿದ ಸಂಗೀತ ಲಯದ ಸ್ಪರ್ಶ ಕೊಟ್ಟ ಹರಿದಾಸರು ಹಂಪೆಯ ನಿವಾಸಿಗಳು, ಹೀಗೆ ಉದ್ದಕ್ಕೂ ದೇಶಿಯನ್ನು ರಕ್ಷಿಸಲು ಇಲ್ಲಿಯ ಜನ ಪ್ರಯೋಗ ರೂಪದ ಇಲ್ಲವೇ ಚಳವಳಿ ರೂಪದ ಚಟುವಟಿಕೆಯಲ್ಲಿ ತೊಡಗಿದ್ದು ವಿಶೇಷವೆನಿಸಿದೆ. ಇದೇ ಕಾಲಕ್ಕೆ ದೇಶೀ ಸೃಷ್ಟಿಯಾದ ವಚನ ಸಾಹಿತ್ಯ ನಾಶವಾಗಲಿರುವಾಗ, ಅದನ್ನು ಸಂಗ್ರಹ– ಸಂಕಲನ –ಸಂಪಾದನ ರೂಪದಲ್ಲಿ ಸಂರಕ್ಷಿಸಿ, "ಸಂಯೋಜನಾ ಸಾಹಿತ್ಯ" ಸೃಷ್ಟಿಗೆ ಶ್ರೀಕಾರ ಹಾಕಿದ. ರಕ್ಷಿಸಿದ ನೂರೊಂದು ವಿರಕ್ತರು, ಹಂಪೆ ನಿವಾಸಿಗಳು, ಹೀಗೆ ಹಂಪೆಯ ಮಣ್ಣಿಗೂ ದೇಶೀ ಪ್ರಜ್ಞೆಗೂ ಒಂದು ಸಂಬಂಧವಿದೆ, ಹರಿಹರ ದೇವ ಈ ಸಂಬಂಧದ ಒಂದು ಮುಖ್ಯ ಪ್ರತಿಭೆ ಎಂದರೆ ಕ್ಲೀಷೆಯಾಗಲಾರದು.

ದೇಶೀ ಸಾಹಿತ್ಯವನ್ನು ಕನ್ನಡದಲ್ಲಿ ಸ್ಥಾಪಿಸಿದ ಯುಗ ಪ್ರವರ್ತಕ ಹರಿಹರನಲ್ಲ, ವಚನಕಾರರು ಎಂದು ಹೇಳಬಹುದಾದರೂ, ವಚನಕಾರರು ಪ್ರಜ್ಞಾಪೂರ್ವಕವಾಗಿ, ಕಾವ್ಯ ಬರೆಯಲು ಹೊರಟವರಲ್ಲ, ಕಾವ್ಯ ಸಂಪ್ರದಾಯ ಸ್ಥಾಪಿಸುವುದು ಅವರ ಉದ್ದೇಶವಾಗಿರಲಿಲ್ಲ. ಶರಣರು ಬರೆದುದು ಸಮಾಜ ಸುಧಾರಣೆಗಾಗಿ, ಆ ಬರವಣಿಗೆ ಆಕಾರ ಪಡೆದುದು ಸಾಹಿತ್ಯವಾಗಿ, ಹರಿಹರನ ಧೋರಣೆ ಇದರಿಂದ ಒಂದಿಷ್ಟು ಭಿನ್ನವಾಗಿದೆ. ಅವನು ಶರಣನಾಗಿ ಬರೆದವನಲ್ಲ. ಶರಣ ಕವಿಯಾಗಿ ಬರೆದವ. ಹೀಗಾಗಿ ಶುದ್ಧ ಸಾಹಿತ್ಯ ದೃಷ್ಟಿಯಿಂದ ಶರಣರಿಗಿಂತ ಹರಿಹರ ದೇವನನ್ನೇ ನಾವು ಯುಗ

ಪ್ರವರ್ತಕನೆನ್ನಬೇಕಾಗುತ್ತದೆ. ಮುಂದೆ ಬಂದ ರಾಘವಾಂಕಾದಿಗಳು ಒಪ್ಪಿಕೊಂಡು ವಿಸ್ತರಿಸಿದುದು, ಮುನ್ನಡೆಸಿದುದು ಶರಣರ ಮಾರ್ಗವಲ್ಲ, ಹರಿಹರನ ಮಾರ್ಗ ಎಂಬುದು ಇಲ್ಲಿ ನೆನೆಯಬೇಕಾದ ಸಂಗತಿಯಾಗಿದೆ. ಹೀಗಿದ್ದು ಹರಿಹರ ವಚನಕಾರರ ಆಶಯವನ್ನು, ಕೆಲವೊಮ್ಮೆ ಶೈಲಿವಿನ್ಯಾಸವನ್ನು ಕಾವ್ಯ ಪ್ರಜ್ಞೆಯಿಂದ ಮುನ್ನಡೆಸಿದನೆಂಬುದನ್ನು ಮರೆಯುವಂತಿಲ್ಲ, ದೇಶೀ ಮಾರ್ಗದ ತಳಹದಿಯಲ್ಲಿಯೇ ಹರಿಹರ ರಗಳೆಗಳನ್ನು ರಚಿಸಿರುವುದು ಕಂಡು ಬರುತ್ತದೆ. ಹೀಗಾಗಿ ಹರಿಹರನನ್ನು ಯುಗ ಪ್ರವರ್ತಕ ಕವಿ ಎಂದು ಒಪ್ಪಿಕೊಳ್ಳಬಹುದು.

ಹರಿಹರನ ಕಾವ್ಯ ಮಾರ್ಗವನ್ನು ಮೆಚ್ಚಿಕೊಂಡು ಅದನ್ನು ಅನುಸರಿಸಿದವರಲ್ಲಿ ರಾಘವಾಂಕ ಅಗ್ರಗಣ್ಯ, ಪ್ರತಿಭಾವಂತನೂ, ಮಹಾಮೇಧಾವಿಯೂ ಆದ ರಾಘವಾಂಕ ಷಟ್ಪದಿಯಲ್ಲೇ ತನ್ನೆಲ್ಲ ಕೃತಿಗಳನ್ನು ರಚಿಸಿ ಷಟ್ಪದಿ ನಿರ್ಮಾಪಕನೆಂಬ ಬಿರುದಿಗೆ ಪಾತ್ರನಾಗಿದ್ದಾನೆ. ಈತನಿಗಿಂತ ಹಿಂದೆ ಒಂದೆರಡು ಷಟ್ಪದಿ ಕಾವ್ಯಗಳು ರಚಿತವಾಗಿದ್ದವು ಎಂಬ ಅಭಿಪ್ರಾಯವೂ ಬಂದಿದೆ. ಈತನೂ ಕೂಡ ಹರಿಹರನಂತೆಯೇ ಮನುಜರ ಮೇಲೆ ಸಾವವರ ಮೇಲೆ  ಕಾವ್ಯಗಳನ್ನು ರಚಿಸಲಿಲ್ಲ. ಹರಿಹರ ರಾಘವಾಂಕರಿಬ್ಬರೂ ಪಂಪಾವಿರೂಪಾಕ್ಷನ ಅಸಮ ಭಕ್ತರು. ವಿರೂಪಾಕ್ಷನನ್ನು ಸಾಕ್ಷಾತ್ಕಾರ ಮಾಡಿಕೊಂಡ ಮಹಾಮಹಿಮರು. ಜನ ಬದುಕಬೇಕೆಂದು ಅನಪೇಕ್ಷೆಯಿಂದ ಕಾವ್ಯವನ್ನು ಬರೆದ ಮಹಾಲಿಂಗ ಭಕ್ತರ ಭಕ್ತರಾಗಿದ್ದರು. ಹೀಗಾಗಿ ಇವರಿಬ್ಬರು ದೇಶೀ ಮಾರ್ಗವನ್ನು ಅನುಸರಿಸಿದ್ದಾರೆ ಎಂಬುದು ಇವರ ಕಾವ್ಯಗಳಿಂದ ತಿಳಿದು ಬಂದಿದೆ.

## ಹರಿಹರ ಕವಿಯ ವ್ಯಕ್ತಿತ್ವ

ಹರಿಹರ ಅನೇಕ ದೃಷ್ಟಿಗಳಿಂದ ಎಲ್ಲರ ಗಮನ ಸೆಳೆದವನು. ಅಂದಿನ ಕಾಲಕ್ಕೆ ಚಂಪೂ ಎಂಬುದು ಪ್ರತಿಷ್ಠಿತ ಸಾಹಿತ್ಯ ಪ್ರಕಾರ ಮತ್ತು ಪಂಥ ಆಗಿತ್ತು. ಅಂತಹ ಸವಾಲಿನೆದುರಲ್ಲಿ "ಗಿರಿಜಾ ಕಲ್ಯಾಣ"ವನ್ನು ಬರೆದು ಉಬ್ಬಿದ ಈತ ರಗಳೆಗಳ ರಚನೆ ಮೂಲಕ ಮಾತ್ರ ಯಶಸ್ಸಿನ ಕವಿಯಾಗುತ್ತಾನೆ. ಈ ನೆಲೆಯಲ್ಲಿ ಜೀವಂತ ಕಾವ್ಯ ಪರಂಪರೆಯ ವಿಸ್ತರಣೆಯಾಗಿ ನಿಲ್ಲುತ್ತಾನೆ. ಇಲ್ಲಿ ತನ್ನೆಲ್ಲಾ ವ್ಯಕ್ತಿತ್ವವನ್ನು ಕವಿತ್ವವನ್ನಾಗಿ ಮಾಡಿಸಿ ಕನ್ನಡ ಕಾವ್ಯ ಪರಂಪರೆಗೆ ಹೊಸ ಆಯಾಮ ಕಲ್ಪಿಸುತ್ತಾನೆ. ಈ ಮೂಲಕ ಪಂಪ, ರನ್ನ, ಪೊನ್ನರ ಸಾಲಿನಲ್ಲಿ ಹತ್ತರಲ್ಲಿ ಹೊನ್ನೊಂದನೆಯವನಾಗದೆ ಹಿಮಾಲಯದ ಶಿಖರಗಳಲ್ಲಿ ಮತ್ತೊಂದು ಮೇರು ಶಿಖರವಾಗಿ ನಿಲ್ಲುತ್ತಾ, ಪರಂಪರೆಯ ನಿರ್ಮಾಪಕವಾಗುತ್ತಾನೆ. ಇದು ಈತನಿಗಿರುವ ಸಾಂಸ್ಕೃತಿಕ ಆಯಾಮ ಮತ್ತು ಚಾರಿತ್ರಿಕ ಮಹತ್ವ. ಹರಿಹರ ಜಡಶಾಸ್ತ್ರಗಳಿಗೆ ಮೈಸೋತವನಲ್ಲ. ಅವರಿಂದ ಮೈಮುರಿದು ಎದ್ದವನು. ಆದ್ದರಿಂದಲೇ ಜಗಣ ಎಂಬುದು ಕಾವ್ಯದಲ್ಲಿ

ದೋಷ ಎಂದಿದ್ದಾಗಲೂ ಅದನ್ನು ಗುಣವನ್ನಾಗಿ ಮಾರ್ಪಡಿಸುವಲ್ಲಿ ಯಶಸ್ವಿಯಾಗುತ್ತಾನೆ. ರಳ, ಕುಳ, ಕ್ಷಳಗಳ ಬಗೆಗೆ ಶಾಸ್ತ್ರಕಾರರು ಏನೇ ಹೇಳಿದರೂ ತಾನು ಜನಪರ ನೆಲೆಯಲ್ಲಿ ನಿಂತು, ಮುಜಗರವಿಲ್ಲದೆ ಅವನ್ನು ಲಿಬರಲ್ಲಾಗಿ ಬಳಸುತ್ತಾ ಬರುತ್ತಾನೆ. ಈ ಮೂಲಕ ಜನಪದರಾಡುವ ಭಾಷೆಯ ಕ್ರಮವೇ ಅಂತಿಮ ಎಂಬ ಭಾಷಾ ವಿಜ್ಞಾನಿಗಳ ತಾತ್ವಿಕತೆಯನ್ನು ಮೆರೆಯುತ್ತಾನೆ. ಈ ನಿಟ್ಟಿನಲ್ಲಿ ಜೀವಂತ ಭಾಷೆಯ ವಕ್ತಾರನಾಗಿ ನಿಂತು. ಪರೋಕ್ಷವಾಗಿ ತಾನು ಭಾಷಾ ಮಾಧ್ಯಮದ ವಿಚಾರದಲ್ಲಿ ಆರೋಗ್ಯ ಪೂರ್ಣ ಚಿಂತಕನಾಗಿ ಗಮನವನ್ನು ಸೆಳೆಯುತ್ತಾನೆ. ಈ ನೆಲೆಯಲ್ಲಿ ಇವತ್ತಿನ ಲೇಖಕರಿಗೆ ಮಾರ್ಗದರ್ಶಕನೂ  ಆಗುತ್ತಾನೆ.

## ಪ್ರಯೋಗ ಶೀಲತೆಯಲ್ಲಿ ಏಕಾಗ್ರತೆ

ಪ್ರಯೋಗ ಶೀಲತೆಯಲ್ಲಿ ಏಕಾಗ್ರತೆ ಸಾಧಿಸುವ ಈತ ಚಲನ ಶೀಲ ಗುಣವುಳ್ಳ ಪರಂಪರೆ ಎಂಬ ಕಲ್ಪನೆಗೆ ಅರ್ಥಪೂರ್ಣ ವಿಸ್ತರಣೆಯನ್ನು ಕಲ್ಪಿಸುವ ಅಥವಾ ಅದರ ಪೂರ್ಣಪಾಠದ ರೂಪಕ ಪ್ರತಿಭೆಯಾಗಿ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಅಷ್ಟೇ ಅಲ್ಲದೆ ಸಂಸ್ಕೃತಿ ಪರಂಪರೆಯಲ್ಲಿಯೂ ಒಂದು ಮೈಲುಗಲ್ಲಾಗಿ ಯಶಸ್ಸನ್ನು ಪ್ರಕಟಿಸುತ್ತಾನೆ. ಇದು ಅವನ ಭದ್ರಸ್ಥಾನ. ಇಲ್ಲಿ ಬೇಂದ್ರೆ , ಕುವೆಂಪು, ಅಡಿಗ, ಸಿದ್ಧಲಿಂಗಯ್ಯ ಮೊದಲಾದ ಪ್ರವರ್ತಕರು ನೆನಪಾಗುತ್ತಾರೆ. ಹರಿಹರನ ವ್ಯಕ್ತಿತ್ವ ಮತ್ತು ಕವಿತ್ವಗಳ ಮೂಲಕ ಸ್ತರದಲ್ಲಿ ಭಿನ್ನವೆ ಇಲ್ಲ. ಈ ನೆಲೆಯನ್ನು ಹರಿಹರನ ರಗಳೆಗಳ ಒಳಗೆ ಕಾಣಿಸಿಕೊಳ್ಳುವ ಬಹುತೇಕ ಪಾತ್ರಗಳ ಹೆಸರುಗಳು ಬೇರೆ ಬೇರೆಯಾಗಿದ್ದರೂ ಅವುಗಳ ಮೂಲ ವ್ಯಕ್ತಿತ್ವವು ಹರಿಹರನದ್ದೇ ಆಗಿದೆ. ಅಂತಹ ಸೋಪಜ್ಞತೆ ಈ ರಗಳೆಗಳಿಗಿದೆ. ಆದ್ದರಿಂದ ಸಾಂಪ್ರದಾಯಿಕ ನೆಲೆಯಲ್ಲಿ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ವಿಧಾನಕ್ಕಿಂತ ಅಂದರೆ ಕವಿಯ ಕೃತಿ ಮತ್ತು ಇತರೆ ಕಾವ್ಯ ಶಾಸನಗಳು ಕವಿಯ ಬಗೆಗೆ ನೇರವಾಗಿ ಏನನ್ನು ಹೇಳುತ್ತವೆ ಎಂಬುದನ್ನು ಆಧರಿಸಿ ಕಟ್ಟುವ ಕ್ರಮಕ್ಕಿಂತ ಇಡೀ ಕಾವ್ಯವನ್ನು  ಸೂಕ್ಷಮ ನೆಲೆಯಲ್ಲಿ ಗ್ರಹಿಸಿ ಕವಿಯ ಒಟ್ಟು ವ್ಯಕ್ತಿತ್ವ ಮತ್ತು ಅವನ ಚರಿತ್ರೆಯ ಸಾಂಸ್ಕೃತಿಕ ಸಂಘರ್ಷಗಳನ್ನು ಬಿಡಿಸಿದರೆ ಹೊಸ ಹೊಳಹುಗಳು ದೊರೆಕುತ್ತವೆ. ಈ ನೆಲೆಯಲ್ಲಿ ನಿಂತು ನೋಡಿದಾಗ ಪಂಪ, ಅಲ್ಲಮ, ಬಸವ, ಹರಿಹರ, ಕನಕ ಮೊದಲಾದ ಎಲ್ಲ ಬರಹಗಾರರು ತಮ್ಮೆಲ್ಲಾ ಬಣ್ಣಗಳೊಂದಿಗೆ ಸಾಕ್ಷಾತ್ಕಾರಗೊಳ್ಳುತ್ತಾರೆ. ಹಾಗಾದಾಗ ನಿಜವಾದ ಸಾಹಿತ್ಯ ಚರಿತ್ರೆ ಮೂಡುತ್ತದೆ. ಅದು ಅಂತಿಮವಾಗಿ ಸಂಸ್ಕೃತಿ ಚರಿತ್ರೆಯೂ ಆಗಿ ನಿಲ್ಲುತ್ತದೆ. ಅಂತಹ ಬರವಣಿಗೆ ನಮಗೆ ಚರಿತ್ರೆಯ ಹೊಸ ಪಾಠಗಳನ್ನು ಕಲಿಸಬೇಕಿದೆ. ಈ ದಾರಿಯಲ್ಲಿ ಸಂಶೋಧನೆಗಳು ನಡೆಯಬೇಕು. ಇಂತಹ ಸಂಘರ್ಷಾತ್ಮಕ ತಿಳಿವಳಿಕೆ ಹಿನ್ನೆಲೆಯಲ್ಲಿ ಹರಿಹರ ನಮ್ಮ ಬದುಕಿಗೆ ಹತ್ತಿರವಾಗುತ್ತಾನೆ ಎಂದರೆ ತಪ್ಪಾಗಲಾರದು.

**ಅಡಿಟಿಪ್ಪಣಿ**

೧. ಸಿದ್ಧರಾಮನ ವಚನ, ಪುಟ – ೩೮೩

೨. ಹಳಕಟ್ಟಿ ಫ.ಗು. (ಸಂ) ದೇವರದಾಸಿಮಯ್ಯನ ವಚನ, ಪುಟ – ೮೦ ವಚನ – ೧೩೩

೩. ಹಳಕಟ್ಟಿ ಫ. ಗು., ಶಿವಶರಣೆಯರ ವಚನಗಳು ಭಾಗ – ೨, ಪುಟ – ೧

೪. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ – ೩೪೪

೫. ಕೃಷ್ಣಮೂರ್ತಿ ಕೆ., ಕನ್ನಡ ಉತ್ತರ ರಾಮಚರಿತೆ, ಪುಟ – ೧

೬. ದೇವಿರಪ್ಪ ಎಚ್., ತುಂಗಭದ್ರಾ, ಪುಟ – ೮–೯

೭. ಯಮುನಾಚಾರ್ಯ ಎಂ., ಮತಧರ್ಮ ತತ್ವಶಾಸ್ತ್ರ, ಪುಟ – ೧೫೪

೮. ಶಿವರುದ್ರಪ್ಪ ಜಿ.ಎಸ್., ಹರಿಹರನ ದರ್ಶನ, ಸಂಪುಟ –೬, ಸಂಚಿಕೆ–೪, ಪುಟ – ೫

೯. ಶಿವರುದ್ರಪ್ಪ ಜಿ.ಎಸ್., ಪೂರ್ವೋಕ್ತ, ಪುಟ – ೪–೫

೧೦. ಶಿವರುದ್ರಪ್ಪ ಜಿ.ಎಸ್., ಪೂರ್ವೋಕ್ತ, ಪುಟ – ೧೩

೧೧. ಶಶಿಧರ ಬಿ., ಕರ್ನಾಟಕ ಮಹಿಳಾ ಶಿಕ್ಷಣ ಪರಂಪರೆ, ಪುಟ – ೨೯

೧೨. ಜಯದೇವ ಹು.ಕ., ಕರ್ನಾಟಕದ ಕೆಲವು ರಾಣಿಯರು, ಪುಟ – ೮೩

೧೩. ಜವಳಿ ಬಿ.ಸಿ. ಮತ್ತು ಮಲ್ಲಾಬಾದಿ ವಿ.ಎಂ., ಹರಿಹರದೇವನ ರಗಳೆಗಳು ಭಾಗ –೧, ಪುಟ – ೭೫

೧೪. ಬಸವನಾಳ ಶಿ.ಶಿ. (ಸಂ), ರಕ್ಷಾಶತಕ, ಪಂಪಾಶತಕ, ಪುಟ – ೩೦

೧೫. ವೀರಭದ್ರಪ್ಪ ಮಲ್ಲಾಬಾದಿ ವಿ.ಎಂ., ಪುರಾತನ ಮಾತೆಯರ ಕತೆಗಳು, ಪುಟ ೭

೧೬. ಹಿರೇಮಠ ಆರ್.ಸಿ., ಚನ್ನಬಸವಣ್ಣನವರ ವಚನಗಳು, ವಚನ ಸಂಖ್ಯೆ – ೩೫೩

೧೭ ಹಿರೇಮಠ ಆರ್.ಸಿ., ಬಸವಪುರಾಣ, ಸಂಧಿ – ೧೩, ಪುಟ – ೨೦೧

೧೮. ಬಸವನಾಳ ಶಿ.ಶಿ., ಬಸವಣ್ಣನವರ ವಚನ – ೩೫೧

೧೯. ಜವಳಿ ಬಿ.ಸಿ. ಮತ್ತು ಮಲ್ಲಾಬಾದಿ ವಿ.ಎಂ., ಪೂರ್ವೋಕ್ತ, ಪುಟ – ೭೫

೨೦. ಜವಳಿ ಬಿ.ಸಿ. ಮತ್ತು ಮಲ್ಲಾಬಾದಿ ವಿ.ಎಂ., ಪೂರ್ವೋಕ್ತ, ಪುಟ – ೪೯

೨೧. ಸುಂಕಾಪುರ ಎಂ.ಎಸ್., ಮಹಾಕವಿ ಹಂಪೆ ಹರಿಹರದೇವ ನೂತನ ಪುರಾತನ ರಗಳೆಗಳು, ಪುಟ – ೨೧೫

೨೨. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೧೮

೨೩. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೧೯

೨೪. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೨೧

೨೫. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೨೩

೨೬. ಹಿರೇಮಠ ಆರ್.ಸಿ., ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು, ಪುಟ – ೨೯೫

೨೭. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೨೯೯

೨೮. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೩೦೦

೨೯. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೩೦೦

೩೦. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೭೮

೩೧. ಜವಳಿ ಬಿ.ಸಿ. ಮತ್ತು ಮಲ್ಲಾಬಾದಿ ವಿ.ಎಂ., ಪೂರ್ವೋಕ್ತ, ಪುಟ – ೪೬

೩೨. ಚನ್ನಮಲ್ಲಿಕಾರ್ಜುನ, ಮಹಾದೇವಿಯಕ್ಕನ ರಗಳೆ, ಪುಟ – ಪೀಠಿಕೆ

೩೩. ದೇವಿರಪ್ಪ ಹೆಚ್., ಹಂಪೆಯ ಹರಿಹರ ದೇವಕೃತ ಶರಣ ಚರಿತಾ ಮಾನಸಂ, ಪುಟ – ೪೧೦

೩೪. ದೇವಿರಪ್ಪ ಹೆಚ್., ಹರಿಹರ ವಿರಚಿತ ಉಡುತಡಿಯ ಮಹಾದೇವಿ ರಗಳೆ, ಪುಟ – ೩೮೭

೩೫. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೫೯೮ – ೫೯೯

೩೬. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೩೪

೩೭. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೪೯

೩೮. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೧೯

೩೯. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೧೯

೪೦. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೨೦

೪೧. ಹಿರೇಮಠ ಆರ್.ಸಿ., ಪೂರ್ವೋಕ್ತ, ಪುಟ – ೨೫

೪೨. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೪೧

೪೩. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೪೧

೪೪. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೨೮

೪೫. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೨೮

೪೬. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೨೯

೪೭. ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪುಟ – ೨೩೦

೪೮. ವೆಂಕಣ್ಣಯ್ಯ ಟಿ.ಎಸ್., ಬಸವರಾಜ ದೇವರ ರಗಳೆ ಮೊದಲ ಸ್ಥಲ, ಪುಟ – ೫

೪೯. ವೆಂಕಣ್ಣಯ್ಯಟಿ.ಎಸ್., ಪೂರ್ವೋಕ್ತ, ಪುಟ – ೬

೫೦. ಅಭಿಜ್ಞಾನ ಶಾಕುಂತಲಾ ೪ನೇ ಅಂಕ ಪದ್ಯ – ೧೮

೫೧. ಶ್ರೀಕಂಠಯ್ಯ ತೀ.ನಂ., ಹರಿಹರ ಕವಿಯ ನಂಬಿಯಣ್ಣನ ರಗಳೆ, ಪುಟ – ೬

೫೨. ಶ್ರೀಕಂಠಯ್ಯ ತೀ.ನಂ., ಪೂರ್ವೋಕ್ತ, ಪುಟ – ೬

೫೩. ಶ್ರೀಕಂಠಯ್ಯ ತೀ.ನಂ., ಪೂರ್ವೋಕ್ತ, ಪುಟ – ೬

೫೪. ಶ್ರೀಕಂಠಯ್ಯ ತೀ.ನಂ., ಪೂರ್ವೋಕ್ತ, ಪುಟ – ೧೨

೫೫. ಶ್ರೀಕಂಠಯ್ಯ ತೀ.ನಂ., ಪೂರ್ವೋಕ್ತ, ಪುಟ – ೧೦

೫೬. ಶಿವರುದ್ರಪ್ಪ ಜಿ.ಎಸ್., ಅನುರಣನ, ಪುಟ – ೧೦೩

೫೭. ಶಿವರುದ್ರಪ್ಪ ಜಿ.ಎಸ್., ಪೂರ್ವೋಕ್ತ, ಪುಟ – ೧೦೨

೫೮. ದೇವಿರಪ್ಪ ಎಚ್., ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯ ರಗಳೆ, ಪುಟ – ೩೨

೫೯. ಹಿರೇಮಠ ಆರ್.ಸಿ., ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನ ರಗಳೆ, ಪುಟ – ೯

## ಅಧ್ಯಾಯ-೬

### ಉಪಸಂಹಾರ

ಹರಿಹರ ವ್ಯವಸ್ಥೆಯನ್ನು ಇದ್ದಕ್ಕಿದ್ದಂತೆ ಸ್ವೀಕರಿಸುವವನಲ್ಲ, ಹಾಗೆಂದು ವ್ಯವಸ್ಥೆಯಲ್ಲಿ ಅಲ್ಲೋಲ-ಕಲ್ಲೋಲ ಉಂಟು ಮಾಡುವ ವಿಕ್ಷಿಪ್ತ ಮನೋಭಾವವೂ ಅವನದಲ್ಲ. ಹೀಗಾಗಿ ಹರಿಹರನ ಮನಸ್ಸು ಅಪ್ಪಟ ಪ್ರಜಾಪ್ರಭುತ್ವದ್ದು, ಕಠೋರ ಶಿವಭಕ್ತಿ, ಶಿವಧರ್ಮ ನಿಷ್ಠೆಯಿಂದಾಗಿ ಕಾವ್ಯಗಳುದ್ದಕ್ಕೂ ಭಕ್ತಿ ಮೌಲ್ಯವನ್ನು ಮೆರೆಯುತ್ತಾನೆ. ಇಷ್ಟೂ ದಿನ ಇಂದ್ರ, ಚಂದ್ರನೆಂದು ವರ್ಣಿಸಿಕೊಂಡಿದ್ದ ರಾಜ ಮಹಾರಾಜರುಗಳು ಹರಿಹರನಲ್ಲಿ ಕಾಲಕೆರಹಿಗಿಂತ ಕಡೆಯಾಗಬಲ್ಲ ವರ್ಣನೆಗೀಡಾಗುತ್ತಾರೆ. ಹರಿಹರನಿಂದ ವಜ್ರ ವೈಢೂರ್ಯದ ಭಾರವಾದ ಕಿರೀಟಕ್ಕಿಂತ, ಕಿರೀಟಧಾರಿ ತಲೆಗಿಂತ ಮಾದರ ಚೆನ್ನನು ಹೊತ್ತ ಹುಲ್ಲ ಹೊರೆ ಮತ್ತು ಅವನ ತಲೆ ಹರಿಹರನಿಗೆ ಪ್ರಿಯವಾಗುತ್ತದೆ.

ಅರಸರ ಪಾದ-ಪಾದುಕೆಗಳು ಶ್ರೇಷ್ಠತೆ ಪಡೆದ ಕಾಲಾವಧಿಯಲ್ಲಿಯೇ ಮಾದರವನ ಪಾದ-ಪಾದದ ಕೆರವುಗಳು ಶ್ರೇಷ್ಠವೆನಿಸಿ, ಚಕ್ರವರ್ತಿಯ ಕಿರೀಟಕ್ಕಿಂತಲೂ ಬೆಲೆಯುಳ್ಳವಾಗುತ್ತವೆ. ಕುಲ ಜಾತಿಗಳು ಈ ಹಿಂದೆ ಕಾವ್ಯಗಳಲ್ಲಿ ಚರ್ಚೆಗೀಡಾಗಿದ್ದರೂ ರಗಳೆಗಳಲ್ಲಿ ಕನಿಷ್ಠ ಕುಲ ಜಾತಿಯವರೇ ನಾಯಕರಾಗುತ್ತಾರೆ. ಕಾವ್ಯ ನಾಯಕನೂ ಆಶ್ರಯ ನೀಡಿದ ದೊರೆಯೂ ಅಭಿನ್ನರಾಗಿದ್ದರಿಂದ ಪಂಪ ರನ್ನಾದಿಗಳು ಭೌತಿಕ ಸುಖ ಸಂಪತ್ತನ್ನು ಅನುಭವಿಸಿದರೆ, ಬಹುಶಃ ದೊರೆಗಳನ್ನು ಟೀಕಿಸಿದ್ದಕ್ಕಾಗಿಯೇ ಹರಿಹರ ದೋರಸಮುದ್ರ ಬಿಟ್ಟು ಏಕಾಂಗಿಯಾಗಿ ಹಂಪೆಗೆ ಬಂದಿರಬಹುದೆ ಎಂಬ ಅನುಮಾನ ಉಂಟಾಗುತ್ತದೆ.

ಇತಿಹಾಸವು ಪುನರಾವರ್ತಿಸುತ್ತದೆ ಎನ್ನುವುದಾದರೆ ಪ್ರಭು ಪ್ರತಿಭಟನೆಯ ಕಣವನ್ನು ನಿರ್ಮಿಸಿದವನು ಕೇಶಿರಾಜ; ಅದರಲ್ಲಿ ಈ ಹೊತ್ತಿನಲ್ಲೇ ಹೋರಾಡಿ ಯಶಸ್ವಿಯಾದವನು ಬಸವಣ್ಣ; ಆ ಹೋರಾಟಗಳನ್ನು ಇತಿಹಾಸದಲ್ಲಿ ದಾಖಲಿಸಿದವನು ಹರಿಹರ. ಹರಿಹರನದು ಸಂಘರ್ಷಮಯ ಬದುಕು.ಅಂತಹ ಹೋರಾಟದ ಭೂಮಿಕೆಗಳು ರಗಳೆಗಳ ತುಂಬಾ ವ್ಯಾಪಿಸಿವೆ. ಮತ, ಭಕ್ತಿ, ಅರ್ಥ, ಧರ್ಮ, ಸಂಬಂಧದ ಘರ್ಷಣೆಗಳನ್ನು ಇಲ್ಲಿ ಸಾಕಷ್ಟು ಕಾಣುತ್ತವೆ. ಜೈನ, ವೈಷ್ಣವ ಮತೀಯ ಸಂಘರ್ಷಗಳು, ಕ್ಷುದ್ರ ದೇವೋಪಾಸನೆಯ ವಿರೋಧಿ ನಿಲುವುಗಳು, ಇವನ್ನು ಸಮರ್ಥಿಸಲು ಚಿಕ್ಕಮಟ್ಟ ಪವಾಡ ಘಟಕಗಳು ರಗಳೆಯಲ್ಲಿ ದೊರೆಯುತ್ತವೆ. ಪವಾಡದ ಆವರಣದಿಂದ ದೂರ ನಿಂತು ಅವಲೋಕಿಸಿದರೆ ಶಿವಭಕ್ತರು ಉಗ್ರ ರೀತಿಯಿಂದ ಬದುಕಿ, ಏಕದೇವೋಪಾಸನೆಯನ್ನು ಚಳವಳಿಯಂತೆ ಮಾಡಿ ಶಿವಭಕ್ತೇತರರನ್ನು ಪರಿವರ್ತಿಸಲು ಯತ್ನಿಸಿದ್ದಾರೆ ಎಂಬುದು ಕಾವ್ಯಗಳಿಂದಲೇ ವಿಧಿತವಾಗುತ್ತದೆ.

ಮೊದಲ ಅಧ್ಯಾಯದಲ್ಲಿ ಪ್ರಬಂಧದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತಂತಿದೆ. ಪ್ರಸ್ತುತ ಅಧ್ಯಯನಕ್ಕೆ ರಗಳೆಗಳನ್ನು ಆಯ್ಕೆ ಮಾಡಿಕೊಳ್ಳಲು ಪ್ರಮುಖ ಕಾರಣವಾಗಿದೆ. ಹೀಗಾಗಿ ಶಿವಭಕ್ತರ ಹೋರಾಟದ ಬಗ್ಗೆ ಚರ್ಚಿಸಲಾಗಿದೆ. ಸಮಾಜದ ವಿವಿಧ ನೆಲೆಗಳಿಂದ ಬಂದ ಶಿವಶರಣರನ್ನು ಕಾವ್ಯದ ಕಥಾ ನಾಯಕರನ್ನು ಮಾಡಿಕೊಂಡ ಬಗ್ಗೆ ವಿಶ್ಲೇಷಿಸುವ ಯತ್ನ ಮಾಡಲಾಗಿದೆ. ಇದೂವರೆಗೆ ರಗಳೆ ಸಾಹಿತ್ಯದ ಬಗ್ಗೆ ಆಗಿರುವ ಸಂಶೋಧನೆಗಳ ಸಮೀಕ್ಷೆ ಮಾಡಲಾಗಿದೆ. ಸಂಘರ್ಷಾತ್ಮಕ ನಿಲುವುಳ್ಳ ರಗಳೆಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಸಂಘರ್ಷದ ಅರ್ಥ, ವ್ಯಾಖ್ಯಾನ ಕುರಿತು ಚರ್ಚಿಸಲಾಗಿದೆ. ಅಧ್ಯಯನದ ಅವಶ್ಯಕತೆಗೆ ಅನುಗುಣವಾಗಿ ನಾಲ್ಕು ವಿಭಾಗಗಳಾಗಿ ಮಾಡಿಕೊಂಡು ರಗಳೆಗಳನ್ನು ವಿಶ್ಲೇಷಿಸಲು ಯತ್ನಿಸಲಾಗಿದೆ. ಭಕ್ತಿ, ಭಕ್ತರ ನಡುವಿನ ಸಂಘರ್ಷ, ಜೈನರು ಶಿವಭಕ್ತರ ನಡುವಿನ ಸಂಘರ್ಷ, ವೈಷ್ಣವರು ಶಿವಭಕ್ತರ ನಡುವಿನ ಸಂಘರ್ಷ, ಅರ್ಥ ಸಂಘರ್ಷ ಹೀಗೆ ವಿಂಗಡಿಸಿಕೊಂಡು ಹರಿಹರನ ಹೋರಾಟದ ಮನೋಧರ್ಮವನ್ನು ಗುರುತಿಸಲು ಯತ್ನಿಸಲಾಗಿದೆ. ಆ ಮೂಲಕ ಶಿವಶರಣರ ಕಾಯಕ ಧರ್ಮ, ನಿಷ್ಪಕ್ಷಪಾತ ಶಿವಭಕ್ತಿ ಸೇವೆ ಬಗ್ಗೆ ವಿಶ್ಲೇಷಿಸಿ ವ್ಯಾಖ್ಯಾನಿಸಲು ಪ್ರಯತ್ನಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಹರಿಹರ ಮೂಲತಃ ಶೈವ ಕವಿಯಾಗಿದ್ದನು. ನಂತರ ವೀರಶೈವನಾದ ಪರಿ ಕುರಿತು ಸಂಕ್ಷಿಪ್ತ ವಿವರ ನೀಡಲಾಗಿದೆ. ಚಳವಳಿ ಇತಿಹಾಸ, ತಮಿಳುನಾಡಿನ ಶೈವ ಪಂಥಗಳು: ಇದರಲ್ಲಿ ನಾಯನ್ಮಾರರು, ಆಳ್ವಾರರು; ನಾಯನ್ಮಾರರಲ್ಲಿ ತಿರುಮೂಲರ್, ಅಪ್ಪರ್, ತಿರುಜ್ಞಾನ ಸಂಬಂಧರ್, ಸುಂದರರ್, ಮಾಣಿಕ್ಯ ವಾಚಗರ್, ನಂಬಿಯಾಂಡರ್ ನಂಬಿ, ಶೇಕ್ಕಿಳಾರ್ ಕುರಿತು ಚರ್ಚಿಸಲಾಗಿದೆ. ಕನ್ನಡದಲ್ಲಿ ಪ್ರಕಟವಾಗಿರುವ ತ್ರಿಷಷ್ಠಿ ಪುರಾತನರ ಚರಿತ್ರೆಯನ್ನು ಗುರುತಿಸಲು ಕೋಷ್ಟಕ ಹಾಕಿ ವಿವರಿಸಲಾಗಿದೆ. ಹರಿಹರನ ಪುರಾತನ ರಗಳೆಗಳು ಮತ್ತು ಪೆರಿಯಪುರಾಣ, ಕುರಿತು ವಿಶ್ಲೇಷಿಸಲಾಗಿದೆ. ಶೈವ ಚಳವಳಿ ಮತ್ತು ಹರಿಹರನಿಗೂ ತುಂಬಾ ಹತ್ತಿರದ ನಂಟು ಇತ್ತು ಎಂಬುದಕ್ಕೆ ಹರಿಹರ ತಮಿಳುನಾಡಿನ ಪ್ರಾಂತ್ಯವನ್ನು ಸಮೀಕ್ಷಿಸಿ ತಮಿಳು ಶೈವ ಭಕ್ತರ ಚರಿತ್ರೆಗಳನ್ನು ರಚಿಸಿದ್ದಾನೆ. ಅಲ್ಲದೆ ವಿಶಿಷ್ಠ ಸ್ಥಾನ ನೀಡಿ ಕಾವ್ಯದ ಕಥಾನಾಯಕರನ್ನಾಗಿ ಮಾಡಿಕೊಂಡಿರುವ ಬಗೆಗೆ ವಿಸ್ತೃತವಾಗಿ ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಸಾಹಿತ್ಯದಲ್ಲಿನ ಒಟ್ಟಾರೆ ಸಂಘರ್ಷಾತ್ಮಕ ಅಧ್ಯಯನ ಮಾಡುವ ಮೂಲಕ ಕನ್ನಡ ನಾಡಿನ ಚರಿತ್ರೆಯನ್ನು ಇನ್ನಷ್ಟು ಸ್ಫುಟವಾಗಿ ತಿಳಿಯಲು ಪ್ರಯತ್ನಿಸಿದ್ದೇನೆ. ಈ

ದೃಷ್ಟಿಯಿಂದ ೧೩ನೇ ಶತಮಾನದ ಬಹುಮುಖ್ಯ ಸೃಷ್ಟಿಯಾಗಿರುವ ರಗಳೆಗಳ ಈ ಅಧ್ಯಯನ ಆ ಶತಮಾನದ ಕನ್ನಡ ನಾಡಿನ ಸಂಘರ್ಷಾತ್ಮಕ ಅಧ್ಯಯನವೆನಿಸುತ್ತದೆ. ಪರಮಾಧಿಕಾರದ ಪ್ರಭುತ್ವವನ್ನು ನಿರಾಕರಿಸುತ್ತ ಪ್ರಭು ವೃತ್ತಿ, ಮಾನ್ಯ ವೃತ್ತಿ, ಸೇವಕ ವೃತ್ತಿ – ಪದಗಳ ಮೂಲಕ ಕವಿಯು ಇವು ದೇವರಿಂದ ಪಡೆದ ವೃತ್ತಿಗಳು ಎಂದು ಹೇಳುತ್ತಾನೆ. ರಗಳೆಗಳಲ್ಲಿ ಸಾಮಾಜಿಕ, ಧಾರ್ಮಿಕ, ಪ್ರಭುತ್ವದ ಸಂಘರ್ಷ ಕುರಿತು ವ್ಯಾಖ್ಯಾನ, ಚರ್ಚಿಸಿ ವಿಶ್ಲೇಷಿಸಲು ಯತ್ನಿಸಲಾಗಿದೆ. ಕವಿಯ ಹೋರಾಟದ ಮನೋಧರ್ಮ, ಸಂಘರ್ಷದ ಸ್ವರೂಪ, ಆಂತರಿಕ ಹೋರಾಟ, ಸ್ವ ಸಾಮೂದಾಯಿಕ ಹೋರಾಟದ ಬಗ್ಗೆ ವಿವರಿಸಲಾಗಿದೆ. ಹೀಗೆ ಒಟ್ಟು ಕವಿಯ ವ್ಯಕ್ತಿತ್ವ, ಕಾಯಕ ತತ್ವದಡಿ ಸಂಘರ್ಷದ ವ್ಯಕ್ತಿ ಎಂದು ಗುರುತಿಸಲು ಪ್ರಬಂಧದ ಉದ್ದಕ್ಕೂ ವಿಶ್ಲೇಷಣೆಗೊಳಪಡಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಹರಿಹರ ಕವಿಯ ಸ್ತ್ರೀ ಪಾತ್ರಗಳನ್ನು ಚಾರಿತ್ರಿಕ ಪಾತ್ರಗಳು ಎಂದು ಗುರುತಿಸಿ ಶೈಶವಾವಸ್ಥೆಯಿಂದ ವೈಧವ್ಯದವರೆಗೆ ವಿವಿಧ ಹಂತಗಳಲ್ಲಿ ಕವಿ ಅವರ ಬಗೆಗೆ ನಾಡಿನಲ್ಲಿ ಅಥವಾ ಸ್ತ್ರೀಯರು ಬದುಕಿದ ನಾಡಿನಲ್ಲಿ, ಜನರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಮಂಡಿಸಿದ್ದಾನೆ. ಇಲ್ಲಿಯ ಭಾವನೆಗಳೆಲ್ಲ ಕನ್ನಡ ನಾಡಿನವರ ಭಾವನೆಗಳೆಂದೇ ಈ ಅಧ್ಯಾಯದಲ್ಲಿ ಪರಿಗಣಿಸಲಾಗಿದೆ. ಚಾರಿತ್ರಿಕ ಪಾತ್ರಗಳಲ್ಲಿ ೨೮ ಸ್ತ್ರೀಪಾತ್ರಗಳನ್ನು ವಿಮರ್ಶಿಸಲಾಗಿದ್ದು ಅದರಲ್ಲಿ ನಾಲ್ವರು ಬಾಲಕಿಯರು, ಐವರು ಪ್ರಿಯತಮೆಯಯರು , ಹತ್ತು ಜನ ಗೃಹಿಣಿಯರು, ಮೂವರು ತಾಯಂದಿರು, ವಿಧವೆ ಒಬ್ಬರು, ಮೂವರು ವಿರಾಗಿಣಿಯರು ಹೀಗೆ ಒಟ್ಟಾರೆ ೨೮ ಪಾತ್ರಗಳನ್ನು ವಿಮರ್ಶಿಸಿ ಚರ್ಚಿಸಲು ಇಲ್ಲಿ ಆಯ್ದುಕೊಳ್ಳಲಾಗಿದೆ.

ಸ್ತ್ರೀಯರ ಪಾತ್ರಗಳ ವಿಮರ್ಶೆ ಓದಿದಾಗ ಹರಿಹರ ಕವಿಯ ಸ್ತ್ರೀಪಾತ್ರಗಳ ಬಗೆಗೆ ಒಂದು ನಿಶ್ಚಿತ ಅಭಿಪ್ರಾಯ ಕವಿದರ್ಶನವೂ ಹೊರಹೊಮ್ಮುತ್ತದೆ. ಕನ್ನಡದ ಯಾವ ಕವಿಯೂ ಇಷ್ಟೊಂದು ಸ್ತ್ರೀ ಪಾತ್ರಗಳನ್ನ ತಮ್ಮ ತಮ್ಮ ಕಾವ್ಯಗಳಲ್ಲಿ ಚಿತ್ರಿಸಿರಲಿಕ್ಕಿಲ್ಲ. ಅಧಿಕ ಸಂಖ್ಯೆಯ ಚಿತ್ರಗಳನ್ನು ಕವಿ ತಮಗೆ ಒದಗಿಸುವುದು ತಕ್ಕ ಮಟ್ಟಿಗೆ ಉಪಯುಕ್ತ ಸಾಮಗ್ರಿಯನ್ನೇ ಒದಗಿಸಿದ್ದಾರೆ ಎನ್ನಬಹುದು. ಪ್ರಿಯತಮೆಯರು, ಗೃಹಿಣಿಯರು ಸಂಖ್ಯೆಯಲ್ಲಿ ಅಧಿಕವಿರುವುದನ್ನು ಗಮನಿಸಿದರೆ ಕವಿಯ ಗಮನವೆಲ್ಲ ಅವರ ಕಡೆಗೆ ಇದೆ ಎನ್ನಬಹುದು. ಸ್ತ್ರೀಯರ ಎಲ್ಲಾ ಮುಖಗಳನ್ನು ವಿವರಿಸಿರುವುದರಿಂದ ಸ್ತ್ರೀಯರ ಬಗೆಗೆ ಸಂಪೂರ್ಣ ಅರಿವು ಕವಿಗೆ ಇದ್ದು, ಈ ಪಾತ್ರಗಳನ್ನು ಇಲ್ಲಿ ಪ್ರಾತಿನಿಧಿಕವೆಂದು ತಿಳಿಯಬಹುದು. ಸ್ತ್ರೀಯರ ಪರ ಕವಿ ಇದ್ದಾನೆಂಬುದನ್ನು ರಗಳೆಗಳಿಂದ ಕಂಡುಕೊಳ್ಳಲಾಗಿದೆ. ಆಳುವ ಅರಸರ ವಿರುದ್ಧ ಹೋರಾಟ ಮಾಡಿದ ಅಕ್ಕಮಹಾದೇವಿಯಂತಹ ಸ್ತ್ರೀಯರ ಬಗ್ಗೆಯೂ ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಿ ಸಮಾಪ್ತಿಗೊಳಿಸಲಾಗಿದೆ.

## ಸಹಾಯಕ ಗ್ರಂಥಗಳು


೧. ಅರವಿಂದ ಮಾಲಗತ್ತಿ (ಸಂ); ೧೯೯೧; ಅಂಬೇಡ್ಕರ್ ವಿಚಾರಧಾರೆ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨. ಆರ್ಕೆ ಮಣಿಪಾಲ; ಸಾಮಾಜಿಕ ಚಳವಳಿಗಳು; ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩. ಕಲಬುರ್ಗಿ ಎಂ.ಎಂ. (ಸಂ); ೧೯೮೮; ಬಸವ ಮಾರ್ಗ ಸಂಪುಟ-೩; ನರೇಶ ಮತ್ತು ಕಂಪನಿ, ಬೆಂಗಳೂರು.

೪. ಕಲಬುರ್ಗಿ ಎಂ.ಎಂ.; ೧೯೮೮; ಮಾರ್ಗ ಸಂಪುಟ-೧; ನರೇಶ ಮತ್ತು ಕಂಪನಿ, ಬೆಂಗಳೂರು.

೫. ಕಲಬುರ್ಗಿ ಎಂ.ಎಂ.(ಸಂ); ೧೯೯೯; ಹರಿಹರನ ರಗಳೆಗಳು; ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೬. ಕೃಷ್ಣಮೂರ್ತಿ ಕೆ. (ಅನು); ೧೯೬೪; ಕನ್ನಡ ಉತ್ತರ ರಾಮ ಚರಿತೆ

೭. ಕೃಷ್ಣರಾಯ ಅ.ನ.; ೧೯೬೨; ಭಾರತೀಯ ಸಂಸ್ಕೃತಿ ದರ್ಶನ; ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು.

೮. ಕಾಶೀನಾಥ ಅಂಬಲಗಿ; ಕಬೀರ್‌ದಾಸ್; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯. ಗಂಗಾಧರ ಮೊದಲಿಯಾರ್; ನಂದನಾರ್; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ಗುಂಡಪ್ಪ ಎಲ್ (ಅನು); ೧೯೭೪; ಪೆರಿಯ ಪುರಾಣ ಭಾಗ-೧; ಬೆಂಗಳೂರು ವಿಶ್ವವಿದ್ಯಾಲಯ.

೧೧. ಚಿದಾನಂದಮೂರ್ತಿ ಎಂ.; ೧೯೭೫; ಸಂಶೋಧನಾ ವ್ಯಾಸಂಗ; ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ.

೧೨. ಚಿದಾನಂದಮೂರ್ತಿ, ಎಂ; ೧೯೭೯; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿ.ವಿ.

೧೩. ಚಿದಾನಂದಮೂರ್ತಿ ಎಂ.; ವಚನ ಸಾಹಿತ್ಯ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ); ಪ್ರಸಾರಾಂಗ, ಬೆಂಗಳೂರು ವಿ.ವಿ.

೧೪. ಚಿದಾನಂದಮೂರ್ತಿ ಎಂ.; ೧೯೮೫; ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ; ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ.

೧೫. ಚಿದಾನಂದಮೂರ್ತಿ ಎಂ., ೧೯೯೮, ಹೊಸತು ಹೊಸತು; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೬. ಜವಳಿ ಬಿ.ಸಿ. ಮತ್ತು ಮಲ್ಲಬಾದಿ ವಿ.ಎಂ.; ೧೯೫೮; ಹಂಪೆಯ ಹರಿಹರ ದೇವನ ರಗಳೆಗಳು ಭಾಗ–೧;ಕರ್ನಾಟಕ ವಿವಿ ಧಾರವಾಡ

೧೭ ತಿಪ್ಪೇರುದ್ರಸ್ವಾಮಿ ಎಚ್.; ೧೯೬೮; ಕರ್ನಾಟಕ ಸಂಸ್ಕೃತಿ ಸಮೀಕ್ಷೆ; ಡಿ.ವಿ.ಕೆ. ಮೂರ್ತಿ, ಮೈಸೂರು.

೧೮. ತಿಪ್ಪೇರುದ್ರಸ್ವಾಮಿ ಎಚ್.; ೧೯೬೯; ವಚನಗಳಲ್ಲಿ ವೀರಶೈವ ಧರ್ಮ; ಡಿ.ವಿ.ಕೆ. ಮೂರ್ತಿ, ಮೈಸೂರು.

೧೯. ದೇವೀರಪ್ಪ ಎಚ್; ೧೯೫೭; ತುಂಗಭದ್ರಾ

೨೦. ದೇವಿರಪ್ಪ ಎಚ್.; ೧೯೬೮; ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ; ಗೌರಿಶಂಕರ ಬುಕ್ ಡಿಪೋ, ಮೈಸೂರು.

೨೧. ದೇವೀರಪ್ಪ ಎಚ್.; ೧೯೭೯; ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿ ರಗಳೆ; ಶಿವಕುಮಾರ ಪ್ರಕಾಶನ, ವಿಜಯನಗರ, ಬೆಂಗಳೂರು.

೨೨. ನಟರಾಜ ಹುಳಿಯಾರ್, ರಾಮಕೃಷ್ಣ ಎಸ್.ಆರ್. (ಸಂ). ೨೦೦೦; ಕಣ್ಣೆದುರಿನ ಪ್ರಶ್ನೆಗಳು–ರಾಮಮನೋಹರ ಲೋಹಿಯಾ ಬರಹಗಳು ಸಂಪುಟ–೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೩. ನರಸಿಂಹಾಚಾರ್ ಡಿ.ಎಲ್.; ೧೯೭೭, ಹರಿಹರ; ಪ್ರಸಾರಾಂಗ, ಮೈಸೂರು ವಿ.ವಿ.

೨೪. ನಾರಾಯಣ ಪಿ.ವಿ.; ವಚನ ಚಳವಳಿ; ಶ್ರೀ ಸರ್ಪಭೂಷಣ ಮಠ, ಬೆಂಗಳೂರು.

೨೫. ನಾರಾಯಣ ಪಿ.ವಿ.; ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ; ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನ ಬೃಹನ್ಮಠ ಡಂಬಳ–ಗದಗ.

೨೬. ಬಸವನಾಳ ಶಿ.ಶಿ.(ಸಂ.); ೧೯೫೧; ಬಸವಣ್ಣನವರ ಹೆಚ್ಚಿನ ವಚನಗಳು; ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.
೨೭. ಬಸವನಾಳ ಶಿ.ಶಿ.(ಸಂ.); ೧೯೫೨; ರಕ್ಷಾಶತಕ, ಪಂಪಾಶತಕ; ಕರ್ನಾಟಕ ವಿವಿ. ಧಾರವಾಡ
೨೮. ಬಸವನಾಳ ಶಿ.ಶಿ.; ಬಸವ ಷಟ್‌ಸ್ಥಲ ವಚನಗಳು; ಮುರುಘಾಮಠದ ಮೃತ್ಯುಂಜಯ ಪ್ರಸಾದ ನಿಲಯ, ಧಾರವಾಡ.
೨೯. ಬಸವರಾಜ ಕಲ್ಗುಡಿ; ೧೯೮೮; ಮಧ್ಯಕಾಲೀನ ಕನ್ನಡದಲ್ಲಿ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ; ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.
೩೦. ಬಸವರಾಧ್ಯ ಎನ್. ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ, ಗುಂಡಪ್ಪ ಎಲ್.(ಸಂ.); ೧೯೭೪, ಹರಿಹರದೇವ; ಐಬಿಎಚ್ ಪ್ರಕಾಶನ, ಬೆಂಗಳೂರು.
೩೧. ಮಹಾದೇವಯ್ಯ ಕೆ.ಪಿ.; ೧೯೯೯; ಹರಿಹರನ ರಗಳೆಗಳಲ್ಲಿ ಸಾಹಿತ್ಯಕ ಅಧ್ಯಯನ; ಅಭಿರುಚಿ ಪ್ರಕಾಶನ ನಂ.೩೮೬, ೧೪ನೇ ಮುಖ್ಯ ರಸ್ತೆ, ಸರಸ್ವತಿಪುರಂ ಮೈಸೂರು.
೩೨. ಮಾಳವಾಡ ಸ.ಸ.; ೧೯೬೯; ಹರಿಹರನ ರಗಳೆಗಳಲ್ಲಿ ಜೀವನ ದರ್ಶನ; ಪ್ರಸಾರಾಂಗ ಮೈಸೂರು ವಿ.ವಿ.
೩೩. ಯಮುನಾಚಾರ್ಯ ಎಂ.; ೧೯೬೯; ಮತಧರ್ಮ ತತ್ವಶಾಸ್ತ್ರ
೩೪. ರಹಮತ್ ತರೀಕೆರೆ(ಸಂ); ೨೦೦೦; ಧರ್ಮ ವಿಶ್ವಕೋಶ–೩; ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.
೩೫. ರಾಜಮಾಣಿಕ್ಕನಾರ್; ೧೯೬೦; ಪೆರಿಯಪುರಾಣ ಆದಾಯ್ಚಿ; ಪಳನಿಯಪ್ಪ ಬ್ರದರ್ಸ್, ಮದರಾಸು.
೩೬. ವರದರಾಜರಾವ್; ಪುರಂದರದಾಸರು; ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ.
೩೭. ವಿವಿಧ ಲೇಖಕರು; ಪೆರಿಯ ಪುರಾಣ ಶೂಜಿಮೊಜಿವುಗಳ; ಶೈವಸಿದ್ಧಾಂತ ಈ ಜಿಗಮ್, ಮದರಾಸ್

೩೮. ವೀರಭದ್ರಪ್ಪ ಮಲ್ಲಬಾದಿ ವಿ.ಎಂ. (ಸಂ); ೧೯೫೨; ಪುರಾತನ ಮಾತೆಯರ ಕಥೆಗಳು

೩೯. ವೆಂಕಣ್ಣಯ್ಯ ಟಿ.ಎಸ್.; ೧೯೩೮; ಬಸವರಾಜ ದೇವರ ರಗಳೆ ಮೊದಲ ಸ್ಥಲ

೪೦. ಸದಾನಂದ ಕನವಳ್ಳಿ ಮತ್ತು ಚನ್ನಪ್ಪ ಕೆರೆಮನಿ; ೧೯೭೬; ವೀರಶೈವ ಸಾಹಿತ್ಯ ಸಮೀಕ್ಷೆ; ಪಂಪ ಪ್ರಕಾಶನ, ಲಕ್ಷ್ಮೇಶ್ವರ, ಹಾವೇರಿ ಜಿಲ್ಲೆ.

೪೧. ಸದಾನಂದ ಪಾಟೀಲ; ೨೦೦೬; ಲಿಂಗಧಾರಣ ಚಂದ್ರಿಕೆ; ಲಿಂಗಾಯತ ವಿದ್ಯಾಅಭಿವೃದ್ಧಿ ಸಂಸ್ಥೆ, ಧಾರವಾಡ.

೪೨. ಸೀತಾರಾಮಯ್ಯ ವಿ.; ೧೯೯೪; ಹರಿಹರ ದೇವಪುರ; ಐಬಿಎಚ್ ಪ್ರಕಾಶನ, ಬೆಂಗಳೂರು.

೪೩. ಸುಂಕಾಪುರ ಎಂ.ಎಸ್.(ಸಂ); ೧೯೭೬; ಶಿವಭಕ್ತಿ ಮಹಿಮಾ ರಗಳೆಗಳು; ಕರ್ನಾಟಕ ವಿ.ವಿ.ಧಾರವಾಡ.

೪೪. ಸುಂಕಾಪುರ ಎಂ.ಎಸ್ (ಸಂ); ೧೯೭೬; ನೂತನ ಪುರಾತನರ ರಗಳೆಗಳು; ಕರ್ನಾಟಕ ವಿವಿ ಧಾರವಾಡ.

೪೫. ಸುಂಕಾಪುರ ಎಂ.ಎಸ್. (ಸಂ); ೧೯೭೬; ಶಿವಭಕ್ತಿ ಮಹಿಮಾ ರಗಳೆಗಳು, ಕರ್ನಾಟಕ ವಿ.ವಿ.ಧಾರವಾಡ.

೪೬. ಸುಂಕಾಪುರ ಎಂ.ಎಸ್.; ೧೯೮೫; ರಕ್ಷಾಶತಕ, ಪಂಪಾಶತಕ; ಕರ್ನಾಟಕ ವಿ.ವಿ. ಧಾರವಾಡ.

೪೭. ಸೋಮಸುಂದರಂ ಪಿಳ್ಳೈ; ೧೯೪೧; ವೀರಶೈವ ತತ್ವ ಪ್ರಕಾಶ; ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಧಾರವಾಡ.

೪೮. ಶಂಕರರಾವ್ ಚ.ನ.; ೧೯೯೫; ಭಾರತೀಯ ಸಮಾಜ ಸಂರಚನೆ, ಪರಿವರ್ತನೆ; ಜೈಭಾರತ ಪ್ರಕಾಶನ, ಬಿಜೈ ಆನೆಗುಂಡಿ, ಮಂಗಳೂರು.

೪೯. ಶಂಕರರಾವ್, ಚ.ನ.; ೧೯೯೫; ಸಮಾಜಶಾಸ್ತ್ರ ಪರಿಚಯ ಸಂಪುಟ–೧; ಜೈ ಭಾರತ ಪ್ರಕಾಶನ, ಮಂಗಳೂರು.

೫೦. ಶಿವಮೂರ್ತಿ ಶಾಸ್ತ್ರಿ ಬಿ.(ಸಂ.) ಪುರಾತನರ ತ್ರಿವಿಧಿ; ಬೆಂಗಳೂರು ವಿವಿ

೫೧. ಶಿವರುದ್ರಪ್ಪ ಜಿ.ಎಸ್.;೧೯೮೯; ಕನ್ನಡ ಕವಿಗಳ ಕಾವ್ಯ ಕಲ್ಪನೆ; ಪ್ರಸಾರಾಂಗ ಮೈಸೂರು ವಿ.ವಿ.

೫೨. ಶಿವರುದ್ರಪ್ಪ ಜಿ.ಎಸ್ ; ಅನುರಣನ ಕೃತಿ;

೫೩. ಶ್ರೀಕಂಠಯ್ಯ ತೀ.ನಂ.; ೧೯೪೬; ಹರಿಹರ ಕವಿಯ ನಂಬಿಯಣ್ಣನ ರಗಳೆ;

೫೪. ಶೂದ್ರ ಶ್ರೀನಿವಾಸ(ಸಂ); ೧೯೯೧; ಆಧುನಿಕ ಪ್ರಭುತ್ವದ ಸಂದರ್ಭದಲ್ಲಿ ಹಿಂಸೆ ಮತ್ತು ಪ್ರತಿಹಿಂಸೆ ಸಂಪುಟ–೧೭

೫೫. ಹಳಕಟ್ಟಿ ಫ.ಗು. (ಸಂ); ೧೯೬೬; ದೇವರ ದಾಸಿಮಯ್ಯನ ವಚನಗಳು; ಸಮಾಜ ಪುಸ್ತಕಾಲಯ, ಧಾರವಾಡ.

೫೬. ಹಳಕಟ್ಟಿ ಫ.ಗು.; ೧೯೬೮; ಹರಿಹರನ ರಗಳೆಗಳ ಸಮಗ್ರ ಸಂಪುಟ; ಶಿವಾನುಭವ ಗ್ರಂಥಮಾಲೆ, ಬಿಜಾಪುರ.

೫೭. ಹಿರೇಮಠ ಆರ್.ಸಿ. (ಸಂ); ೧೯೬೫; ಚನ್ನಬಸವಣ್ಣನವರ ವಚನಗಳು; ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ.

೫೮. ಹಿರೇಮಠ ಆರ್.ಸಿ.; ೧೯೬೮; ಸಿದ್ಧರಾಮೇಶ್ವರ ವಚನಗಳು; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೯. ಹಿರೇಮಠ ಆರ್.ಸಿ.; ೧೯೬೮; ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು; ನಾಗನೂರುಮಠ ಬೆಳಗಾವಿ.

೬೦. ಹಿರೇಮಠ ಆರ್.ಸಿ.(ಸಂ); ೧೯೭೧; ಬಸವಪುರಾಣ; ಪ್ರಸಾರಾಂಗ, ಕರ್ನಾಟಕ ವಿ.ವಿ.; ಧಾರವಾಡ.

೬೧. ಹಿರೇಮಠ ಆರ್.ಸಿ.; ೧೯೭೩; ಪುರಾತನರ ರಗಳೆಗಳು; ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ.

೬೨. ಹಿರೇಮಠ ಆರ್.ಸಿ.;(ಸಂ); ೧೯೭೩ ಹರಿಹರದೇವ ಕೃತ ಪುರಾತನರ ರಗಳೆಗಳು; ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ.

೬೩. ಹಿರೇಮಠ ಆರ್.ಸಿ.(ಸಂ); ತ್ರಿಷಷ್ಠಿ ಪುರಾತನರ ಚಾರಿತ್ರ್ಯಂ; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೪. ಹಿರೇಮಲ್ಲೂರು ಈಶ್ವರನ್; ೧೯೭೧; ಹರಿಹರನ ರಗಳೆಗಳು ಒಂದು ಸಂಖ್ಯಾನಿರ್ಣಯ; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೬೫. ಹೆಗಡೆ ಎಲ್.ಆರ್.; ಕಾವ್ಯ ವ್ಯಾಸಂಗ; ಸಮಾಜ ಬುಕ್‌ಡಿಪೋ,

ಧಾರವಾಡ, ಇಂಗ್ಲಿಷ್ ಪುಸ್ತಕಗಳು.

೬೬. ಪರಂಜ್ಯೋತಿ ವಿ; Saiva Siddanta

೬೭. ಭಂಡಾರ್ಕರ್ ಆರ್.ಜಿ.; Vaishnavism Saivisam

೬೮. ಮೀನಾಕ್ಷಿ ಸುಂದರಂ ಟಿ.ಪಿ.; A History of tamil Lit erature; Annamaali University.

೬೯. ಸಂಗಮೇಶ ಸವದತ್ತಿಮಠ; ೧೯೮೮; Hariharas Ragales-a Lingveistic Analy sis; Karnatak University, Dharawad.

ಅನುಬಂಧ

ಪತ್ರಿಕೆಗಳು

೧. ಪುಸ್ತಕಲೋಕ; ಸಂಪುಟ ೨, ಸಂಚಿಕೆ ೩, ಕನ್ನಡ ಪುಸ್ತಕ ಪ್ರಾಧಿಕಾರ.

೨. ಸಾಧನೆ; ಸಂಪುಟ ೫; ಸಂಚಿಕೆ ೪; ಬೆಂಗಳೂರು ವಿವಿ

೩. ಸಾಧನೆ; ಸಂಪುಟ ೬; ಸಂಚಿಕೆ ೪; ಬೆಂಗಳೂರು ವಿವಿ

೪. Philips G.E; 1910, The Christian College Maga zine, Madras.

ಲೇಖನಗಳು:

೧. ಜಯದೇವ ಹು.ಕ.;ಕರ್ನಾಟಕದ ಕೆಲವು ರಾಣಿಯರು ಸಾಧನೆ ಸಂಪುಟ ೫; ಸಂಚಿಕೆ ೪ ಬೆಂಗಳೂರು ವಿವಿ

೨. ರಹಮತ್ ತರೀಕೆರೆ ಮತ್ತು ಕಲಬುರ್ಗಿ ಎಂ.ಎಂ. ಅವರ ಜತೆ ಸಂದರ್ಶನ ;ಪುಸ್ತಕ ಲೋಕ ಸಂಪುಟ ಸಂಪುಟ ೨ ಸಂಚಿಕೆ –೨

೩. ಶಶಿಧರ ಬಿ.; ಕರ್ನಾಟಕ ಮಹಿಳಾ ಶಿಕ್ಷಣ ಪರಂಪರೆ ;ಸಾಧನ ಸಂಪುಟ ೫, ಸಂಚಿಕೆ ೪,

೪. ಶಿವರುದ್ರಪ್ಪ ಜಿ.ಎಸ್ :ಸಾಧನೆ ಸಂಪುಟ ೫. ಸಂಚಿಕೆ ೪ ಬೆಂಗಳೂರು ವಿವಿ

